# ಮಹಿಳೆ ಮತ್ತು ಜಾತಿ ಶ್ರೇಣೀಕರಣ : ಅಂಬೇಡ್ಕರ್ ದೃಷ್ಟಿಕೋನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಹೆಚ್.ಡಿ) ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಯರ್ರಿಸ್ವಾಮಿ ಈ.

ಮಾರ್ಗದರ್ಶಕರು
ಡಾ. ಶೈಲಜ ಇಂ. ಹಿರೇಮಠ
ಪ್ರಾಚಾರ್ಯರು ಮತ್ತು ನಿರ್ದೇಶಕರು
ಮಹಿಳಾ ಅಧ್ಯಯನ ವಿಭಾಗ/ಕೇಂದ್ರ



ಭಾಷಾನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೦೯

# ಮಹಿಳೆ ಮತ್ತು ಜಾತಿ ಶ್ರೇಣೀಕರಣ ; ಅಂಬೇಡ್ಕರ್ ದೃಷ್ಟಿಕೋನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಹೆಚ್.ಡಿ) ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
**ಯರ್ರಿಸ್ವಾಮಿ ಈ.**




ಮಾರ್ಗದರ್ಶಕರು
**ಡಾ. ಶೈಲಜ ಇಂ. ಹಿರೇಮಠ**
ಪ್ರವಾಚಕರು ಮತ್ತು ನಿರ್ದೇಶಕರು
ಮಹಿಳಾ ಅಧ್ಯಯನ ವಿಭಾಗ/ಕೇಂದ್ರ



**ಭಾಷಾನಿಕಾಯ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೦೯

# ಪ್ರಮಾಣ ಪತ್ರ

**"ಮಹಿಳೆ ಮತ್ತು ಜಾತಿ ಶ್ರೇಣೀಕರಣ; ಅಂಬೇಡ್ಕರ್ ದೃಷ್ಟಿಕೋನ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು **ಡಾ. ಶೈಲಜ ಇಂ. ಹಿರೇಮಠ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್. ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಯರ್ರಿಸ್ವಾಮಿ ಈ.)**
ಸಂಶೋಧನಾ ವಿದ್ಯಾರ್ಥಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩೨೭೬

ದಿನಾಂಕ: 7-10-2009
ಸ್ಥಳ: ವಿದ್ಯಾರಣ್ಯ

# ದೃಢೀಕರಣ ಪತ್ರ

ಯರ್ರಿಸ್ವಾಮಿ ಈ. ಇವರು **"ಮಹಿಳೆ ಮತ್ತು ಜಾತಿ ಶ್ರೇಣೀಕರಣ; ಅಂಬೇಡ್ಕರ್ ದೃಷ್ಟಿಕೋನ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಹೆಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ.ಶೈಲಜ. ಇಂ. ಹಿರೇಮಠ)
ಪ್ರವಾಚಕರು ಮತ್ತು ಮಾರ್ಗದರ್ಶಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩ ೨೭೬

ದಿನಾಂಕ:
ಸ್ಥಳ: ವಿದ್ಯಾರಣ್ಯ

# ಪರಿವಿಡಿ

ಅಧ್ಯಾಯ-ಒಂದು

# ಅಧ್ಯಯನ : ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

ಅಧ್ಯಾಯ-ಒಂದು

# ಅಧ್ಯಯನ : ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

## ೧.೧. ಪ್ರಸ್ತಾವನೆ

ಪಸ್ತುತ ಅಧ್ಯಯನವು ಮೂರು ಸಂಗತಿಗಳನ್ನು ಒಳಗೊಂಡಿದೆ– ಅವುಗಳು ಹೀಗಿವೆ: ಮಹಿಳೆಯರು, ಜಾತಿಗಳು ಮತ್ತು ಅಂಬೇಡ್ಕರ್. ಜಾತಿ ಶ್ರೇಣೀಕರಣಕ್ಕನುಗುಣವಾಗಿ ಮಹಿಳಾ ಶ್ರೇಣೀಕರಣವೂ ಇದೆ. ಈ ಅಧ್ಯಯನವು ಅಂಬೇಡ್ಕರ್‌ನ್ನು ಒಬ್ಬ ವ್ಯಕ್ತಿಯಾಗಿ ನೋಡದೆ, ಒಂದು ಚಿಂತನಾಕ್ರಮವಾಗಿ ಪರಿಭಾವಿಸುತ್ತದೆ. ಅಂದರೆ ಭಾರತದ ಮಹಿಳೆಯರನ್ನು ಜಾತಿಗಳನ್ನು ನೋಡುವಲ್ಲಿ ಅಂಬೇಡ್ಕರ್ ಚಿಂತನಾಕ್ರಮ ಕಟ್ಟಿಕೊಡುವ ದೃಷ್ಟಿಕೋನವನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಅಂಶವಾಗಿದೆ.

ಈ ಸಂಶೋಧನೆ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯತೆಗೆ ಸಂಬಂಧಿಸಿದ್ದು ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಮಹಿಳೆ ಮತ್ತು ಅಂಬೇಡ್ಕರನ್ನ ಒಂದು ಪರಿಭಾಷೆ, ಪರಿಕಲ್ಪನೆಯಾಗಿ ನೋಡದೆ, ಒಂದು ಫಿಲಾಸಫಿಯಾಗಿ ನೋಡಲಾಗುತ್ತದೆ. ಅಂದರೆ ಮಹಿಳೆ ಎನ್ನುವುದನ್ನು ಈ ಅಧ್ಯಯನವು ಸ್ತ್ರೀವಾದಿ ತಿಳುವಳಿಕೆ ಹಿನ್ನಲೆಯಲ್ಲಿ ಪರಿಭಾವಿಸುತ್ತದೆ. ಹಾಗೆಯೇ ಅಂಬೇಡ್ಕರ್ ಚಿಂತನಾಕ್ರವನ್ನು ದಲಿತ ಸಂಬಂಧಿ ತಿಳುವಳಿಕೆ ಎಂದು ಭಾವಿಸಿಕೊಳ್ಳಲಾಗುತ್ತದೆ. ಈ ಎರಡು ಫಿಲಾಸಫಿಗಳು ಮೇಲ್ನೋಟಕ್ಕೆ ಸಂಬಂಧವಿಲ್ಲದಂತೆ ಕಂಡರೂ ಅಂತರಾಳದಲ್ಲಿ ಎರಡು 'ತತ್ವಜ್ಞಾನ'ದ ಮುಖ್ಯ ಉದ್ದೇಶ ಪ್ರಪಂಚದ 'ಡಾಮಿನೆಂಟ್' ಸಂಸ್ಕೃತಿಯ ದಾಸ್ಯದ ಪದರುಗಳನ್ನು ಪ್ರತಿಭಟಿಸುವ ಗುಣವನ್ನು ಹೊಂದಿವೆ. ಡಾಮಿನೆಂಟ್ ಸಂಸ್ಕೃತಿ ಎನ್ನುವುದನ್ನು ಮಹಿಳೆ ಸಂದರ್ಭದಲ್ಲಿ ಪುರುಷ ಕೇಂದ್ರಿತ ಸಂಸ್ಕೃತಿ ಮತ್ತು ಭಾರತೀಯ ಸಂದರ್ಭದಲ್ಲಿ

ಮೇಲ್ಜಾತಿ ಕೇಂದ್ರಿತ ಸಂಸ್ಕೃತಿಯಲ್ಲಿನ ಪ್ರಧಾನ ನೆಲೆಗಳೆಂದು ಭಾವಿಸಲಾಗಿದೆ. ಇದು ಅಂಬೇಡ್ಕರ್ ಮತ್ತು ಸ್ತ್ರೀವಾದದ ಒಂದು ಸಾಮಾನ್ಯ ಸಂಗತಿಯಾಗಿದೆ. ಆದರೆ ಭಾರತೀಯ ಸಂದರ್ಭದಲ್ಲಿ ಅಂಬೇಡ್ಕರ್ ಸ್ತ್ರೀವಾದವನ್ನು ಪ್ರಶ್ನಿಸುವ ಹಾಗೆ; ಸ್ತ್ರೀವಾದವು ಸಹ ಅಂಬೇಡ್ಕರ್ ತಿಳುವಳಿಕೆಯನ್ನು ಪ್ರಶ್ನಿಸುತ್ತದೆ ವಿನಃ ನಿರಾಕರಿಸುವುದಿಲ್ಲ. ಬದಲಿಗೆ ಎರಡು ವಾದಗಳು ಹಲವು ತಕರಾರುಗಳ ಮಧ್ಯೆಯೂ ತಮ್ಮ ಜ್ಞಾನವನ್ನು ಈ ಮೂಲಕ ವಿಸ್ತರಿಸಿಕೊಳ್ಳಲು ಬಯಸುತ್ತವೆ. ಆದ್ದರಿಂದ ಇದನ್ನು ದಲಿತ ಸ್ತ್ರೀವಾದ ಎಂಬ ಶೀರ್ಷಿಕೆಯಲ್ಲಿ ಗುರ್ತಿಸಲ್ಪಡಲಾಗುತ್ತಿದೆ. ಅಂಬೇಡ್ಕರ್ ದೃಷ್ಟಿಕೋನ ಸ್ತ್ರೀವಾದಿ ದೃಷ್ಟಿಕೋನವನ್ನು ವಿಸ್ತರಿಸಿದರೆ, ಸ್ತ್ರೀವಾದವು ಸಹ ಅಂಬೇಡ್ಕರ್ ದೃಷ್ಟಿಕೋನವನ್ನು ಒಳಗೊಳ್ಳಲು ಬಯಸುತ್ತದೆ ಮತ್ತು ವಿಸ್ತರಿಸುತ್ತದೆ.

ಸ್ತ್ರೀವಾದ ಅಂಬೇಡ್ಕರ್ ಕಾಲಘಟ್ಟದಲ್ಲಿ ಕಣ್ಣಿಗೆ ಕಾಣಿಸದ ಚಿಗುರುವ ಹಂತದಲ್ಲಿತ್ತು. ಆದರೆ ಇಂದು ಸ್ತ್ರೀವಾದ ತುಂಬಾ ದೊಡ್ಡ ಸಿದ್ಧಾಂತವಾಗಿ ಬೆಳೆದಿದೆ ಮತ್ತು ಬೆಳೆಯುತ್ತಿದೆ. ಹಾಗೆಯೇ ಬೆಳೆಯುತ್ತಿರುವುದನ್ನು ನೋಡಿದರೆ ಈ ಸಿದ್ಧಾಂತಕ್ಕೆ ಜಾಗತಿಕ ಗುಣವಿದೆ ಎಂಬುದು ಸ್ಪಷ್ಟ. ಇಂತಹ ಜಾಗತಿಕ ಗುಣವಿರುವ ಸ್ತ್ರೀವಾದ ಪ್ರಪಂಚದ ಎಲ್ಲಾ ಸಮಾಜಗಳನ್ನು ತರಾಟೆಗೆ ತೆಗೆದುಕೊಳ್ಳುವ ಮೂಲಕ ಮಹಿಳೆಯರನ್ನು ಅಧೀನತೆಗೆ ಒಳಪಡಿಸಿರುವ ಶಕ್ತಿಗಳಿಗೆ ತನ್ನದೇ ಆದ ಪ್ರಶ್ನೆಗಳನ್ನು ಹಾಕುತ್ತಿದೆ. ಅದೇ ಸಮಯಕ್ಕೆ ಆ ಸಮಾಜಗಳಲ್ಲಿನ ಮಹಿಳೆಯರು ಸಹ ಸ್ತ್ರೀವಾದ ಏಕರೂಪತೆಯನ್ನು ನಿರಾಕರಿಸುತ್ತಾ, ತಮ್ಮದೇ ಆದ ಪ್ರಶ್ನೆಗಳನ್ನು ಮುಂದಿಡುತ್ತಿದ್ದಾರೆ. ಆ ಪ್ರಶ್ನೆಗಳು ಸ್ತ್ರೀಯ ಕುರಿತ ಹಲವು ವಾದಗಳಾಗಿ ರೂಪ ಪಡೆಯುತ್ತಿವೆ. ಹಾಗಾಗಿಯೇ ಸ್ತ್ರೀವಾದ ಹಲವು ಕವಲುಗಳಾಗಿ ರೂಪುಗೊಂಡಿದೆ. ಈ ಕವಲುಗಳು ಕಾಲ, ದೇಶ, ಸಮಯಕ್ಕೆ ತಕ್ಕಂತೆ ಭಿನ್ನ ಸ್ವರೂಪ ಪಡೆದಿವೆ. ಅದರಲ್ಲಿ ಜಾತಿ, ವರ್ಗ, ವರ್ಣ, ಪ್ರದೇಶ, ಶಿಕ್ಷಣ ಮುಂತಾದ ಸಾಮಾಜಿಕ ಭಿನ್ನಾಂಶಗಳು ತನ್ನದೇ ಆದ ಪಾತ್ರವನ್ನು ನಿರ್ವಹಿಸುತ್ತವೆ. ಆದರೆ ಸ್ತ್ರೀವಾದದ ಈ ಕವಲುಗಳು ಅಪವಾದಗಳಲ್ಲ ಬದಲಿಗೆ, ವಾಸ್ತವದ ಹಿಂದಿನ ಮಹಿಳಾ ಅಸ್ತಿತ್ವವನ್ನು ಅದೃಶ್ಯಪಡಿಸಿದ ರಾಜಕಾರಣವನ್ನು ಬಯಲುಗೊಳಿಸಲು ರೂಪುಗೊಂಡ ಪರ್ಯಾಯವಾದಗಳಾಗಿವೆ.

ಎಪ್ಪತ್ತರ ದಶಕದಿಂದೀಚೆಗೆ ಭಾರತೀಯ ಸಂದರ್ಭದಲ್ಲಿ ದಲಿತ ಸ್ತ್ರೀವಾದ ಎಂಬ ವಾದ ಹುಟ್ಟಿಕೊಂಡಿದೆ. ಅದಕ್ಕೆ ಅಂಬೇಡ್ಕರ್ ಚಿಂತನಾಕ್ರಮವೇ ಆಧಾರವೆಂಬುದು ಚಳುವಳಿ ಮತ್ತು ಅಧ್ಯಯನಕಾರರ ಅಭಿಪ್ರಾಯ. ಪ್ರಸ್ತುತ ಪ್ರಬಂಧದಲ್ಲಿ ಈ ಎಲ್ಲ ಬೆಳವಣಿಗೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪ್ರಸ್ತುತ ಅಧ್ಯಯನ ಮಹಿಳಾ ಅಧ್ಯಯನ ಭಾಗವಾಗಿ ಕೈಗೊಂಡ ಸಂಶೋಧನೆಯಾಗಿದೆ. ಈ ಅಧ್ಯಯನಕ್ಕೆ ಒಂದು ಭೂಮಿಕೆಯನ್ನು ರೂಪಿಸಿದ್ದು ವಿವಿಧ ಜ್ಞಾನಶಾಖೆಗಳಲ್ಲಿನ ಹೆಣ್ಣಿನ

ಬಗೆಗಿನ ಗ್ರಹಿಕೆ, ವ್ಯಾಖ್ಯಾನಗಳಿಗೆ ಸ್ತ್ರೀವಾದಿಗಳ ಪ್ರತಿಕ್ರಿಯೆಗಳು ಜೊತೆಗೆ ಕೆಲವು ಚಾರಿತ್ರಿಕ ಸಂಗತಿಗಳು ಸಹ ಅಧ್ಯಯನಕ್ಕೆ ಒತ್ತಾಸೆಯಾಗಿ ನಿಂತಿವೆ. ಅವುಗಳೆಂದರೆ:

ಸಂಪ್ರದಾಯಿಕ ಅಧ್ಯಯನಗಳು "ಹೆಣ್ಣನ್ನು ಅಂಡಾಣುಗಳ ಉತ್ಪತ್ತಿಕೇಂದ್ರವೆಂದೂ, ಗಂಡನ್ನು ವೀರ್ಯಾಣು ಉತ್ಪಾದಕವೆಂದು" ಹೇಳುತ್ತಿವೆ. (ಸಿಮೋನ್ ದ ಬೋವಾ: ೨೦೦೭; ಪು, ೧೬-೧೭) ಅಂದರೆ ಹೆಣ್ಣು ಗಂಡುಗಳ ನಡುವೆ ತಾರತಮ್ಯವಿದೆ ಎಂಬುದನ್ನು ಒಪ್ಪಿಕೊಳ್ಳುತ್ತವೆ. ಆದರೆ ಲಿಂಗಗಳಲ್ಲಿ ಜೀವ ಶಕ್ತಿ ಸಮಪ್ರಮಾಣದಲ್ಲಿ ಬಳಕೆಯಾಗುತ್ತದೆ. ಆದ್ದರಿಂದ ಹೆಣ್ಣು ಗಂಡುಗಳ ನಡುವೆ ವಿಕಾಸದ ನೆಲೆಯಲ್ಲಿಯೇ ಒಂದು ನೈಸರ್ಗಿಕ ತಾರತಮ್ಯವಿದೆ ಎಂಬ ವಾದವನ್ನು ನಿರಾಕರಿಸುವ ಸ್ತ್ರೀವಾದಿ ಆದಿ ಚಿಂತಕಿ ಸಿಮೋನ್ ದ ಬೋವಾ "ಹೆಣ್ಣಾಗಿ ಯಾರು ಹುಟ್ಟುವುದಿಲ್ಲ, ಅವಳನ್ನು ಸಮಾಜ ಮತ್ತು ಸಂಸ್ಕೃತಿ ಸಂರಚಿಸುತ್ತದೆ ಅಥವಾ ಕಟ್ಟುತ್ತದೆ (She is not burn but She is made)" ಎನ್ನುತ್ತಾಳೆ. (ಸಿಮೋನ್ ದ ಬೋವಾ: ೨೦೦೭; ಪು, ೩೭-೫೮) ಅಂದರೆ ಹೆಣ್ಣು ಎಂಬ ಪರಿಕಲ್ಪನೆ ಜೈವಿಕವಾಗಿ ಹುಟ್ಟುವುದಿಲ್ಲ. ಸಮಾಜ ಸಂರಚಿಸಿದ ಪರಿಕಲ್ಪನೆ ಅದು. ಹಾಗಾದರೆ ರಚಿಸಲಾಗುವುದು ಎಂದರೇನು? ಉದಾಹರಣೆ: ಒಂದು ಲ್ಯಾಪ್ ಟ್ಯಾಪ್ ಅನ್ನು ನೋಡಿದ ತಕ್ಷಣ ಗೊತ್ತಾಗುತ್ತದೆ. it is made ಅಂತ. ಅದರ ಆಕಾರ, ಬಣ್ಣ, ಅದರ ಒಳಗಿನ ಸಂಗತಿಗಳು ಹೇಗಿರಬೇಕು. ಅದರ ಮೇಲ್ಭಾಗ ಹೇಗಿರಬೇಕು ಅನ್ನುವುದು ಪೂರ್ವ ನಿರ್ಧಾರವಾಗಿರುತ್ತದೆ. ಇದನ್ನು ಹೆಣ್ಣು ರಚಿತಳಾಗುವುದಕ್ಕೆ ಅನ್ವಯಿಸಿದರೆ, ಹೆಣ್ಣಿನ ದೇಹದ ರಚನೆಯು ಸಮಾಜದಲ್ಲಿ ಅವಳ ಬಗ್ಗೆ ಇರುವ ಒಟ್ಟು ಭಾವನೆಗಳನ್ನು, ವಿಚಾರಗಳನ್ನು ನಿಯಂತ್ರಿಸುವುದಿಲ್ಲ. ನಿರ್ದೇಶಿಸುವುದು ಇಲ್ಲ. ಬದಲಾಗಿ ಅವುಗಳನ್ನೆ ಅವಳಿಗೆ ಸಮಾಜವೇ ಕೊಡುತ್ತದೆ. ಅಂದರೆ ಸಮಾಜ, ಕುಟುಂಬ, ಗಂಡಸು, ಅವನೇ ಪಳಗಿಸಿರುವ ಹೆಂಗಸರು ಎಲ್ಲರೂ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಅವಳಿಗೆ ತಿಳಿಸಿಕೊಡುತ್ತಾರೆ. ಹಾಗಾಗಿಯೇ She was made by men ಅವಳನ್ನು ಪುರುಷರು ಸೃಷ್ಟಿಸಿದರು ಎನ್ನುವುದೇ ಈ ವಾದದ ಹಿಂದಿರುವ ಆಲೋಚನೆ.

ಈ ಹಿನ್ನೆಲೆಯಲ್ಲಿ ಹೆಣ್ಣು ವಾಸಿಸುವ ಸಮಾಜ ಮತ್ತು ಸಂಸ್ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸುವ ಬೋವಾ "ಮಾನವ ಜಗತ್ತಿನಲ್ಲಿ ಇರುವುದು ಎಂದರೆ ದೇಹ ಇರಲೇಬೇಕು. ಈ ದೇಹ ಒಂದು ಭೌತಿಕ ವಸ್ತುವಾಗಿರುವಂತೆ ಜಗತ್ತಿಗೆ ಒಂದು ದೃಷ್ಟಿಕೋನವು ಆಗಿದೆ. ಅಂದರೆ ಸಮಾಜದಲ್ಲಿರುವ ವ್ಯಕ್ತಿಗಳು ಕೇವಲ ಜೈವಿಕ ದೇಹಗಳಲ್ಲ, ನಿಷೇಧಗಳಿಗೆ, ನಿಯಮಗಳಿಗೆ ಬದ್ಧವಾದ ದೇಹವಿದು. ಈ ಮೌಲ್ಯಗಳು ಅಂಗರಚನೆಯಿಂದ ನಿರ್ದೇಶಿತವಾದವಲ್ಲ. ವಾಸ್ತವವಾಗಿ ಸಾಮಾಜಿಕ ಅಸ್ತಿತ್ವ ತಂದಿತ್ತ ಮೌಲ್ಯಗಳು. ಅವು ಹೆಣ್ಣಿನ ವಿರುದ್ಧ ಹಿಂಸಾ ಪ್ರವೃತ್ತಿಯನ್ನು ಪ್ರಕಟಿಸುತ್ತವೆ" (ಸಿಮೋನ್ ದ ಬೋವಾ: ೨೦೦೭: ಪು. ೫೫-೬೦) ಎನ್ನುತ್ತಾಳೆ.

ಹಾಗಾಗಿ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆಯ ನೆಲೆಗಳನ್ನು, ಆಕೆಯ ಅಸ್ತಿತ್ವ ಅದೃಶ್ಯಗೊಳಿಸಿದ ಸಂಗತಿಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಆಯಾ ಸಮಾಜ ಮತ್ತು ಸಂಸ್ಕೃತಿಯ ನೆಲೆಯಲ್ಲಿ ಹುಡುಕಾಟ ನಡೆಸಬೇಕಾದ ತುರ್ತನ್ನು ಮಹಿಳಾ ಸಂಬಂಧಿ ಅಧ್ಯಯನಗಳಿಗೆ ತಂದೊಡ್ಡುತ್ತದೆ.

ಈ ಹಿನ್ನೆಲೆಯಲ್ಲಿ ಮಹಿಳೆಯರ ಕುರಿತು ಅಧ್ಯಯನ ಮಾಡಲು ಹೊರಟರೆ ಅನೇಕ ಸಂಗತಿಗಳು ಎದುರಾಗುತ್ತವೆ. ಏಕೆಂದರೆ ಪ್ರಪಂಚದಲ್ಲಿ ಸಮಾಜ, ಜಾತಿ, ವಿವಾಹ, ಕುಟುಂಬಗಳು ಏಕರೂಪವಾಗಿಲ್ಲ. ಅವು ಬಹುರೂಪಗಳನ್ನು ಪಡೆದುಕೊಂಡಿವೆ. ಹಾಗಾದರೆ ಪುರುಷರು ಮತ್ತು ಅವನು ನಿರೂಪಿಸಿದ ಹೆಣ್ಣಿನ ಕುರಿತ ಮೌಲ್ಯಗಳು, ನಿಷೇಧಗಳು, ಏಕರೂಪವಾಗಿಲ್ಲ ಎಂಬುದು ಕೂಡ ಸ್ಪಷ್ಟ. ಹಾಗಾಗಿ ಮಹಿಳೆ ಕುರಿತ ನಿರ್ವಚನಗಳು ಆಕೆ ಬದುಕುವ ಸಾಮಾಜಿಕ ನೆಲೆಗಟ್ಟಿನಲ್ಲಿ ನಡೆಯಬೇಕಾಗಿದೆ. ಈ ಮೂಲಕವೇ ಅವಳ ಶೋಷಣೆಯ ನೆಲೆಗಳನ್ನು ಪತ್ತೆ ಹಚ್ಚಬಹುದು. ಆದ್ದರಿಂದ ಅಧ್ಯಯನಗಳು ಹೆಣ್ಣನ್ನು ಆಯಾ ದೇಶ, ಸಮಯ, ಧರ್ಮ, ಶಿಕ್ಷಣ, ವರ್ಗ, ಜಾತಿ, ಪ್ರದೇಶ, ವಯಸ್ಸು ಇತ್ಯಾದಿ ಸಾಮಾಜಿಕ ಭಿನ್ನತೆಗಳನ್ನು ಪರಿಗಣಿಸಿ ಅರ್ಥೈಸಬೇಕು. ಈ ಮೂಲಕವೇ ಮಹಿಳಾ ಕುರಿತ ವಾದಗಳು ಪ್ರಸ್ತುತ ಗೊಳ್ಳಬೇಕಾಗಿದೆ.

ಈ ತಿಳುವಳಿಕೆಯಿಂದ ಭಾರತೀಯ ಸಮಾಜವು ಮಹಿಳೆಯರ ಬಗ್ಗೆ ಹೊಂದಿರುವ ಧೋರಣೆಗಳನ್ನು ಅಧ್ಯಯನ ಮಾಡಲು ಹೊರಟರೆ ಕೆಲವು ಸಂಗತಿಗಳನ್ನು ಸ್ಪಷ್ಟಪಡಿಸುವುದು ಉಪಯುಕ್ತ. ಏಕೆಂದರೆ ಭಾರತದಲ್ಲಿ ಅಲ್ಪಸಂಖ್ಯಾತರು ಆಗಿರುವುದೇ ಒಂದು ಸಮಸ್ಯೆ. ಇದು ಅಧ್ಯಯನಕ್ಕೆ ಹೊರತಾದರೂ ಮತ್ತೊಂದು ಅಧ್ಯಯನದ ವಿಷಯವಾಗಿದೆ. ಆದರೆ ಅದರಲ್ಲಿ ಅಲ್ಪಸಂಖ್ಯಾತ ಮಹಿಳೆಯರು ಇದ್ದಾರೆ. ಇವರ ಪ್ರಶ್ನೆಗಳು ಗಂಭೀರ ಸಮಸ್ಯೆಗಳಾಗಿವೆ. ಆದರೆ ಭಾರತದಲ್ಲಿ ಮಹಿಳೆಯರು ಅಲ್ಪಸಂಖ್ಯಾತರಲ್ಲ ಎಂಬುದು ಕಂಡು ಬರುತ್ತದೆ. ಅಂದರೆ ಭಾರತದಲ್ಲಿ ಪುರುಷರ ಸರಿಸಮಾನ ಸಂಖ್ಯೆಯಲ್ಲಿ ಮಹಿಳೆಯರಿದ್ದಾರೆ. ಆದರೂ ಭಾರತೀಯ ಸಮಾಜದಲ್ಲಿರುವ ಹಲವು ಭಿನ್ನತೆಯಿಂದ ಮಹಿಳೆಯರು ಅಲ್ಪಸಂಖ್ಯಾತರಾಗಿದ್ದಾರೆ ಎಂಬುವುದನ್ನು ಗಮನಿಸಲೇಬೇಕಾಗಿದೆ. ಆದರೆ ಸ್ತ್ರೀ-ಪುರುಷರಿಗೆ ಸಮಾನ ಸಂಖ್ಯಾಬಲ ಹೊಂದಿದ್ದರೂ, ಮಹಿಳೆಯರು ತಾವು ಹೆಣ್ಣು ಆಗಿರುವ ಕಾರಣಕ್ಕಾಗಿ ಸಮಾಜದಲ್ಲಿ ಪುರುಷರ ಅಧೀನತೆಗೆ ಒಳಪಟ್ಟಿದ್ದಾರೆ. ಅಷ್ಟೆ ಅಲ್ಲ ಅವರಿಂದ ಹಲವು ದೌರ್ಜನ್ಯ, ಆಕ್ರಮಣ, ದಬ್ಬಾಳಿಕೆ, ಶೋಷಣೆಗಳನ್ನು ಎದುರಿಸುತ್ತಿದ್ದಾರೆ. ಜೊತೆಗೆ ಭಾರತೀಯ ಸಮಾಜದ ಬಹಳ ಮುಖ್ಯ ಸಾಮಾಜಿಕ ಘಟಕವಾದ ಜಾತಿ ಪದ್ಧತಿಯಿಂದಾಗಿ ಮಹಿಳೆಯರು 'ದ್ವಿಗುಣ' ಅಧೀನತೆ ಮತ್ತು ಶೋಷಣೆಗಳನ್ನು ಅನುಭವಿಸುತ್ತಿದ್ದಾರೆ. ಅಂದರೆ 'ಮಹಿಳೆ' ಎಂದು ಪುರುಷರಿಂದ

ದಬ್ಬಾಳಿಕೆ ಒಂದು ಕಡೆ. 'ಜಾತಿ' ನೆಲೆಯಲ್ಲಿ ಎಂದು ಮೇಲ್ಜಾತಿ ಪುರುಷ ಮತ್ತು ಆತನ ಸಹವರ್ತಿ ಮಹಿಳೆಯ ಮೇಲೆ ದಬ್ಬಾಳಿಕೆ ಮಾಡುವುದು ಮತ್ತೊಂದು ಕಡೆ. ಹಾಗಾಗಿ ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದಕ್ಕೆ ದಲಿತ ಮಹಿಳೆಯರನ್ನೆ ಒಳಗೊಳ್ಳುವುದು ಒಂದು ಸವಾಲು ಆಗಿದೆ. ಆದ್ದರಿಂದ " ಭಾರತೀಯ ಮಹಿಳೆಯರನ್ನು ಅಧ್ಯಯನ ಮಾಡುವ ಅಧ್ಯಯನಗಳಲ್ಲಿ 'ಮಹಿಳೆ' ಅಂತ ಅಧ್ಯಯನ ಮಾಡುವವು ಕೆಲವು, ಮಹಿಳೆಯರನ್ನು 'ದಲಿತ ಮಹಿಳೆ' ಅಂತ ಅಧ್ಯಯನ ಮಾಡುವವು ಮತ್ತೆ ಕೆಲವು. ಅಂದರೆ 'ಮಹಿಳೆ ದಲಿತಳು', 'ದಲಿತ ಮಹಿಳೆ' ಅಂತ ಪರಿಭಾವಿಸಿಕೊಳ್ಳುತ್ತವೆ." (ಪ್ರೀತಿ ಶುಭಚಂದ್ರ: ೨೦೦೨; ಪು, ೧೩೮)

ಈ ಹಿನ್ನಲೆಯಲ್ಲಿ ಭಾರತೀಯ ಸಂದರ್ಭದಲ್ಲಿನ ರೂಪಗೊಂಡಿರುವ ಫೆಮಿನಿಸ್ಟ್ ವಾದಗಳನ್ನು ಕೂಡ ಸಂದೇಹದಿಂದಲೇ ನೋಡಬೇಕು. ಏಕೆಂದರೆ "ಅವರ ವಾದಗ್ರಸ್ಥ ಗುರಿಗಳಿಂದಾಗಿ ನಿಜವಾದ ಉದ್ದೇಶಗಳು ಮರೆಯಾಗಿ ಹೋಗುತ್ತವೆ. ಆಗ ಹೆಂಗಸಿನ ಪ್ರಶ್ನೆ ತೀರಾ ನಗಣ್ಯವಾಗುತ್ತವೆ"(ಸಿಮೊನ್ ದ ಬೋವಾ: ೨೦೦೭; ಪು, ೪೦) ಹಾಗಾಗಿ ಇಲ್ಲಿ ಮಹಿಳೆಯ ಪ್ರಶ್ನೆಗಳನ್ನು ಪ್ರಸ್ತುತ ಪಡಿಸಲು ಸ್ತ್ರೀವಾದ ತನ್ನ ಮೈಚಾಳಿ ಬಿಟ್ಟು ವಿವಿಧ ರೂಪ ಪಡೆಯಬೇಕಾಗಿದೆ. ಅವುಗಳು ಲಿಂಗ ಸಂಬಂಧಿ ತಿಳುವಳಿಕೆಯನ್ನು ವಿಸ್ತರಿಸಬೇಕೆ ಹೊರತು ಮಹಿಳೆಯರನ್ನು ಇನ್ನೊಂದು ವರ್ಗವಾಗಿ ಪ್ರತ್ಯೇಕಿಸಿ ಆಳುವ ತಂತ್ರಗಳನ್ನು ಮೈಗೂಡಿಸಿಕೊಳ್ಳಬಾರದೆಂಬುದು ನಮ್ಮ ಆಶಯ.

ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದ ಪಡೆದಿರುವ ಬಹುದೊಡ್ಡ ರೂಪವೇ ದಲಿತ ಸ್ತ್ರೀವಾದ. ಇದು ಮಹಿಳೆ ಮತ್ತು ಜಾತಿ ಅಧೀನತೆ ಪ್ರಶ್ನೆಗಳೆರಡನ್ನು ಒಳಗೊಂಡಿದೆ. ಭಾರತೀಯ ಸಮಾಜದಲ್ಲಿ ಮಹಿಳೆ ಒಂದು ಘಟಕವಾದರೆ, ಜಾತಿ ಶ್ರೇಣೀಕರಣ ಮತ್ತೊಂದು ಘಟಕ. ಆದರೆ ಜಾತಿ ಶ್ರೇಣೀಕರಣ ಎಂಬ ಘಟಕದಲ್ಲಿ ಭಾರತೀಯ ಮಹಿಳಾ ಘಟಕ ಸಂಪೂರ್ಣವಾಗಿ ಹಂಚಿಹೋಗಿದೆ. ಹಾಗಾಗಿ ಮಹಿಳೆಯ ಶೋಷಣೆ ನೆಲೆಗಳನ್ನು ಅರ್ಥಮಾಡಿಕೊಳ್ಳಬೇಕೆಂದರೆ ಜಾತಿ ಶ್ರೇಣೀಕರಣ ಸ್ವರೂಪವನ್ನು ಅರ್ಥಮಾಡಿಕೊಳ್ಳಬೇಕು. ಹಾಗಾದಾಗ ಮಾತ್ರವೇ ಜಾತಿಯಲ್ಲಿ ಮಹಿಳಾ ಚರ್ಚೆಗೆ ಮಹತ್ವ ಬರುತ್ತದೆ.

ಜಾತಿ ಶ್ರೇಣೀಕರಣ ಬಹಳ ಸಂಕೀರ್ಣವಾಗಿದೆ. ಅಲ್ಲದೆ ಶ್ರೇಣೀಕರಣ ನೆಲೆಯಲ್ಲಿದೆ. ಈ ಶ್ರೇಣೀಕರಣ ಎನ್ನುವಂತಹದ್ದು ಲಂಬಾತ್ಮಕವಾಗಿದೆ. ಇದನ್ನು ಅರ್ಥಮಾಡಿಕೊಳ್ಳುವುದು ಕಷ್ಟಕರವಾಗಿದೆ. ಆದರೂ ಅದನ್ನು ಸರಳವಾಗಿ ಹೀಗೆ ಹೇಳಬಹುದು. ಮೇಲು-ಕೀಳುಗಳಿದ್ದು ಇವುಗಳು ಯಾವಾಗ ಒಂದಾಗಲೂ ಬಯಸುವುದಿಲ್ಲ. ಈ ಕುರಿತು ಎಂ.ಎನ್. ಶ್ರೀನಿವಾಸರ ಚರ್ಚೆ ಮಹತ್ವದ್ದು. ಇದು ವರ್ಣಸಿದ್ಧಾಂತ ವಿವರಣೆಯ ಮೂಲಕ ಶ್ರೇಣೀಕರಣದ

ಸ್ವರೂಪವನ್ನೆ ಸ್ಪಷ್ಟಪಡಿಸುತ್ತದೆ "ವರ್ಣ ಉಗಮ ಸಿದ್ಧಾಂತ (ವರ್ಣ ವ್ಯವಸ್ಥೆಯ ಗರ್ಭದಿಂದಲೇ ಜಾತಿ ವ್ಯವಸ್ಥೆಯು ಆವಿರ್ಭವಿಸಿತು ಎಂಬ ಹಿನ್ನಲೆಯಲ್ಲಿ ಈ ಸಿದ್ಧಾಂತವನ್ನು ಅರ್ಥೈಸಬೇಕಾಗುವುದು, ಈ ಮೂಲಕ ಶ್ರೇಣೀಕರಣ ಪರಿಕಲ್ಪನೆ ಮನವರಿಕೆಯಾಗುತ್ತದೆ). ಅವರ ಪ್ರಕಾರ ಪ್ರಜಾಪತಿ ಬ್ರಹ್ಮನ ಮಹಾಶರೀರದ ಮುಖದಿಂದ ಬ್ರಾಹ್ಮಣನು, ಬಾಹುಗಳಿಂದ ಕ್ಷತ್ರಿಯನು, ತೊಡೆಗಳಿಂದ ವೈಶ್ಯನು ಮತ್ತು ಪಾದಗಳಿಂದ ಶೂದ್ರನೂ ಉತ್ಪತ್ತಿಯಾಗಿರುತ್ತಾರೆ ಇದನ್ನು ಗಮನಿಸಿದರೆ ವರ್ಣಗಳು ಶ್ರಮವಿಭಜನೆಯ ತತ್ವವನ್ನು ಆಧಾರಿಸಿ ರೂಪಗೊಂಡಿವೆ. ಅದರ ಅನುಸಾರ ಬೇರೆ ಬೇರೆ ವರ್ಣಗಳಿಗೆ ಕಾರ್ಯಗಳನ್ನು, ವೃತ್ತಿಗಳಿಗೆ ನಿಗದಿ ಮಾಡಲಾಗಿದೆ. ಆದ್ದರಿಂದ ಪ್ರತಿಯೊಂದು ವರ್ಣದ ಸ್ಥಾನ ಯಾವುದು ಎಂಬುದು ನಿಚ್ಚಳವಾಗಿ ನಿಗದಿಯಾಗಿದೆ. ಹಾಗಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ಅನುಕ್ರಮದಂತೆಯೇ ಈ ವರ್ಣಗಳನ್ನು ಶ್ರೇಣೀಕರಣಗೊಳಿಸಲಾಗಿದೆ."(ಎಂ.ಎನ್.ಶ್ರೀನಿವಾಸ; ಉದೃತ; ಶಂಕರರಾವ್: ೨೦೦೪; ಪು, ೪೦) ಈ ಕುರಿತ ಅಂಬೇಡ್ಕರ್ ವಿಶ್ಲೇಷಣೆ ಅದರ ಸಾಮಾಜಿಕ ಜೀವಂತಿಕೆಯನ್ನು ಪ್ರತಿಬಿಂಬಿಸುತ್ತದೆ. "ಶೂದ್ರಸಮಸ್ಯೆ...... ಹಿಂದೂ ಆರ್ಯರ ಸಾಮಾಜಿಕ ವ್ಯವಸ್ಥೆ ಚಾತುರ್ವರ್ಣ ತತ್ವದ ಮೇಲೆ ಆಧಾರಿತವಾಗಿದೆ. ಚಾತುರ್ವರ್ಣ ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಸಾಮಾಜಿಕ ವಿಭಜನೆ ಎನ್ನುವ ಸಾಮಾನ್ಯ ಅಭಿಪ್ರಾಯ ಇದೆ. ಇದು ಶೂದ್ರ ಸಮಸ್ಯೆಯ ನಿಜವಾದ ಸ್ವರೂಪವನ್ನಾಗಲಿ ಅಥವಾ ಅದರ ವಿಸ್ತಾರವನ್ನಾಗಲಿ ಸೂಚಿಸುವುದಿಲ್ಲ. ಸಮಾಜವನ್ನು ಕೇವಲ ನಾಲ್ಕು ವರ್ಣಗಳನ್ನಾಗಿ ವಿಭಜಿಸುವುದೇ ಆಗಿದ್ದರೆ, ಚಾತುರ್ವರ್ಣ ತೀರಾ ಅಮಾಯಕ ತತ್ವವಾಗಿ ಬಿಡುತ್ತಿತ್ತು. ಆದ್ದರಿಂದ ಚಾತುರ್ವರ್ಣ ತತ್ವ ಇದಕ್ಕಿಂತಲೂ ಹೆಚ್ಚಿನದನ್ನು ಒಳಗೊಂಡಿದೆ. ಸಮಾಜವನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸುವುದರ ಜೊತೆಗೆ ಈ ನಾಲ್ಕು ವರ್ಣಗಳ ನಡುವಣ ಸಾಂಘಿಕ ಜೀವನದ ನೀತಿಯನ್ನು ನಿರ್ಧರಿಸಲು ಶ್ರೇಣೀಕೃತ ಅಸಮಾನತೆಯನ್ನೆ ತತ್ವವಾಗಿ ಆಧಾರ ಮಾಡುವ ತನಕ ಈ ತತ್ವ ಹೋಗುತ್ತದೆ ಮತ್ತು ಶ್ರೇಣೀಕೃತ ಅಸಮಾನತೆಯ ಈ ವ್ಯವಸ್ಥೆ ಕೇವಲ ಕಾಲ್ಪನಿಕವಲ್ಲ. ಅದು ಶಾಸನೀಯ, ದಂಡನೀಯ. ಚತುರ್ವರ್ಣ ಪದ್ಧತಿಯಲ್ಲಿ ಶೂದ್ರನನ್ನು ಕೆಳದರ್ಜೆಯಲ್ಲಿ ಇಡುವುದಷ್ಟೆ ಅಲ್ಲದೆ ಧರ್ಮ ನಿರ್ಧರಿಸಿರುವ ಸ್ಥಿತಿಯಿಂದ ಮೇಲೇಳದಂತೆ ಅವರನ್ನು ತಡೆಗಟ್ಟಲೂ ಅಸಂಖ್ಯಾತ ಅಪಾರಾಧಗಳಿಗೂ ಅನರ್ಹತೆಗಳಿಗೂ ಅವರನ್ನು ಅಧೀನಗೊಳಿಸಲಾಗಿದೆ"(ಡಾ.ಬಾ.ಸಾ.ದ.ಬ.ಭಾ: ೧೯೯೮; ಸ-೭; ಪು, ೨) ಇದು ವರ್ಣಗಳ ನಡುವೆ ಲಂಬಾತ್ಮಕ ಅಂತರವನ್ನು ಕಾಯ್ದಿರಿಸಿರುವುದನ್ನು ಖಚಿತಪಡಿಸುತ್ತದೆ.

ಈ ಕಾರಣದಿಂದಾಗಿಯೇ ಭಾರತೀಯ ಸಮಾಜದ ಜಾತಿಪದ್ಧತಿಯಲ್ಲಿ ಶ್ರೇಣೀಕರಣ ಉಳಿದುಕೊಂಡಿದೆ ಮತ್ತು ಚಾಲ್ತಿಯಲ್ಲಿದೆ. ಪ್ರತಿಯೊಂದು ಜಾತಿಯೂ ಯಾವ ಸ್ಥಾನ ಪಡೆದಿರುವುದು ಎಂಬುದು ಸ್ಪಷ್ಟವಾಗಿರುವುದಿಲ್ಲ. ಆದರೆ ದೇಶದ ಹೆಚ್ಚಿನ ಎಲ್ಲಾ ಕಡೆಗಳಲ್ಲಿ

ಬ್ರಾಹ್ಮಣರಿಗೆ ಶ್ರೇಣೀಕರಣದಲ್ಲಿ ಉನ್ನತ ಸ್ಥಾನವನ್ನು ಹಾಗೆಯೇ ಅಸ್ಪೃಶ್ಯರಿಗೆ ಅತ್ಯಂತ ಕೆಳಗಿನ ಸ್ಥಾನ ನಿಗದಿಯಾಗಿರುವುದು ಕಂಡುಬರುತ್ತದೆ. ಆದರೆ ಈ ಎರಡು ಜಾತಿ ಸಮೂಹಗಳ ನಡುವಿನ ಸ್ಥಾನಗಳನ್ನು ಆಕ್ರಮಿಸಿಕೊಳ್ಳುವ ಮಧ್ಯಂತರ ಜಾತಿಗಳಲ್ಲಿ ಪ್ರತಿಯೊಂದು ಜಾತಿಯ ನಿಶ್ಚಿತ ಸ್ಥಾನ ಯಾವುದು? ಎಂಬ ಬಗ್ಗೆ ಸ್ಪಷ್ಟತೆಯ ಬದಲು ಯಾವಾಗಲೂ ವಿವಾದ ಇರುತ್ತದೆ. ಈ ಕುರಿತು ಅಧ್ಯಯನ ನಡೆಯಬೇಕಾಗಿದೆ. ಆದರೆ ಪ್ರತಿಯೊಂದು ಜಾತಿಯು ಸಹ ತಮಗೆ ಸರಿ ಸಮಾನವಾದ ಸ್ಥಾನಗಳುಳ್ಳ ಜಾತಿಗಳಿಗಿಂತಲೂ ತಾನು ಶ್ರೇಷ್ಠವೆಂದು ಹಾಗೆಯೇ ತನಗಿಂತಲೂ ಶ್ರೇಷ್ಠವೆಂದು ಪರಿಗಣಿತವಾಗಿರುವ ಜಾತಿಗೆ ತನ್ನ ಜಾತಿ ಸಮಾನವಾದುದು ಎಂದು ಹೆಣ್ಣು ಗಂಡು ಹೇಳಿಕೊಳ್ಳುವುದು ಸಾಮಾನ್ಯವಾಗಿದೆ. ಇದಕ್ಕೆ ತಾನು ಮುಂದು ನಾನು ಮುಂದು ಎಂದು ಮೀಸಲಾತಿಗಾಗಿ ನಡೆಸುತ್ತಿರುವ ಜಾತಿ ಹೋರಾಟಗಳೇ ಸಾಕ್ಷಿ.

ಹಾಗಾದರೆ ಜಾತಿ ಶ್ರೇಣೀಕರಣ ಒಂದು ಸಮಸ್ಯೆ ಅಂತ ಪರಿಗಣಿತವಾದ ಸಂದರ್ಭ ಯಾವುದು? ಅಂದರೆ ಬಹು ವರ್ಷಗಳಿಂದ ಭಾರತೀಯರಲ್ಲಿ ಬಳಕೆಯಲ್ಲಿರುವ ಜಾತಿ ಪದ್ಧತಿಯು ಭಾರತದಲ್ಲಿನ ಬ್ರಿಟಿಷರ ಆಳ್ವಿಕೆಯಿಂದ ಒಂದು ಸಮಸ್ಯೆಯಾಗಿ ಗಮನ ಸೆಳೆಯಿತು. ಆಗ ಬ್ರಿಟಿಷ್‌ರು ಭಾರತದ ಆಳ್ವಿಕೆಯನ್ನು ಸಮರ್ಥಿಸಲು ಮುಂದಿಟ್ಟ ಚರ್ಚೆಗಳಲ್ಲಿ ಮಹಿಳೆಯರ ಸ್ಥಿತಿಗತಿ ಮತ್ತು ಅಸ್ಪೃಶ್ಯರ ಸ್ಥಿತಿಗಳು ಮುಖ್ಯವಾಗಿದ್ದವು. ನಂತರ ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಅಸ್ಪೃಶ್ಯ ಜಾತಿಗಳಿಂದ ಜಾತಿವ್ಯವಸ್ಥೆಯ ವಿರುದ್ಧ ಹೋರಾಟಗಳು ಪ್ರಖರವಾಗ ತೊಡಗಿದವು. ಈ ಕುರಿತಾದ ಚಳುವಳಿಗೆ ಒಂದು ಚೌಕಟ್ಟನ್ನು ರೂಪಿಸಿದವರು ಹಲವರು. ಅಂದರೆ ಜ್ಯೋತಿ ಬಾ ಫುಲೆ, ಪೆರಿಯಾರ ರಾಮಸ್ವಾಮಿ ನಾಯ್ಕರ್, ಅಂಬೇಡ್ಕರ್ ಮತ್ತು ಗಾಂಧೀಜಿ. ಅವರಲ್ಲಿ ಗಮನಿಸಲೇಬೇಕಾದ ವ್ಯಕ್ತಿ ಅಂಬೇಡ್ಕರ್. ಇವರು ಜಾತಿವ್ಯವಸ್ಥೆಯ ಕುರಿತು ತಮ್ಮದೇ ಆದ ದೃಷ್ಟಿಕೋನವನ್ನು ಪ್ರಸ್ತುತ ಪಡಿಸಿದರು. ಅದು ಅವರ ಅಧ್ಯಯನಗಳಲ್ಲಿ, ಭಾಷಣಗಳಲ್ಲಿ ವ್ಯಕ್ತವಾಗಿರುವುದು ಕಂಡುಬರುವುದು. ಈ ಮೂಲಕ ಅವರು ಜಾತಿ ಕುರಿತು ಒಂದು ಚಿಂತನಾಕ್ರಮ ಕಟ್ಟಿದರು. ಅಲ್ಲದೆ ಅದರ ವಿರುದ್ಧ ಅನೇಕ ಚಳುವಳಿಯನ್ನು ರೂಪಿಸಿದರು. ಇದರ ಫಲವಾಗಿ ಸ್ವತಂತ್ರ ಭಾರತದಲ್ಲಿ ದಲಿತರಿಗೆ ಮೀಸಲಾತಿ ದೊರೆಯಿತು ಎಂಬ ನಂಬಿಕೆ ಬಲವಾಗಿದೆ.

ಹೀಗೆ ಭಾರತದಲ್ಲಿನ ಅಸ್ಪೃಶ್ಯ ಕುರಿತು ಅಂಬೇಡ್ಕರ್ ಚಿಂತನೆಗಳು ಇವತ್ತಿಗೂ ಚರ್ಚೆಗೊಳ್ಳುತ್ತವೆ. ಈ ಕುರಿತು ಬಿ.ಯೂ. ಸುಮಾ ಹೇಳಿಕೆಮನಾರ್ಹವಾದುದು. "ವಾಸ್ತವವಾಗಿ ಅಂಬೇಡ್ಕರ್ ಬದುಕಿನ ಕಾಲಕ್ಕಿಂತ ಹೆಚ್ಚಾಗಿ ಅವರ ನಿಧನ ನಂತರವೇ ಅವರ ವ್ಯಕ್ತಿತ್ವ ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿದೆ."(ಬಿ.ಯು.ಸುಮಾ: ೨೦೦೮; ಪು. ೩೬) "Ambedkar's

image is grow day by day into magnitude prophetic personality"(Kancha Illaiah: 2005; April-14) ಎಂಬ ಕಾಂಚಐಲ್ಯಯ ಅವರ ಹೇಳಿಕೆ ಅಂಬೇಡ್ಕರ್ ಚಿಂತನೆಗಳ ಪ್ರಸ್ತುತತೆಯನ್ನು ಹೇಳುತ್ತದೆ.

ಹಾಗಾದರೆ ಮಹಿಳೆ ಕುರಿತ ಅಂಬೇಡ್ಕರ್‌ರ ಚಿಂತನೆಗಳಾವುವು? ಸ್ತ್ರೀವಾದದಲ್ಲಿ ಎಲ್ಲಿ ಅಂಬೇಡ್ಕರ್ ಪ್ರಸ್ತುತತೆ ಪಡೆಯುತ್ತಾರೆ. ಈ ಅಧ್ಯಯನಕ್ಕಿರುವ ಒತ್ತಾಸೆಗಳು ಯಾವುವು ಎನ್ನುವ ಪ್ರಶ್ನೆಗಳು ವಿವರಣೆಯನ್ನು ಬಯಸುತ್ತವೆ.

ಸ್ತ್ರೀವಾದದ ಕೆಲವು ವಾದಗಳು ಮತ್ತು ಭಾರತದಲ್ಲಿ ದಲಿತ ಸ್ತ್ರೀವಾದದ ಅಗತ್ಯತೆಗೆ ಕಾರಣವಾದ ಕೆಲವು ಘಟನೆಗಳು ಅಂಬೇಡ್ಕರನ್ನು ಅಧ್ಯಯನಕ್ಕೆ ಒಳಪಡಿಸಲು ಒತ್ತಾಯಿಸುತ್ತಿವೆ.

ಸ್ತ್ರೀವಾದವನ್ನು ತರ್ಕಬದ್ಧವಾಗಿ ನಿರೂಪಿಸಿ, ಅದು ಒಂದು ಫಿಲಾಸಫಿಯಾಗಿ ಬೆಳೆಸುವಲ್ಲಿ ಅನೇಕ ಅಧ್ಯಯನಕಾರರ ಪರಿಶ್ರಮವಿದೆ. ಅದರಲ್ಲಿಯೂ ಈ ತರಹದ ಅಧ್ಯಯನಗಳು ಗಮನಿಸಬೇಕಾದವರೆಂದರೆ ೧೯ನೇ ಶತಮಾನದಲ್ಲಿ ಪಾಶ್ಚಿಮಾತ್ಯದಲ್ಲಿ ಸ್ತ್ರೀವಾದಕ್ಕೆ ವಿಭಿನ್ನ ಆಯಾಮ ನೀಡಿ ಪ್ರಧಾನತೆಯ ಕಾರಣದಿಂದಾಗಿ ಅದೃಶ್ಯವಾದ ಪೌಲಿನಾ ದಾ ಬಾರ್ರ್ ಎಂಬ ಫೆಮಿನಿಸ್ಟರ ಹೇಳಿಕೆ ಗಮನಾರ್ಹವಾದುದು. "ಹೆಂಗಸರ ಬಗ್ಗೆ ಗಂಡಸರು ಬರೆದಿರುವುದನ್ನೆಲ್ಲ ಸಂದೇಹದಿಂದಲೇ ನೋಡಬೇಕು. ಏಕೆಂದರೆ ಗಂಡಸರು ಏಕಕಾಲಕ್ಕೆ ಪ್ರತಿವಾದಿಯಾಗಿರುವಂತೆ ನ್ಯಾಯಾಧೀಶರು ಆಗಿರುತ್ತಾರೆ."(ಪೌಲಿನಾ ದಾ ಬಾರ್ರಾ, ಉದ್ಧೃತ: ಸಿಮೋನ್ ದ ಬೋವಾ: ೨೦೦೭; ಪು, ೩೪) ಈ ಹೇಳಿಕೆ ಅಂಬೇಡ್ಕರ್‌ರನ್ನು ಒಳಗೊಂಡು ಮಹಿಳೆಯರ ಕುರಿತ ಎಲ್ಲ ಪುರುಷರ ಬರಹಗಳನ್ನು ಮರುಪರಿಶೀಲನೆಗೆ ಅಥವಾ ಅಧ್ಯಯನಕ್ಕೆ ಒತ್ತಾಯಿಸಿತು. ಅಂದರೆ ಇದನ್ನು ಅಂಬೇಡ್ಕರ್‌ರಿಗೆ ಅನ್ವಯಿಸಿದರೆ, ಅಂಬೇಡ್ಕರ್ ಪುರುಷರಾಗಿರುವ ಕಾರಣಕ್ಕಾಗಿ ಅವರ ಆಲೋಚನಾ ಕ್ರಮದಲ್ಲಿ ಲಿಂಗ ಅಸೂಕ್ಷ್ಮತೆಗಳಿರುತ್ತವೆ ಎನ್ನುವುದೇ ಇದರ ಹಿಂದಿರುವ ಐಡಿಯಾಲಜಿ. ಇದು ಮಹಿಳಾ ಅಧ್ಯಯನ ಪ್ರಶ್ನೆ ಆಗಿರುವುದರಿಂದ ಅಂಬೇಡ್ಕರ್‌ರನ್ನ ಸ್ತ್ರೀವಾದಿ ಅಧ್ಯಯನಕ್ಕೆ ಒಳಪಡಿಸಬೇಕಾದ ಅಗತ್ಯತೆಯನ್ನು ತೋರಿಸಿದವು.

ಇನ್ನೂ ಎರಡನೆಯದು "೧೯೮೦ರ ದಶಕದಲ್ಲಿ ವ್ಹಿ.ಪಿ.ಸಿಂಗ್ ಸರ್ಕಾರಕ್ಕೆ ಭಾರತದ ಜಾತಿಗಳ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡಿದ ಮಂಡಲ್ ಸಮಿತಿ ಭಾರತ ಸರ್ಕಾರಕ್ಕೆ ವರದಿಯೊಂದನ್ನು ಸಲ್ಲಿಸಿತು." (ಡೊಮಿನಿಕ್: ೨೦೦೭; ಪು, ೯೭) ಇದನ್ನು ಪರಿಶೀಲಿಸಿದ ಸರ್ಕಾರವು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳಿಗೆ ಶೇ. ೨೭% ರಷ್ಟು ಮೀಸಲಾತಿಯನ್ನು ಕೇಂದ್ರ ಸರ್ಕಾರದ ಹುದ್ದೆಗಳಲ್ಲಿ ಮತ್ತು ಸಾರ್ವಜನಿಕ ಸಂಸ್ಥೆಗಳಲ್ಲಿ ನೀಡುವ ನಿರ್ಧಾರವನ್ನು ಪ್ರಕಟಿಸಿತು. ಇದನ್ನು ವಿರೋಧಿಸಿದ ಮಧ್ಯಮ ಮತ್ತು ಮೇಲ್ಮಧ್ಯಮ ವರ್ಗದವರು ತೀವ್ರತರಹದ ಹೋರಾಟವನ್ನೆ ನಡೆಸಿದರು. ಇದು ಉತ್ತರಭಾರತದಲ್ಲಿ ಉಗ್ರ

ಸ್ವರೂಪವನ್ನು ಪಡೆದುಕೊಂಡಿತು. ಈ ಮಂಡಲ್‌ವರದಿ ವಿರೋಧ ಹೋರಾಟವು ಮಹಿಳೆಯರ ಸಹಭಾಗಿತ್ವವನ್ನು ಕೂಡ ಹೊಂದಿತ್ತು. ಅದರಲ್ಲಿ "ಕಾಲೇಜು ಹುಡುಗಿಯರು ಸರ್ಕಾರಿನೌಕರಿಯ ಗಂಡನನ್ನು ಹೊಂದುವ ತಮ್ಮ ಹಕ್ಕನ್ನು ಈ ಸಂದರ್ಭದಲ್ಲಿ ಘೋಷಿಸಿದರು. ಉನ್ನತ ಸರ್ಕಾರಿ ಅಧಿಕಾರಿಗಳ ಪತ್ನಿಯರು ತಮ್ಮ ಮಕ್ಕಳು ಹಾಗೂ ಗಂಡಂದಿರ ಭವಿಷ್ಯಕ್ಕೆ ಮಾರಕವಾಗುತ್ತದೆಂಬ ಕಾರಣಕ್ಕಾಗಿ ಈ ಮಂಡಲ್‌ವರದಿಯನ್ನು ವಿರೋಧಿಸುವ ಹೋರಾಟದಲ್ಲಿ ಸಕ್ರೀಯವಾಗಿ ತೊಡಗಿಸಿಕೊಂಡರು." (ಪ್ರೀತಿಶುಭಚಂದ್ರ; ೨೦೦೨; ಪು, ೧೩೮-೧೪೦) ಈ ಘಟನೆಯು ಹಿಂದುಳಿದವರ ಮತ್ತು ಸವರ್ಣೀಯರ ನಡುವೆ ನಡೆಯಿತು. ಆದರೂ ದಲಿತರು ಮತ್ತು ಮಹಿಳೆಯರಲ್ಲಿ ಮೀಸಲಾತಿ ಜಾರಿಗೆ ಅಡ್ಡಿಪಡಿಸಬಹುದೆಂಬ ಸಂದೇಹ ಶುರುವಾಯಿತು. ಅದು ಸ್ತ್ರೀವಾದಿ ಅಧ್ಯಯನ ಮತ್ತು ಚಳುವಳಿಗಳಲ್ಲಿ ಪಾಲ್ಗೊಳ್ಳುತ್ತಿರುವವರನ್ನು, 'ಅತಿ ಸೂಕ್ಷ್ಮ'ಗೊಳಿಸಿತು. ಪರಿಣಾಮ ೭೦ರ ದಶಕದ ವರೆಗೆ 'ಸೋದರಿಯರು' (ಪ್ರೀತಿಶುಭಚಂದ್ರ; ೨೦೦೨; ಪು, ೧೨೯-೧೩೮-೧೪೦) ಎಂಬ ಪರಿಕಲ್ಪನೆ ಹಿನ್ನೆಲೆಯಲ್ಲಿ ಒಂದೇ ವೇದಿಕೆಯಲ್ಲಿ ಕೆಲಸ ಮಾಡುತ್ತಿದ್ದ ಎಲ್ಲ ಜಾತಿ, ವರ್ಣ, ವರ್ಗದ ಮಹಿಳೆಯರು ನಂತರ ಪ್ರತ್ಯೇಕ ವೇದಿಕೆಯಲ್ಲಿ ಗುರ್ತಿಸಿಕೊಂಡು ಕೆಲಸ ಮಾಡತೊಡಗಿದರು. ಆಗ ದಲಿತ ಮಹಿಳೆಯರು ದಲಿತ ಸ್ತ್ರೀವಾದ ಎಂಬ ಚಿಂತನೆಯನ್ನು ಪ್ರಸ್ತುತ ಪಡಿಸಿದರು. ಆಗ ದಲಿತ ಮಹಿಳೆಯರ ಚರ್ಚೆಗಳಲ್ಲಿ ಅಂಬೇಡ್ಕರ್ ಹೆಚ್ಚು ಪ್ರಸ್ತುತ ಪಡೆದರು. ಅಲ್ಲದೆ ಅವರು ದಲಿತ ಸ್ತ್ರೀವಾದದಲ್ಲಿ ಅಂಬೇಡ್ಕರ್ ಆಲೋಚನೆಗಳನ್ನು ಒಂದು ಫಿಲಾಸಫಿಯಾಗಿ ಮಂಡಿಸಲು ಶುರು ಮಾಡಿದರು. ಆದರೆ ಅಂಬೇಡ್ಕರ್ ಚಿಂತನೆಗಳಲ್ಲಿ ಮಹಿಳಾ ಧೋರಣೆಯ ಪ್ರಶ್ನೆಗಳು ಹಾಗೇ ಉಳಿದುಬಿಟ್ಟವು. ರಾಷ್ಟ್ರೀಯ ಚಳುವಳಿಗಳು ಪ್ರಧಾನತೆಯನ್ನು ಪಡೆದುಕೊಂಡ ಕಾಲಘಟ್ಟದಲ್ಲಿ ಬರುವ ಅಂಬೇಡ್ಕರ್ ಮೂಲತಃ ಜಾತಿ ಚಿಂತಕರಾಗಿಯೇ ಪ್ರಸ್ತುತ ಆಗುತ್ತಾರೆ. ಇದನ್ನು ಅವರ "ಜೀವನಚರಿತ್ರೆ" (ಗಮನಿಸಿ, ವಸಂತ ಮೂನ್: ೨೦೦೨)ಯಲ್ಲಿ ದಾಖಲಾದ ವಿವಿಧ ಸನ್ನಿವೇಶಗಳು ಸಾಬೀತುಪಡಿಸುತ್ತವೆ. ಆದ್ದರಿಂದ ಅಂಬೇಡ್ಕರ್ ಮೂಲತಃ ಜಾತಿ ಚಿಂತಕರೇ. ಆಗಂತ, ಅವರು ಮಹಿಳಾ ವಿಷಯಗಳನ್ನು ಕುರಿತು ಆಲೋಚಿಸಲಿಲ್ಲ ಅಂತಲ್ಲ. ಆಲೋಚಿಸಿದರು. ಅವುಗಳ ಕುರಿತು ಈ ಅಧ್ಯಯನ ನಡೆದಿರುವುದು. ಅದರಲ್ಲಿಯೂ ಮಹಿಳಾ ವಿಷಯ ಕುರಿತ ಅಂಬೇಡ್ಕರ್ ಆಲೋಚನೆ ಕ್ರಮ ಈ ಅಧ್ಯಯನ ವಸ್ತುವಾಗಿದೆ.

### ಪ್ರಾಕಲ್ಪನೆ:

ಈ ಹಿನ್ನೆಲೆಯಲ್ಲಿ ಅಧ್ಯಯನದ ಪ್ರಾಕಲ್ಪನೆ ಎಂದರೆ ಲಿಂಗಸಂಬಂಧಿ ಅಧ್ಯಯನಗಳಲ್ಲಿ ಏಕರೂಪ ಮಾದರಿ ಒಂದಿದೆ. ಅದರ ಪ್ರಕಾರ ಜಗತ್ತಿನಲ್ಲಿರುವ ಮಹಿಳೆಯರೆಲ್ಲಾ ಒಂದು ಜಾತಿ. ಆದರೆ ಭಾರತೀಯ ಸಂದರ್ಭದಲ್ಲಿ ಜಾತಿವ್ಯವಸ್ಥೆಯೇ ಭಿನ್ನವಾಗಿದೆ. ಅಂದರೆ

ಜಾತಿವ್ಯವಸ್ಥೆಯಲ್ಲಿ ಭಾರತೀಯ ಸ್ತ್ರೀ ಪುರುಷ ಸಮುದಾಯ ಹಂಚಿಹೋಗಿದೆ. ಹಾಗಾದರೆ ಮೂಲತಃ ಜಾತಿ ಚಿಂತಕರಾದ ಅಂಬೇಡ್ಕರ್ ಭಾರತೀಯರ ಮಹಿಳಾ ಸಮುದಾಯವನ್ನೆ ಒಂದು ಜಾತಿಯೆಂದು ಇಡಿಯಾಗಿ ಗುರುತಿಸುತ್ತಾರಾ? ಅಥವಾ ಜಾತಿಯಲ್ಲಿರುವ ಮಹಿಳೆಯರನ್ನು ಕುರಿತು ಏನಾದರೂ ವಿವರಿಸುತ್ತಾರಾ? ಅದರಲ್ಲಿ ಅವರ ಚಿಂತನಾಕ್ರಮದ ಧೋರಣೆ ಎಂತಹದ್ದು? ಅದು ಮಹಿಳಾ ಪರವಾಗಿಯೋ ಅಥವಾ ಲಿಂಗ ಅಸೂಕ್ಷ್ಮತೆಗಳನ್ನು ಏನಾದರೂ ಹೊಂದಿದೆಯೇ ಎಂಬುದನ್ನು ತಿಳಿದುಕೊಳ್ಳುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಸಾಗಿದೆ. ಈ ಹಿನ್ನೆಲೆಯಲ್ಲಿ ಉದ್ದೇಶಗಳನ್ನು ಹಾಕಿಕೊಂಡಿದ್ದು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಒಂದು : ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಅಂಬೇಡ್ಕರ್ ಬರುತ್ತಾರೆ. ಆಗ ಮಹಿಳೆಯರ ಯಾವ ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. ಅವು ಯಾವ ಚೌಕಟ್ಟಿನಲ್ಲಿ ಪ್ರಸ್ತುತ ಪಡೆದಿವೆ. ಅದರಲ್ಲಿ ಮಹಿಳೆಯರ ಕುರಿತ ಯಾವ ವಿಷಯಗಳು ಹೆಚ್ಚು ಚರ್ಚೆ ಕೇಂದ್ರವಾದವು. ಎಂಬುದನ್ನು ಗುರ್ತಿಸುವುದು ಅಧ್ಯಯನದ ಬಹುಮುಖ್ಯವಾದ ಅಂಶವಾಗಿದೆ. ಮಹಿಳೆ ಮತ್ತು ಜಾತಿ ಶ್ರೇಣೀಕರಣ ಪರಿಕಲ್ಪನೆಗಳನ್ನು ಪರಿಭಾವಿಸುವುದರ ಜೊತೆಗೆ, ಅವುಗಳನ್ನು ಕುರಿತು ಅಂಬೇಡ್ಕರ್ ಪೂರ್ವ, ಸಮಕಾಲೀನ ಸಾಮಾಜಿಕ ಸಂದರ್ಭದ ಚರ್ಚೆಗಳು, ಮುಖ್ಯ ವಿಷಯಗಳನ್ನು ಪ್ರಸ್ತುತ ಪಡಿಸುವ ಉದ್ದೇಶವಿದೆ.

ಎರಡು : ಅಂಬೇಡ್ಕರ್ ನಮ್ಮ ಸಮಾಜದ ಮಹಿಳೆಯರ ಯಾವ ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. ಅದರಲ್ಲಿ ಅವರು 'ಯಾವ ಮಹಿಳೆಯರ' 'ಮಹಿಳೆಯರ ಯಾವ ಪ್ರಶ್ನೆಗಳನ್ನು ಹಾಕಿಕೊಳ್ಳುವ ಮೂಲಕ ಮಹಿಳೆ ವಿಷಯಗಳನ್ನು ಜಾತಿ ನೆಲೆಯಲ್ಲಿ ವಿಸ್ತರಿಸುವುದಕ್ಕೆ ಪ್ರಯತ್ನಿಸಿದ್ದರು ಎಂಬುದನ್ನು ಚರ್ಚಿಸಲಾಗಿದೆ. ಅಂದರೆ (ಭಾರತದಲ್ಲಿ ಮಹಿಳೆ ಮತ್ತು ಜಾತಿ ಅಸಮಾನತೆಯ ವಿಷಯಗಳು ಬ್ರಿಟಿಷ್ ಶಿಕ್ಷಣದಿಂದ ಹೊಸ ತಿಳುವಳಿಕೆಯಲ್ಲಿ ಪ್ರಸ್ತುತಗೊಂಡವು. ಹಾಗಾಗಿ ಬಾಲ್ಯ ವಿವಾಹ, ಸತಿ, ವಿಧವೆ ಮತ್ತು ಅಸ್ಪೃಶ್ಯರ ಸ್ಥಿತಿಗತಿಯಂತಹ ಅನೇಕ ಸಂಗತಿಗಳು ಭಾರತೀಯ ಸಾಮಾಜಿಕ ಸಮಸ್ಯೆಗಳು ಅಂತ ಪರಿಗಣಿತವಾದವು. ನಂತರ ಇವು ರಾಷ್ಟ್ರೀಯ ಚಳುವಳಿಯೊಂದಿಗೆ ತಳುಕುಹಾಕಿಕೊಂಡವು.) ಅಲ್ಲದೆ, ಸ್ವಾತಂತ್ರ ಭಾರತದ ಸಂವಿಧಾನದಲ್ಲಿ ಅದರ ಪರಿಹಾರ ಕ್ರಮಗಳು ಸೇರ್ಪಡೆಗೊಂಡವು. ಈ ಕುರಿತು ವಸಾಹತು ಸಂದರ್ಭ ಚಿಂತನಾಕ್ರಮಗಳನ್ನು ಕ್ರೋಢೀಕರಿಸಿ, ಲಿಂಗ ನೆಲೆಯಿಂದ ಮರು ಪರಿಶೀಲನೆಗೆ ಒಳಪಡಿಸಲಾಗುವುದು. ಅದರಲ್ಲಿ ಪಾಶ್ಚಾತ್ಯ ಸುಧಾರಣಾವಾದಿ ದೃಷ್ಟಿಕೋನ ಒಂದು ಕಡೆ, ದೇಶಿಯ ಅಂದರೆ ಭಾರತೀಯ ಸುಧಾರಣಾವಾದಿ ದೃಷ್ಟಿಕೋನ

ಇನ್ನೊಂದುಕಡೆ. ಅಂಬೇಡ್ಕರ್ ಈ ದೃಷ್ಟಿಕೋನಗಳಿಗೆ ಪರ್ಯಾಯವಾದ ದೃಷ್ಟಿಕೋನವನ್ನು ಪ್ರಸ್ತುತಪಡಿಸುತ್ತಾರೆ. ಅಂದರೆ ಮಹಿಳೆಯ ವಿಷಯಗಳನ್ನು ಜಾತಿ ಒಳಗೆ ಜಾತಿಯೊಂದಿಗೆ ತಳುಕುಹಾಕದೆ ಗ್ರಹಿಸುತ್ತಿದ್ದ ದೃಷ್ಟಿಕೋನಗಳಿದ್ದವು. ಆದರೆ ಅಂಬೇಡ್ಕರ್ ಲಿಂಗ, ಜಾತಿಯಲ್ಲಿ ಶ್ರೇಣೀಕರಣ ಉಳಿಸಿಕೊಂಡಿರುವ ವಿವಾಹ ಒಂದು ಪ್ರಕಾರವಾದ ಸ್ವಜಾತಿ ವಿವಾಹದೊಳಗೆ ಮಹಿಳಾ ವಿಷಯಗಳನ್ನು ಗ್ರಹಿಸಿದರು. ಈ ಎಲ್ಲಾ ಸಂಗತಿಗಳೇ ಮೂರನೇ ಅಧ್ಯಾಯದ ವಸ್ತುವಾಗಿವೆ. ಅದ್ದರಿಂದ ಲಿಂಗ, ಜಾತಿ ಶ್ರೇಣೀಕರಣವನ್ನು ವಸಾಹತು ಚಿಂತನಾಕ್ರಮದಲ್ಲಿ ಅಂಬೇಡ್ಕರ್ ಧೋರಣೆಗಳನ್ನು ಗುರುತಿಸುವುದು ಉದ್ದೇಶವಿದೆ.

ಅಂದರೆ ಸ್ತ್ರೀವಾದಿಗಳ ಪ್ರಕಾರ ವಿವಾಹವೇ ಮಹಿಳೆಯ ಎಲ್ಲ ಸಮಸ್ಯೆಗೆ ಮೂಲ. ಈ ಕುರಿತು ಜ್ಯೂಲಿಯಟ್ ಹೇಳಿಕೆ ಗಮನಾರ್ಹವಾದುದು. “ಸ್ತ್ರೀ ಜಗತ್ತಿನೊಳಗೆ ಹೆಂಗಸಿನಿಂದಲೇ ಪೋಷಿತರಾಗುವ ಅವರಿಗೆ ಮುಖ್ಯ ಗುರಿ ಎಂದು ತೋರುವುದು ಮದುವೆ.” (ಜ್ಯೂಲಿಯಟ್; ಉದ್ಧೃತ: ಸಿಮೊನ್ ದ ಬೋವಾ: ೨೦೦೭; ಪು-೪೪) ಅಂದರೆ ವಾಸ್ತವವಾಗಿ ಗಂಡಸಿಗೆ ಅಧೀನವಾಗುವುದು ಎಂದು ವ್ಯಾಖ್ಯಾನಿಸಿದ್ದಾರೆ. ಹಾಗೆಯೇ ಸಿಮೊನ್ ದ ಬೋವಾ “ಹೆಂಗಸು ಗಂಡಿಸಿನೊಡನೆ ಸಂಬಂಧ ಹೊಂದಿರುವ ಮದುವೆ ಆಕೆಯ ಅಧೀನ ಸ್ಥಿತಿಗೆ ಕಾರಣವಲ್ಲ ಆಕೆ ಮದುವೆ ಸಂಬಂಧಕ್ಕೆ ಮಾತ್ರವೇ ಕಟ್ಟುಬಿದ್ದಿರುವುದೇ ಅದಕ್ಕೆ ಮುಖ್ಯ ಕಾರಣ” (ಸಿಮೊನ್ ದ ಬೋವಾ: ೨೦೦೭; ಪು-೫೪) ಎನ್ನುತ್ತಾಳೆ. ಹಾಗಾದರೆ ಜಾತಿ ನೆಲೆಯಿಂದ ವಿವಾಹದ/ಸ್ವಜಾತಿ ವಿವಾಹದ ಚರ್ಚೆಯನ್ನು ಬೆಳೆಸುವ ಅಂಬೇಡ್ಕರ್‌ರವರ ದೃಷ್ಟಿಕೋನ ಹೇಗೆ ಭಿನ್ನವಾದದ್ದು. ಅದು ಮಹಿಳಾ ಅಧ್ಯಯನದ ಚರ್ಚೆಗೆ ನೀಡುವ ಆಯಾಮ ಪ್ರಸ್ತುತ ಪಡಿಸಲಾಗಿದೆ.

ಮೂರು: “ಲಿಂಗ ವ್ಯವಸ್ಥೆ” ಎಂಬುದು ಮಹಿಳಾ ಅಧ್ಯಯನದ ಬಹಳ ಮುಖ್ಯವಾದ ಪರಿಕಲ್ಪನೆ. ಸ್ತ್ರೀವಾದ ಲಿಂಗ ವ್ಯವಸ್ಥೆಯನ್ನು “ಹೆಣ್ಣಿನ ಜೈವಿಕ ನೆಲೆಯ ಮೇಲೆ ಹೇರಲಾಗಿರುವ ಸಾಮಾಜಿಕ, ಸಾಂಸ್ಕೃತಿಕ, ಮಾನಸಿಕ ಅರ್ಥ, ಸಂಕೇತ ಎಂದು ಪರಿಭಾವಿಸುತ್ತದೆ.” (ಹೆಚ್.ಎಸ್.ಶ್ರೀಮತಿ: ೨೦೦೩; ಪು-೫೭,೯೪) ಜಾತಿಗಳು ಹೆಣ್ಣಿನ ಮೇಲೆ ಹೇರಿರುವ ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಅಂಬೇಡ್ಕರ್ ವಿವರಿಸುವುದನ್ನು ಗೊತ್ತುಪಡಿಸಿಕೊಳ್ಳಲಾಗಿದೆ.

ನಾಲ್ಕು : ಭಾರತದಲ್ಲಿ ಪಿತೃಪ್ರಧಾನ ವ್ಯವಸ್ಥೆಯೆನ್ನುವುದು ಏಕರೂಪವಾಗಿಲ್ಲ. ಆಯಾ ಜಾತಿ, ಧರ್ಮಕ್ಕನುಗುಣವಾಗಿ ಪಿತೃಪ್ರಧಾನ ವ್ಯವಸ್ಥೆಗಳ ಸಂರಚನೆ ಬೇರೆ ಬೇರೆ ಸ್ವರೂಪ ಪಡೆದಿವೆ. ಜಾತಿಗೊಂಡ ಪಿತೃಪ್ರಧಾನ ವ್ಯವಸ್ಥೆಗಳ ಕುರಿತ ಅಂಬೇಡ್ಕರ್ ದೃಷ್ಟಿಕೋನ ತಿಳಿಯುವ ಉದ್ದೇಶವನ್ನು ಹೊಂದಿದೆ.

ಐದು : ಅಂಬೇಡ್ಕರ್‌ಗೂ ಈ ದೇಶದ ಆಡಳಿತ ಯಂತ್ರಕ್ಕೂ ಒಂದು ನೇರವಾದ ಅವಿನಾಭಾವ ಸಂಬಂಧವಿದೆ. ಏಕೆಂದರೆ ಅಂಬೇಡ್ಕರ್ ಭಾರತವನ್ನು ಮುನ್ನಡೆಸುತ್ತಿರುವ

ಸಂವಿಧಾನವನ್ನು ರಚಿಸಿದರು. ಹಾಗಾದರೆ ಅಂಬೇಡ್ಕರ್ ಮಹಿಳೆಯರಿಗೆ ಸಂವಿಧಾನ ಮೂಲಕ ನೀಡಿರುವ ಹಕ್ಕುಬಾಧ್ಯತೆ ಮತ್ತು ಸೌಲಭ್ಯಗಳು ಯಾವುವು? ಅವು ಲಿಂಗಸಮಾನತೆ ಸಮಾಜ ನಿರ್ಮಾಣಕ್ಕೆ ಹೇಗೆ ಬೆನ್ನಲುಬು ಆಗಿ ನಿಲ್ಲುತ್ತವೆ ಎಂಬುದನ್ನು ಅರ್ಥಮಾಡಿಕೊಳ್ಳಲಾಗುವುದು.

ಇವಿಷ್ಟು ನನ್ನ ಅಧ್ಯಯನ ಹಿಂದಿರುವ ಉದ್ದೇಶಗಳು. ಇವುಗಳನ್ನು ಯಾವ ಪರಿಮಿತಿಯಲ್ಲಿ ಅಭಿವೃದ್ಧಿ ಪಡಿಸಲಾಗಿದೆ ಎಂಬುದರ ಕುರಿತು ಮುಂದೆ ಚರ್ಚಿಸಲಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಮಹಿಳಾ ಸಂಬಂಧಿ ಅಂಬೇಡ್ಕರ್ ಚಿಂತನೆಗಳನ್ನು ಕುರಿತದ್ದು. ಅವರು ಮಹಿಳೆ ಕುರಿತಾದ ಅನೇಕ ವಿಷಯಗಳನ್ನು ವಿವಿಧ ಸನ್ನಿವೇಶದಲ್ಲಿ ಚರ್ಚಿಸುತ್ತಾರೆ. ಅಂದರೆ ಅಂಬೇಡ್ಕರ್ ಒಬ್ಬ ಆಕಾಡೆಮಿಷನ್ ಆಗಿ ಅನೇಕ ವಿಷಯಗಳ ಬಗೆಗೆ ಸಂಶೋಧನೆ ಮಾಡಿದ್ದಾರೆ. ವಿವಿಧ ವಿಚಾರ ಸಂಕಿರಣದಲ್ಲಿ ಅನೇಕ ವಿಷಯಗಳ ಕುರಿತ ಪ್ರಬಂಧ ಮಂಡಿಸಿದ್ದಾರೆ. ಜೊತೆಗೆ ಅನೇಕ ಸಭೆ, ಸಮಾರಂಭಗಳ ಅಧ್ಯಕ್ಷತೆ ವಹಿಸುವ ಮೂಲಕ ಅವುಗಳನ್ನು ಉದ್ದೇಶಿಸಿ ಭಾಷಣ ಮಾಡಿದ್ದಾರೆ. ಅಷ್ಟೆ ಅಲ್ಲದೆ ಇನ್ನೂ ಕೆಲವು ಕಾರ್ಯಕ್ರಮಗಳಿಗೆ ಬರೆದ ಭಾಷಣಗಳನ್ನು ಓದದೆ ಬಿಟ್ಟಿದ್ದಾರೆ. ಹಾಗೆಯೇ ಅಂಬೇಡ್ಕರ್ ಒಬ್ಬ ಚಳುವಳಿಗಾರರಾಗಿ ಅನೇಕ ಚಳುವಳಿಗಳನ್ನು ಸಂಘಟಿಸಿದ್ದಾರೆ ಮತ್ತು ಭಾಗವಹಿಸಿದ್ದಾರೆ. ಈ ಕುರಿತಾದ ವಿಚಾರಗಳನ್ನು ಜನರಿಗೆ ಮುಟ್ಟಿಸಲು ಅನೇಕ ಪತ್ರಿಕೆಗಳನ್ನು ಪ್ರಕಟಿಸಿದ್ದರು. ಜೊತೆಗೆ ಆಡಳಿತಗಾರರಾಗಿ, ಭಾರತದ ಸಂಸತ್ತು , ಮುಂಬಯಿ ವಿಧಾನಸಭೆ, ವಿಧಾನ ಪರಿಷತ್ತನಲ್ಲಿ ರಾಜ್ಯ ಮತ್ತು ದೇಶದ ಅನೇಕ ವಿಷಯಗಳ ಕುರಿತು ನಡೆದ ಚರ್ಚೆಯಲ್ಲಿ ಭಾಗವಹಿಸಿದ್ದಾರೆ. ಅನೇಕ ಸಮಿತಿಗಳ ಮುಂದೆ ಹಾಜರಾಗಿ ಅಖಂಡ ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ ವಿಷಯಗಳ ಬಗ್ಗೆ ಸಾಕ್ಷ್ಯ ನೀಡಿದ್ದಾರೆ. ಬ್ರಿಟಿಷರು ಭಾರತದ ಸ್ವಾತಂತ್ರ್ಯ ಕುರಿತು ಚರ್ಚಿಸಲು ಕರೆದ ಅನೇಕ ಚರ್ಚೆಗಳಲ್ಲಿ ಪಾಲ್ಗೊಂಡು ತಮ್ಮದೇ ಆದ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಭಾರತ ಸ್ವಾತಂತ್ರ್ಯ ಪಡೆದ ನಂತರ ಭಾರತದ ಸಂವಿಧಾನ ರಚಿಸಿ ಅದರ ಕರಡು ಪ್ರತಿ ಕುರಿತು ಸದನದಲ್ಲಿ ಚರ್ಚಿಸಿದ್ದಾರೆ. ಅಂಬೇಡ್ಕರ್‌ರವರ ಈ ಎಲ್ಲಾ ಬರಹ ಮತ್ತು ಭಾಷಣ, ಪತ್ರಗಳನ್ನು ಸಂಗ್ರಹಿಸಿದ ಮಹಾರಾಷ್ಟ್ರ ಸರ್ಕಾರದ ಶಿಕ್ಷಣ ಇಲಾಖೆ, ಹಲವು ಸಂಪುಟಗಳಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಪ್ರಕಟಿಸಿದೆ. ಹಾಗೆನೇ ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಸಹ ತಜ್ಞರ ಸಮಿತಿ ರಚಿಸಿ ಇಂಗ್ಲೀಷ್ ಭಾಷೆಯಲ್ಲಿ ಸಂಗ್ರಹವಾಗಿರುವ ಅಂಬೇಡ್ಕರ್‌ವರ ಬಹುತೇಕ ಬರಹ ಮತ್ತು ಭಾಷಣಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಹಂತ ಹಂತವಾಗಿ ಪ್ರಕಟಿಸಿದೆ. ಈ ಎಲ್ಲ ಪಠ್ಯ ರೂಪದಲ್ಲಿರುವ ಅಂಬೇಡ್ಕರ್ ಬರಹ ಮತ್ತು ಭಾಷಣಗಳನ್ನು ಅಧ್ಯಯನದಲ್ಲಿ ಪ್ರಾಥಮಿಕ ಆಕರವಾಗಿ ಆಯ್ಕೆ

ಮಾಡಿಕೊಳ್ಳಲಾಗಿದೆ. ಅದರಲ್ಲಿರುವ ಮಹಿಳಾ ಕುರಿತ ಅಂಬೇಡ್ಕರ್ ಆಲೋಚನೆಗಳು ಅಭಿಪ್ರಾಯ, ನಿಲುವುಗಳನ್ನು ಪ್ರಸ್ತುತ ಅಧ್ಯಯನ ಕೇಂದ್ರಿಕರಿಸಿದ್ದು. ಅವುಗಳನ್ನು ಸ್ತ್ರೀವಾದಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅದರ ಜೊತೆಗೆ ಅಂಬೇಡ್ಕರ್ ಕುರಿತು ಬಂದಿರುವ ಸಂಶೋಧನೆ, ಅಧ್ಯಯನ, ಪುಸ್ತಕ, ಪತ್ರಿಕೆಗಳಲ್ಲಿರುವ ಲೇಖನಗಳು, ವರದಿಗಳು, ವೆಬ್‌ಸೈಟ್‌ನಲ್ಲಿ ಲಭ್ಯವಾಗಿರುವ ಲೇಖನಗಳಲ್ಲಿನ ಮಹಿಳಾ ಕುರಿತಾದ ಮಾಹಿತಿಗಳನ್ನು ಸಹ ಅಧ್ಯಯನದ ಆನುಷಂಗಿಕ ಆಕರವಾಗಿ ತೆಗೆದುಕೊಂಡಿದೆ.

ಹಾಗೆಯೇ ಅಂಬೇಡ್ಕರ್ ಸಮಕಾಲೀನ ಚಿಂತಕರಾದ ಪೆರಿಯಾರರಾಮಸ್ವಾಮಿ ನಾಯ್ಕರ್, ಜ್ಯೋತಿಬಾ ಪುಲೆ, ಗಾಂಧೀಜಿ, ಲೋಹಿಯಾರವರ ಲಿಂಗ ಮತ್ತು ಜಾತಿ ಸಂಬಂಧಿ ಮಾಹಿತಿಯನ್ನು ತೆಗೆದುಕೊಳ್ಳಲಾಗಿದೆ. ಏಕೆಂದರೆ ಅಂಬೇಡ್ಕರ್ ಪ್ರಸ್ತಾಪಿಸುತ್ತಿರುವ ಮಹಿಳಾ ಗ್ರಹಿಕೆಗಳು, ಪೆರಿಯಾರ, ಗಾಂಧೀಜಿ, ಲೋಹಿಯಾರವರಿಗಿಂತ ಹೇಗೆ ಭಿನ್ನವಾಗಿವೆ. ಜೊತೆಗೆ ಆ ಸಂದರ್ಭದಲ್ಲಿ ಮಹಿಳಾ ಕುರಿತ ಧೋರಣೆಯನ್ನು ಖಚಿತಪಡಿಸಿಕೊಳ್ಳುವ ಹಿನ್ನಲೆಯಲ್ಲಿ ಈ ಚಿಂತಕರನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ನಿಗದಿತ ಕಾಲಾವಧಿಯಿರುವ ಹಿನ್ನಲೆಯಲ್ಲಿ ಅಂಬೇಡ್ಕರ್ ಮಹಿಳಾ ಕುರಿತಾದ ಎಲ್ಲ ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸದೆ ಮಹಿಳೆಯರು ಮತ್ತು ಜಾತಿಗಳ ಕುರಿತ ಅಂಬೇಡ್ಕರ್ ಗ್ರಹಿಕೆಗಳನ್ನು ಅರ್ಥಮಾಡಿಕೊಳ್ಳಲು ವಿವಾಹ, ವೈದಿಕ ಧರ್ಮ, ಸಂವಿಧಾನದಲ್ಲಿ ಮಹಿಳಾ ಕುರಿತ ಅವರ ಆಲೋಚನೆಗಳು ಈ ಅಧ್ಯಯನ ವಸ್ತು. ಜೊತೆಗೆ ಮಹಿಳಾ ಅಧ್ಯಯನಕ್ಕೆ ಮುಂದಿನ ಸಾಧ್ಯತೆಗಳನ್ನು ತೋರಿಸಲಾಗಿದೆ. ಇದಿಷ್ಟು ಮಿತಿಯಲ್ಲಿ ಪ್ರಸುತ್ತ ಅಧ್ಯಯನವನ್ನು ನಡೆಸಲಾಗಿದೆ. ಈ ಮಿತಿಯಲ್ಲಿ ಅಧ್ಯಯನದ ಉದ್ದೇಶದ ಹಿಂದೆ ಸಂಶೋಧನಾ ವಿಧಾನಗಳು ಅಂದರೆ (Methodology) ಹೇಗೆ ಕೆಲಸ ಮಾಡಿವೆ ಎಂಬುದರ ಬಗ್ಗೆ ಕೆಲವು ಮಾತುಗಳನ್ನು ಹೇಳುವ ಅಗತ್ಯವಿದೆ. ಮುಂದಿನ ಭಾಗದಲ್ಲಿ ಅವುಗಳನ್ನು ಕುರಿತು ಚರ್ಚಿಸಲಾಗಿದೆ.

### ೧.೪. ಅಧ್ಯಯನದ ವೈಧಾನಿಕತೆ

ಮಹಿಳಾ ಅಧ್ಯಯನದಲ್ಲಿ ಸಂಶೋಧನೆ ಅಂತಿಮವಾಗಿ ಸ್ತ್ರೀವಾದಿ ವಿಮರ್ಶೆಯ ಒಂದು ಪ್ರಯೋಗವೇ. ಈ ಮಾತು ಪ್ರಸ್ತುತ ಅಧ್ಯಯನಕ್ಕೂ ಸಲ್ಲುತ್ತದೆ. ಹೀಗಾಗಿ ಈ ಅಧ್ಯಯನದ ಸಂಶೋಧನಾ ವಿಧಾನಗಳನ್ನು ನಿರ್ವಚಿಸುವುದೆಂದರೆ, ಈ ಅಧ್ಯಯನವನ್ನು ರೂಪುಗೊಳಿಸಿರುವ ವಿಮರ್ಶೆ ನೆಲೆಗಳ ವಿವರಣೆಯೇ ಆಗುತ್ತದೆ. ಇವು ಈ ಅಧ್ಯಯನ ವಿಧಾನದ ಬಗೆಗಿನ ಮೂಲಭೂತ ಅಂಶಗಳಾಗಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಬಳಸಿರುವ ವಿಧಾನಗಳನ್ನು ಹೇಳಲಾಗುವುದು.

ಕಳೆದ ನಾಲ್ಕು ದಶಕಗಳಿಂದ ಸಾಮಾಜಿಕ ಸಂಶೋಧನೆಯಲ್ಲಿ ಸ್ತ್ರೀವಾದಿ ಸಂಶೋಧನಾ ವಿಧಾನವು ಒಂದು ಹೊಸ ಪ್ರಕಾರವಾಗಿ ಬೆಳೆಯುತ್ತಿದೆ. ಅದಕ್ಕೆ ಬಹಳ ಮುಖ್ಯವಾದ ಕಾರಣವೆಂದರೆ ಜ್ಞಾನ ವ್ಯವಸ್ಥೆಯಲ್ಲಿ ಮಹಿಳಾ ಅಧ್ಯಯನ ಒಂದು ಜ್ಞಾನ ಶಾಖೆಯಾಗಿ ರೂಪ ಪಡೆಯುತ್ತಿರುವುದು ಕಂಡುಬರುತ್ತದೆ. ಹಾಗಾಗಿ "ಮಹಿಳಾ ಕುರಿತ ಸಂಶೋಧನೆ, ಅಧ್ಯಯನ, ಇತಿಹಾಸ, ಪುನರ್‌ರಚನೆ, ಅನುವಾದ, ಗ್ರಂಥಗಳ ರಚನೆಗಳು ನಡೆಯುತ್ತಿವೆ." (ಹೇಮಲತಾ ಹೆಚ್.ಎಂ: ೨೦೦೪; ಪು-೭೫)ಅದರಲ್ಲಿ ಮಹಿಳೆಯ ನಿಜಸ್ಥಿತಿಯನ್ನು ಪತ್ತೆ ಹಚ್ಚಲು ಸಾಂಪ್ರದಾಯಿಕ ಸಂಶೋಧನಾ ವಿಧಾನಗಳನ್ನು ಬಳಸಿದರು. ಆದರೆ ಈ ವಿಧಾನಗಳು ಮಹಿಳೆಯ ಇರುವಿಕೆಯನ್ನು ತೋರಿಸುವಲ್ಲಿ ಅನೇಕ ಅಡ್ಡಿಗಳನ್ನು ತಂದಿಟ್ಟವು. ಅಂದರೆ ಮಹಿಳೆಯರ ಸಮಸ್ಯೆಯನ್ನು ಗುರ್ತಿಸುವಲ್ಲಿ ವಿಫಲವಾದವು. ಇದನ್ನು ಗಮನಿಸಿದ ಸ್ತ್ರೀವಾದಿ ಚಿಂತಕರು ಈಗಾಗಲೇ ಅಧ್ಯಯನಕ್ಕೆ ಅಡ್ಡಿ ಮಾಡಿದ ವಿಧಾನಗಳಲ್ಲಿನ ಒಳಸಂಗತಿಗಳನ್ನು ಗುರುತಿಸಿದರು. ಈ ಮೂಲಕ ವಿಧಾನವನ್ನು ಮಹಿಳಾ ನೆಲೆಯಲ್ಲಿ ನಿರ್ವಚಿಸಿದರು. ಈ ಹಿನ್ನಲೆಯಲ್ಲಿ ಮಹಿಳಾ ಸಂಗತಿಗಳನ್ನು ಒಳಗೊಳ್ಳುವ ಅಂಶಗಳನ್ನ ಸೇರಿಸಿ ಕೊಂಡಿರುವ ಸಂಶೋಧನಾ ವಿಧಾನಗಳನ್ನು "ಸ್ತ್ರೀವಾದಿ ಸಂಶೋಧನಾ ವಿಧಾನ" ಎನ್ನುತ್ತೇವೆ. ಇವುಗಳನ್ನು ಈ ಅಧ್ಯಯನಕ್ಕೆ ಬಳಸಲಾಗಿದೆ. ಈ ಕುರಿತು ವಿವರಿಸುವುದಕ್ಕಿಂತ ಮುಂಚೆ, ಅಧ್ಯಯನದ ದತ್ತಾಂಶ ಸಂಗ್ರಹಣೆಗೆ ಬಳಸಿದ ತಂತ್ರಗಳನ್ನು ಹೇಳಲಾಗುವುದು. ದತ್ತಾಂಶ ಸಂಗ್ರಹಣೆಗೆ ಅನೇಕ ತಂತ್ರಗಳಿವೆ. ಅವುಗಳಲ್ಲಿ ದಾಖಲೆಗಳು, ವೈಯಕ್ತಿಕ ದಾಖಲೆಗಳು, ಸಂದರ್ಶನಗಳನ್ನು ಮಾತ್ರ ಈ ಅಧ್ಯಯನದ ಮಾಹಿತಿ ಸಂಗ್ರಹಣೆ ಬಳಸಿಕೊಳ್ಳಲಾಗಿದೆ.

### ೧. ದಾಖಲೆಗಳು

ದತ್ತಾಂಶಗಳನ್ನು ಒಳಗೊಂಡಿರುವ ಬಹಳ ಮುಖ್ಯವಾದ ಆಕರ ದಾಖಲೆಗಳು. ದಾಖಲೆಗಳನ್ನು "ಮಾಹಿತಿ ಕ್ರೋಢೀಕರಣ" ಎಂದು ಅರ್ಥೈಸಬಹುದು. ದಾಖಲೆಗಳು ಅನೇಕ ರೂಪದಲ್ಲಿವೆ. ಅದರಲ್ಲಿ ಕಾಗದ ರೂಪದ ದಾಖಲೆಗಳು, ಕ್ಷೇತ್ರ ರೂಪದ ದಾಖಲೆಗಳು ಮುಖ್ಯವಾದವು. ಕಾಗದ ಮೂಲದ ದಾಖಲೆಗಳಲ್ಲಿ ಧ್ವನಿ-ದೃಶ್ಯ, ಕ್ಯಾಸೆಟ್‌ಗಳು ಸೇರಿವೆ. ಈ ಅಧ್ಯಯನ ಉದ್ದೇಶಗಳನ್ನು ವಿವರಿಸಿಕೊಳ್ಳಲು ಅಗತ್ಯವಾದ ದತ್ತಾಂಶವನ್ನು ಕಾಗದ ಮೂಲದ ದಾಖಲೆಗಳಿಂದ ಸಂಗ್ರಹಿಸಿದೆ. ಅಂದರೆ ಅಂಬೇಡ್ಕರವರ ಬಹುತೇಕ ಬರಹ ಮತ್ತು ಭಾಷಣಗಳನ್ನು ಸಂಗ್ರಹಿಸಲಾಗಿದೆ. ಈ ಎಲ್ಲ ಸಂಪುಟಗಳು ಅಧ್ಯಯನದ ಮೂಲಭೂತ ಆಕರಗಳು. ಅದರಲ್ಲಿನ ಮಹಿಳಾ ಕುರಿತ ವಿಷಯಗಳನ್ನು ಸಂಗ್ರಹಿಸಲಾಗಿದೆ. ಹಾಗೆಯೇ ಅಂಬೇಡ್ಕರ್ ಕುರಿತು ನಡೆದ ಅಧ್ಯಯನಗಳು ಮತ್ತು ಮಹಿಳಾ ಅಧ್ಯಯನ ಪಠ್ಯಗಳಲ್ಲಿನ ಸ್ತ್ರೀವಾದಿ ಚರ್ಚೆಗಳನ್ನು ಅಧ್ಯಯನಕ್ಕೆ ಆನುಷಂಗಿಕ ಆಕರವಾಗಿ ತೆಗೆದುಕೊಂಡಿದೆ.

## ೨. ವೈಯಕ್ತಿಕ ದಾಖಲೆಗಳು

ಇವುಗಳಲ್ಲಿ ವ್ಯಕ್ತಿಯ ದಿನಚರಿ, ಆತ್ಮಕಥೆ, ಪತ್ರಗಳು ಹಾಗೂ ವ್ಯಕ್ತಿ ತನ್ನ ಮನಸ್ಸಿನ ಭಾವನೆಗಳನ್ನು ಅಭಿವ್ಯಕ್ತಿಗೊಳಿಸಲು ಉಪಯೋಗಿಸಿಕೊಂಡಿರುವ ಸಾಹಿತ್ಯ ಮತ್ತು ಕಲಾ ಪ್ರಕಾರಗಳು ಸೇರಿರುತ್ತವೆ. ಈ ದಾಖಲೆಗಳ ಮುಖ್ಯ ಲಕ್ಷಣ ವ್ಯಕ್ತಿಯ ತನ್ನ ನಂಬಿಕೆಗಳು, ಅನುಭವ ತಾನು ಕೈಗೊಂಡ ಕಾರ್ಯದ ಬಗೆಗೆ ತನ್ನ ಮಾತುಗಳಲ್ಲಿ ಹೇಳುತ್ತಾನೆ. ಪಾಶ್ಚಾತ್ಯ ಸಂಶೋಧಕ ಥಾಮಸ್ ಮತ್ತು  ನಂತರದ ಅಧ್ಯಯನಗಳಲ್ಲಿ ಈ ದಾಖಲೆಗಳನ್ನು ಬಳಸಲಾಯಿತು. ಈ ಅಧ್ಯಯನವು ಸಹ ಅಂಬೇಡ್ಕರ್ ಆತ್ಮಚರಿತ್ರೆ, ಪತ್ರಗಳಲ್ಲಿನ ದತ್ತಾಂಶ ತೆಗೆದುಕೊಳ್ಳಲು ಈ ಸಂಗತಿಯನ್ನು ಬಳಸಿದೆ.

## ೩. ಸಂದರ್ಶನ : ಚರ್ಚೆ

ಸಂಶೋಧನೆಯಲ್ಲಿ ಸಂದರ್ಶನಕ್ಕೆ ಮಹತ್ವದ ಸ್ಥಾನವಿದೆ. ಸಂದರ್ಶನ ಎನ್ನುವುದು ಇಬ್ಬರು ಮುಖಾಮುಖಿಯಾಗಿ ಪ್ರಶ್ನೆಗಳಿಗೆ ಉತ್ತರ ಪಡೆಯುವ ವಿಧಾನವಾಗಿದೆ. ಆದರೆ ಈ ಅಧ್ಯಯನವು ಚರ್ಚೆಯನ್ನು ಸಹ ಸಂದರ್ಶನವೆಂದು ಪರಿಭಾವಿಸುತ್ತದೆ. ಹಾಗಾಗಿ ಮಹಿಳಾ ಅಧ್ಯಯನ, ಜಾತಿಗಳ ಅಧ್ಯಯನ, ಅಂಬೇಡ್ಕರ್ ಅಧ್ಯಯನದ ತಜ್ಞರು, ಅನೇಕ ಜನ ವಿದ್ವಾಂಸರ ಜೊತೆ ಈ ವಿಷಯವನ್ನು ಚರ್ಚಿಸಿ ಅಧ್ಯಯನ ವಿವಿಧ ಆಯಾಮಗಳನ್ನು ಡೆವಲಪ್ ಮಾಡುವುದರ ಬಗ್ಗೆ ತಿಳಿದುಕೊಳ್ಳಲಾಗಿದೆ.

## ೪. ಸ್ವಭಾವ ಪರೀಕ್ಷಾ ತಂತ್ರ

ಈ ವಿಧಾನದಲ್ಲಿ ಕೆಲವು ಘಟಕಗಳನ್ನು ಆಳವಾಗಿ ಅಭ್ಯಸಿಸಲಾಗುತ್ತದೆ. ಅಂದರೆ ಒಬ್ಬ ವ್ಯಕ್ತಿ, ಸಂಸ್ಥೆ, ಒಂದು ಸಂದರ್ಭ, ಸಂಸ್ಕೃತಿ ಅತಿ ಎಚ್ಚರಿಕೆಯಿಂದ ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳುವುದಕ್ಕೆ ಇದು ಸಹಕಾರಿ. ಅಂಬೇಡ್ಕರ್ ಮಹಿಳಾ ವಿಷಯವನ್ನು ಯಾವ ಸಂದರ್ಭದಲ್ಲಿ ಪ್ರಸ್ತಾಪಿಸುತ್ತಾರೆ. ಯಾವ ವಿಷಯದ ಮುಖಾಂತರ ಮಹಿಳಾ ವಿಷಯಗಳನ್ನು ವಿವರಿಸಿಕೊಳ್ಳುವುದಕ್ಕೆ ಮುಂದಾಗುತ್ತಾರೆ. ಈ ವಿಷಯ ಮಂಡನೆಯಲ್ಲಿ ಬಳಸಿದ ವಿಧಾನ ಯಾವುದು? ಎಂಬ ಇತ್ಯಾದಿ ಕುರಿತ ಮಾಹಿತಿಗೆ ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಈ ತಂತ್ರಗಳಿಂದ ಸಂಗ್ರಹವಾದ ಮಾಹಿತಿಯನ್ನು ಗುಣಾತ್ಮಕ ವಿಧಾನಗಳ ಹಿನ್ನಲೆಯಲ್ಲಿ ವರ್ಗೀಕರಿಸಲಾಗಿದೆ.

## ವರ್ಗೀಕರಣ

ಅಧ್ಯಯನದಲ್ಲಿ ಸಂಗ್ರಹಿಸಿದ ದತ್ತಾಂಶಗಳನ್ನು ಅಧ್ಯಯನಕ್ಕೆ ಒಳಪಡಿಸಲು ವರ್ಗೀಕರಣ ಅಗತ್ಯ. ವರ್ಗೀಕರಣವನ್ನು ವಿಷಯಗಳ ವಿಂಗಡಣೆ ಎಂದು ಹೇಳಬಹುದು. ಅಂಬೇಡ್ಕರ್ ಆಲೋಚನೆಗಳನ್ನು ಅವರ ಸಂಪುಟಗಳಿಂದ ಸಂಗ್ರಹಿಸಲಾಗಿದ್ದು, ಮಹಿಳಾ ಕುರಿತ

ಮಾಹಿತಿಯಲ್ಲಿನ ಗುಣಗಳನ್ನು ಆಧಾರಿಸಿ ವಿಷಯಗಳನ್ನು ವಿಂಗಡಿಸಲಾಗಿದೆ. ಅದಕ್ಕೆ "ಬೊಗಾರ್ಡಸ್ ಶ್ರೇಣಿ" (ಬಿ.ಎಸ್.ಚಂದ್ರಶೇಖರ್: ೨೦೦೧; ಪು-೧೪೪)ಯನ್ನು ಬಳಸಲಾಗಿದೆ.

**ಬೊಗಾರ್ಡಸ್**

'ಬೊಗಾರ್ಡಸ್' ಎನ್ನುವಂತಹದ್ದು ಸಂಶೋಧನ ವಿಷಯಗಳನ್ನು ವರ್ಗೀಕರಿಸುವ ಒಂದು ವಿಧಾನ. ಇದನ್ನು ಸಾಮಾಜಿಕ ದೂರ ಅಳೆಯಲು ಬಳಸುತ್ತಾರೆ. "ಬೊಗಾರ್ಡಸ್ ಮತ್ತು ಅವನ ಸಂಗಡಿಗರು ಅನುಸರಿಸಿದ ವಿಧಾನವಿದು. ಹಾಗಾಗಿ ಇದನ್ನು ಬೊಗಾರ್ಡಸ್ ಎನ್ನುತ್ತಾರೆ." (ಬಿ.ಎಸ್.ಚಂದ್ರಶೇಖರ್: ೨೦೦೧; ಪು-೧೪೩, ೧೪೪) ಈ ವಿಧಾನವನ್ನು ಸಾಮಾಜಿಕ ಸಂಗತಿಗಳನ್ನು ಅಳೆಯಲು ಬಳಸಬಹುದು. ಪ್ರಸ್ತುತ ಅಧ್ಯಯನದಲ್ಲಿ ಅಂಬೇಡ್ಕರ್ ಮಹಿಳಾ ಬಗೆಗೆ ಪ್ರಸ್ತಾಪಿಸುವ ವಿಷಯಗಳಲ್ಲಿ ಇರುವ ದೂರವನ್ನು ಅಳೆಯಲು ಬಳಸಲಾಗಿದೆ. ಈ ಮೂಲಕವೇ ವಿಷಯಗಳನ್ನು ವರ್ಗೀಕರಿಸಲಾಗಿದೆ. ಇವಿಷ್ಟು ಅಧ್ಯಯನಕ್ಕೆ ಬೇಕಾದ ದತ್ತಾಂಶ ಸಂಗ್ರಹಣೆ ಮತ್ತು ವರ್ಗೀಕರಣಕ್ಕೆ ಬಳಸಲಾದ ವಿಧಾನಗಳು ಇನ್ನು ಅಧ್ಯಯನ ತಾತ್ವಿಕತೆಯಾದ ಸ್ತ್ರೀವಾದಿ ದೃಷ್ಟಿಕೋನ ವಿಶ್ಲೇಷಣೆಗೆ ಬಳಸಿರುವ ಕ್ರಮಗಳ ಕುರಿತು ಕೆಲವು ಮಾತುಗಳನ್ನು ಹೇಳಲೇಬೇಕು.

**೧. ವ್ಯಕ್ತಿನಿಷ್ಠ ಅಧ್ಯಯನಗಳ ಕ್ರಮ**

'ವಸ್ತುನಿಷ್ಠತೆ' ಎಂಬುವುದು ಸಂಶೋಧನೆಗಳ ಅಧ್ಯಯನ ಕ್ರಮ. ಇದನ್ನು ಸಾಮಾಜಿಕ ಸಂಶೋಧನೆಗಳು ಕಡ್ಡಾಯವಾಗಿ ಅನುಸರಿಸಲೇಬೇಕು. ವಸ್ತುನಿಷ್ಠತೆ ಅಂದರೆ ಅಧ್ಯಯನದ ವಸ್ತು ಮತ್ತು ಅಧ್ಯಯನಕಾರರ ನಡುವೆ ಅಂತರ ಕಾಪಾಡಬೇಕೆಂದು ಹೇಳುತ್ತದೆ. ಆದರೆ ಸ್ತ್ರೀವಾದಿ ಸಂಶೋಧನೆ ಅದನ್ನು ವಿರೋಧಿಸುತ್ತೆ, ಅದರ ಮೂಲವನ್ನೇ ಕಿತ್ತೊಗೆಯಬೇಕೆಂಬ ಹಿನ್ನೆಲೆಯಲ್ಲಿ ವಸ್ತುನಿಷ್ಠತೆಗೆ ಪರ್ಯಾಯವಾಗಿ ವ್ಯಕ್ತಿನಿಷ್ಠತೆ ಎಂಬ ಅಧ್ಯಯನ ವಿಧಾನವನ್ನು ಸ್ತ್ರೀವಾದಿ ಸಂಶೋಧನೆ ಪರಿಚಯಿಸಿದೆ. ವ್ಯಕ್ತಿನಿಷ್ಠ ಅಧ್ಯಯನ ಅಂದರೆ ಅಧ್ಯಯನದ ವಸ್ತು ಮತ್ತು ಅಧ್ಯಯನಕಾರರು ಎರಡು ಒಂದೇ ಆಗಿರಬೇಕು. ಇದನ್ನು ಸ್ತ್ರೀವಾದಿಗಳು "Personal is Politics"(ed Nielsen: 1990: P-28-42) ಎನ್ನುತ್ತಾರೆ. ಈ ವ್ಯಾಖ್ಯಾನಗಳು ಆಯಾ ಅಧ್ಯಯನಗಳ ಹಿನ್ನೆಲೆಯಲ್ಲಿ ಒಂದೊಂದು ಅರ್ಥ ಪಡೆದುಕೊಳ್ಳುತ್ತಿವೆ. ಮತ್ತು ಅರ್ಥೈಸಲ್ಪಡುತ್ತಿವೆ. ಹಾಗಾಗಿ "ಮಹಿಳಾ ಆತ್ಮಕಥೆಗಳನ್ನು ಅಧ್ಯಯನ ಮಾಡುವ ಹರ್ಬಟ್ ಸ್ಪೈನ್ಸರ್ (ರ್‍ಯಾಷನಿಲಿಟ್) ವೈಚಾರಿಕತೆ ಎಂಬ ಪರಿಕಲ್ಪನೆಯನ್ನು, ಇಂದ್ರಿಯ ಅನುಭವ, ಪರಸ್ಪರ ಸಂಬಂಧ ನೆಲೆಯಲ್ಲಿ ವಿಸ್ತರಿಸಿಕೊಳ್ಳುತ್ತಾರೆ. ಈ ಮೂಲಕ ವಸ್ತುನಿಷ್ಠ ವಿಧಾನವನ್ನು ಒಡೆಯುತ್ತಾರೆ. ಈ ಅಧ್ಯಯನದಲ್ಲಿ ಲಿಂಗ ವ್ಯವಸ್ಥೆ ಕುರಿತಾದ ಅಂಬೇಡ್ಕರ್ ಆಲೋಚನೆಗಳನ್ನು ಅವರ ಅಧ್ಯಯನಗಳಿಂದ ಮಾತ್ರ ವಿವರಿಸಿಕೊಳ್ಳದೆ ಅವರ ಬದುಕಿನ ಸಂದರ್ಭಗಳನ್ನು

ಉಲ್ಲೇಖಿಸುತ್ತಾ ಚರ್ಚೆಯನ್ನು ಬೆಳೆಸುತ್ತದೆ. ಈ ಕಾರಣಕ್ಕಾಗಿಯೇ ಅಂಬೇಡ್ಕರ್ ವೈಯಕ್ತಿಕ ದಾಖಲೆಗಳಾದ ಆತ್ಮಚರಿತ್ರೆ, ಪತ್ರಗಳನ್ನು ಸಹ ಅಧ್ಯಯನಕ್ಕೆ ಒಳಪಡಿಸಿದೆ.

ಆದ್ದರಿಂದ ಅಂಬೇಡ್ಕರ್ ಬದುಕಿನಲ್ಲಿ ಮಹಿಳೆರೊಂದಿಗಿನ ಒಡನಾಡಿಗಳ ಜೊತೆಗೆ ಅವರ ಅಧ್ಯಯನ, ಚಳುವಳಿಯಲ್ಲಿನ ಅಭಿಪ್ರಾಯ, ಭಾಷಣಗಳನ್ನು ಸಂವಿಧಾನ ಚರ್ಚೆಗಳನ್ನು ದಾಖಲಿಸುವ ಮುಖಾಂತರ ಲಿಂಗ ಸಂಬಂಧದಲ್ಲಿ ಅವರ ಧೋರಣೆಯನ್ನು ಚರ್ಚಿಸಲಾಗಿವೆ.

**೨. ಲೈಂಗಿಕತವಾದಿಯಲ್ಲದ ವಿಮರ್ಶೆ ಕ್ರಮ:**

ಮಹಿಳಾ ಅಧ್ಯಯನದಲ್ಲಿ ಇತ್ತೀಚೆಗೆ "ನಾನ್ ಸೆಕ್ಸಿಸ್ಟ್" ಅಧ್ಯಯನ ಕ್ರಮವನ್ನು ಬಳಸಲಾಗುವುದು. ಈ ಅಧ್ಯಯನ ಕ್ರಮವನ್ನು ಆಧುನಿಕೋತ್ತರ ಸ್ತ್ರೀವಾದಿಗಳು ಪರಿಚಯಿಸಿದರು. ಮಹಿಳೆ ಮತ್ತು ಜಾತಿಯಲ್ಲಿನ ಲಿಂಗಸಂಬಂಧಿ ಸಾಮಾಜಿಕ ವಿಮರ್ಶೆಯ ಗ್ರಹಿಕೆಯಲ್ಲಿ ಶಕ್ತಿ ಮತ್ತು ಸಮಸ್ಯೆಗಳೆರಡು ಪ್ರಖರವಾಗಿ ಕಾಣುವವು. ಆದರೆ ಎರಡಕ್ಕೂ ಸಂಬಂಧವಿಲ್ಲದಂತೆ ಗ್ರಹಿಸುವ ಕ್ರಮಗಳು ಸುತ್ತಿ ಬಳಸಿ ಕೊನೆಗೆ ಬರುವುದು ಹೆಣ್ಣಿನ ಅಸ್ತಿತ್ವದ ನೆಲೆಗೆ. ಆದರೆ ಇದರ ಬಗೆಗೆ ತಿಳಿದವರು ನೇರವಾಗಿ ಈ ವಿಷಯವನ್ನು ಚರ್ಚಿಸಬಹುದು. ಸಮಸ್ಯೆ ಎಂದರೆ ಹೆಣ್ಣು-ಗಂಡು ನಡುವಿನ ಮುಂದಿನ ಒಡನಾಟ ಹೇಗೆ ಎಂಬುದೇ ದೊಡ್ಡ ಸಮಸ್ಯೆ ಇದೊಂದು ಚಳುವಳಿ ಮತ್ತು ಅಧ್ಯಯನದ ಎರಡು ಸವಾಲು ಅಂದುಕೊಂಡಿದ್ದೇವೆ.

ನಾನ್ ಸೆಕ್ಸಿಸ್ಟ್ ವಿಮರ್ಶೆ ಕ್ರಮಗಳನ್ನು ಬಳಸಿ ಈ ಅಧ್ಯಯನ ಮಾಡುವಾಗ ನನಗೆ ಎದುರಾದ ಸಮಸ್ಯೆಗಳನ್ನು ಇಲ್ಲಿ ಪ್ರಸ್ತಾಪಿಸುವುದು ಉಪಯುಕ್ತ. ಇಲ್ಲಿರುವ ಅತ್ಯಂತ ಮುಖ್ಯ ಸಮಸ್ಯೆ ಎಂದರೆ ಅಂಬೇಡ್ಕರ್ ಅಧ್ಯಯನಗಳಲ್ಲಿನ ವಿಧಾನ ಅಸ್ಪಷ್ಟವಾಗಿರುವುದು. ಅವರ ಎಲ್ಲ ಅಧ್ಯಯನಗಳಲ್ಲಿ ಈ ಅಂಶ ಎದ್ದು ಕಾಣುತ್ತದೆ.

**೩. ಆಶಯ ವಿಶ್ಲೇಷಣೆ**

ಆಶಯ ವಿಶ್ಲೇಷಣೆ ಎನ್ನುವಂತಹದ್ದು ಅಧ್ಯಯನಗಳಲ್ಲಿ ಮಾಹಿತಿ ವಿಶ್ಲೇಷಣೆಗೆ ಬಳಸುವ ಕ್ರಮ. ಈ ಅಧ್ಯಯನದ ವಸ್ತು ಮಹಿಳೆಯರು ಜಾತಿಗಳು, ಮತ್ತು ಅಂಬೇಡ್ಕರ್ ಗ್ರಹಿಕೆಗಳಿಗೆ ಸಂಬಂಧಿಸಿದ್ದು. ಇದರ ಬಗೆಗೆ ಎರಡು ನಿಲುವುಗಳಿವೆ. ಒಂದು ಅಂಬೇಡ್ಕರ್ ಮಹಿಳೆಯರನ್ನು ನೋಡುವದೃಷ್ಟಿ, ಇನ್ನೊಂದು ಜಾತಿ ಮಹಿಳೆಯರನ್ನು ನೋಡುವ ದೃಷ್ಟಿ ಇವೆರಡನ್ನು ಕುರಿತ ಆಶಯಗಳಲ್ಲಿನ ಧೋರಣೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೪. ತೌಲನಿಕ ಅಧ್ಯಯನ**

ಅಂಬೇಡ್ಕರ್ ದೃಷ್ಟಿಕೋನ ರೂಪಿಕೆಗೆ ಕಾರಣಗಳನ್ನು, ಅದರ ಜೊತೆಯಲ್ಲಿಯೇ ಅವರ ಸಮಕಾಲೀನ ಚಿಂತಕರು ಮಹಿಳೆಯರನ್ನು ಮತ್ತು ಜಾತಿಗಳನ್ನು ಕುರಿತಂತೆ ಗ್ರಹಿಸಿದ ಗ್ರಹಿಕೆಗಳನ್ನು ಹಿಡಿದಿಡುತ್ತ ಅವುಗಳನ್ನು ಅಂಬೇಡ್ಕರ್ ಮಹಿಳಾ ಕುರಿತಾದ ವಿಷಯಗಳೊಂದಿಗೆ

ಹೋಲಿಸಿ ಅಂಬೇಡ್ಕರ್ ಚಿಂತನಾ ಕ್ರಮ ಹೇಗೆ ಭಿನ್ನ ಎಂದು ಗುರುತಿಸಬಹುದು. ಅದಕ್ಕೂ ಆ ಸಂದರ್ಭದ ಭಾರತೀಯರ ಸಾಮಾಜಿಕ ಚರ್ಚೆಗಳು, ವ್ಯತ್ಯಾಸ ಸಾಮ್ಯತೆ ನಡುವಿನ ಸಂಬಂಧವನ್ನು ತಿಳಿಯಲಾಗುವುದು. ಹಾಗಾಗಿ ಆ ಕಾಲವಧಿಯ ಪ್ರಮುಖ ಗುಣಲಕ್ಷಣಗಳು ಅಂಬೇಡ್ಕರ್ ಆಲೋಚನೆಗಳಲ್ಲಿ ಹೇಗೆ ಒಡಮೂಡಿವೆ ಎಂಬುದನ್ನು ನಿರ್ವಚಿಸಬಹುದು.

## ೧.೫. ಅಧ್ಯಯನ ಸಂಬಂಧಿ ಸಾಹಿತ್ಯ : ಒಂದು ಸಮೀಕ್ಷೆ

ಮಹಿಳಾ ಅಧ್ಯಯನದಲ್ಲಿ ಎರಡು ರೀತಿಯ ಅಧ್ಯಯನಗಳು ನಡೆಯುತ್ತಿವೆ. ಒಂದು ಸಾಹಿತ್ಯ ಆಧಾರಿಸಿದ ಅಧ್ಯಯನ, ಎರಡು ಕ್ಷೇತ್ರ ಆಧಾರಿಸಿದ ಅಧ್ಯಯನ. ಈ ಅಧ್ಯಯನ ಸಾಹಿತ್ಯಕ್ಕೆ ಸಂಬಂಧಿಸಿರುವುದರಿಂದ ನಾನು ಮೊದಲ ವರ್ಗದಲ್ಲಿ ಬರುವ ಅಧ್ಯಯನಗಳು ಕುರಿತು ಮಾತ್ರ ಮಾತನಾಡುತ್ತೇನೆ. ಸಾಹಿತ್ಯಿಕ ಕುರಿತಾದ ಅಧ್ಯಯನಗಳನ್ನು ಪ್ರವೇಶಿಸುವುದಕ್ಕೆ ಮಹಿಳಾ ಅಧ್ಯಯನದಲ್ಲಿ ಒಂದು ಮಟ್ಟಿಗೆ ಆಕರ ಇದೆ. ಅದು ಎಷ್ಟು ಪ್ರಮಾಣದಲ್ಲಿದೆ. ಅದರ ಗುಣಮಟ್ಟ ಯಾವುದು ಎನ್ನುವುದು ಬೇರೆ ಸಮಸ್ಯೆ. ಅಧ್ಯಯನಗಳಿಗೆ ಈ ಸಮಸ್ಯೆಯನ್ನು ಮನವರಿಕೆ ಮಾಡಿದ್ದು ಸಹ ಈ ಸಾಹಿತ್ಯಿಕ ಆಕರಗಳಾಗಿವೆ.

ಅಧ್ಯಯನದಲ್ಲಿ ಬಳಸಿದ ಸಾಹಿತ್ಯ ಆಕರವನ್ನು ಎರಡು ಭಾಗಗಳಾಗಿ ಗುರುತಿಸಿಕೊಳ್ಳಬಹುದು. ಒಂದು ಪ್ರಾಥಮಿಕ ಸಾಹಿತ್ಯದ ಆಕರ. ಇದು ಅಂಬೇಡ್ಕರ ಸಮಗ್ರ ಸಾಹಿತ್ಯವನ್ನು ಒಳಗೊಂಡಿದೆ. ಎರಡು ಅನುಷಂಗಿಕ ಆಕರ ಇದು ಮಹಿಳಾ ಅಧ್ಯಯನ ಸಾಹಿತ್ಯ ಎನ್ನುವಾಗ ಮಹಿಳೆ ಕುರಿತು ಅಂಬೇಡ್ಕರ್ ಅಧ್ಯಯನಗಳನ್ನು ಒಳಗೊಂಡಿದೆ. ಈ ಮೂಲಕವೇ ಅಧ್ಯಯನ ರೂಪುಗೊಳ್ಳಲು ಸಾಧ್ಯವಾಯಿತು. ಮುಂದೆ ಸಾಹಿತ್ಯದ ಎರಡು ನೆಲೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಏಕೆಂದರೆ ಅಧ್ಯಯನದ ಒಳಗೆ ವಿವಿಧ ಅಧ್ಯಯಗಳಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ. ಪ್ರಾಥಮಿಕ ಆಕರ ಅಂಬೇಡ್ಕರ್ ಸಾಹಿತ್ಯ ಆಗಿರುವುದರಿಂದ ಇದನ್ನೆ ಮೊದಲು ಚರ್ಚಿಸುವುದು ಸೂಕ್ತ.

### ಪ್ರಾಥಮಿಕ ಆಕರ: ಅಂಬೇಡ್ಕರ್ ಸಮಗ್ರ ಸಾಹಿತ್ಯ

ಅಂಬೇಡ್ಕರ್ ಕುರಿತು ಲಭ್ಯವಾದ ಸಾಹಿತ್ಯಿಕ ಆಕರವನ್ನು ಅನೇಕ ಭಾಗಗಳಾಗಿ ವಿಂಗಡಿಸಿಕೊಳ್ಳಬಹುದು.

೧. ಜೀವನ ಚರಿತ್ರೆ

೨. ಸಂಶೋಧನೆಗಳು

೩. ಪತ್ರಿಕೆಗಳು

೪. ಚಳುವಳಿ ಕುರಿತು ಸಾಹಿತ್ಯ

೫. ಆಡಳಿತಗಾರರಾಗಿ ತೆಗೆದುಕೊಂಡ ತೀರ್ಮಾನಗಳು

## ೧. ಜೀವನ ಚರಿತ್ರೆ

ಅಂಬೇಡ್ಕರ್ ಸಮಗ್ರ ಜೀವನ ಕುರಿತು ಅನೇಕ ಪುಸ್ತಕಗಳು ಕನ್ನಡ ಮತ್ತು ಇಂಗ್ಲೀಷ್ ಭಾಷೆಯಲ್ಲಿ ಬಂದಿವೆ. ಆದರೆ ಇಂಗ್ಲೀಷ್‌ನ ಪ್ರಮುಖ ಪುಸ್ತಕಗಳು ಕನ್ನಡಕ್ಕೆ ಅನುವಾದಗೊಂಡಿರುವ ಹಿನ್ನೆಲೆಯಲ್ಲಿ ಅಂಬೇಡ್ಕರ್ ಸಮಗ್ರ ಜೀವನ ಕುರಿತು ಪ್ರಕಟವಾಗಿರುವ ಪುಸ್ತಕಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ. ಅವುಗಳೆಂದರೆ:

ವಸಂತ ಮೂನ್ (ಮೂಲ), ಅನು: ಬಿ.ವಿ. ಸನದಿ, ಡಾ. ಬಾಬಾಸಾಹೇಬ್ ಅಂಬೇಡ್ಕರ್ (ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ) (೨೦೦೨). ಮ.ನ. ಜವರಯ್ಯ, ಅಂಬೇಡ್ಕರ್: ವಿದ್ಯಾರ್ಥಿ ಜೀವನ ಚರಿತ್ರೆ, (೧೯೯೯). ಬಿ.ವಿ. ಇನಾಂದರ್, ಡಾ. ಅಂಬೇಡ್ಕರ್ (ವ್ಯಕ್ತಿ ಮತ್ತು ವಿಚಾರ) (೧೯೮೬). Kear Dncehanjay, Dr. Ambedekar Life and mission, (೧೯೯೦).

ಈ ಪುಸ್ತಕಗಳಲ್ಲಿ ಅಂಬೇಡ್ಕರ್ ಬದುಕಿನ ಸೂಕ್ಷ್ಮ ಅತಿಸೂಕ್ಷ್ಮ ಸಂಗತಿಗಳನ್ನೆ ದಾಖಲಿಸುತ್ತಿದ್ದಾರೆ. ಅವರ ಅನುಭವಗಳೇ ಅವರಿಗೆ ಹೇಗೆ ದೃಷ್ಟಿಕೋನ ರೂಪಿಸಿದವು ಎನ್ನುವುದನ್ನು ವಿವರಿಸಿದ್ದಾರೆ.

## ೨. ಸಂಶೋಧನೆಗಳು

ಅಂಬೇಡ್ಕರ್ ತಮ್ಮ ಬದುಕಿನ ಬಹುತೇಕ ಸಮಯವನ್ನು ಅಧ್ಯಯನಕ್ಕಾಗಿ ಮೀಸಲಿಟ್ಟದ್ದರು. ಹಾಗಾಗಿ ಅವರು ಅನೇಕ ವಿಷಯ ಕುರಿತು ಅಧ್ಯಯನ ಮಾಡಿದ್ದಾರೆ. ಈ ಹಿನ್ನಲೆಯಲ್ಲಿ ಬಂದ ಅವರ ಬರಹಗಳನ್ನು ಎರಡು ರೀತಿಯಲ್ಲಿ ಗುರುತಿಸಬಹುದು ಒಂದು ಪ್ರಕಟಿತ ಬರಹಗಳು, ಎರಡು ಅಪ್ರಕಟಿತ ಬರಹಗಳು.

### ಒಂದು: ಪ್ರಕಟಿತ ಬರಹಗಳು

ಈ ಭಾಗದಲ್ಲಿ ಅಂಬೇಡ್ಕರ್ ಪದವಿಗಾಗಿ ಮಂಡಿಸಿದ ಪ್ರಬಂಧಗಳ ಜೊತೆಗೆ ಸಂಶೋಧನೆ ಲೇಖನಗಳು ಸೇರಿವೆ ಅವುಗಳೆಂದರೆ.

"ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಮತ್ತು ಹಣಕಾಸು ವ್ಯವಸ್ಥೆ" (೧೯೧೫). "ಬ್ರಿಟಿಷ್ ಇಂಡಿಯಾದಲ್ಲಿ ಪ್ರಾಂತೀಯ ಹಣಕಾಸಿನ ವಿಕಾಸ" (೧೯೧೭). "ಭಾರತದಲ್ಲಿ ಜಾತಿಗಳು ಅವುಗಳ ರಚನಾಕ್ರಮ ಉತ್ಪತ್ತಿ ಹಾಗೂ ಪ್ರಮಾಣ" (೧೯೧೮). ಶ್ರೀಯುತ ರಸಿಲಾ ಮತ್ತು ಸಾಮಾಜಿಕ ಪುನರ್ ರಚನೆ" (೧೯೧೮). "Provincial Decentralizaltion perial Finance in British indi" (1921). "ರೂಪಾಯಿ ಸಮಸ್ಯೆ (೧೯೨೨). ಕಾಂಗ್ರೆಸ್ ಮತ್ತು ಗಾಂಧಿ ಅಸ್ಪೃಶ್ಯರಿಗಾಗಿ ಮಾಡಿರುವುದೇನು?" (೧೯೪೫). "ಶ್ರೀಯುತ ಗಾಂಧಿ ಮತ್ತು ಅಸ್ಪೃಶ್ಯರ ವಿಮೋಚನೆ" (೧೯೪೨). ಯಾರು ಶೂದ್ರರಾಗಿದ್ದರು? ಅವರು ಹೇಗೆ ಹಿಂದೂ-ಆರ್ಯ ಸಮಾಜದ ನಾಲ್ಕನೆಯ ವರ್ಣದವರಾದರು? "ಅಸ್ಪೃಶ್ಯರು ಅವರು ಯಾರು ಮತ್ತು

ಏಕೆ ಅಸ್ಪೃಶ್ಯರಾದರು?" "ಭಾರತ ಮತ್ತು ಪಾಕಿಸ್ತಾನ ವಿಭಜನೆ" (೧೯೪೦). "ರಾಜ್ಯಗಳು ಮತ್ತು ಅಲ್ಪಸಂಖ್ಯಾತರು" "ಬುದ್ಧ ಮತ್ತು ಆತನ ಧಮ್ಮ" (೧೯೫೬).

ಈ ಅಧ್ಯಯನಗಳಲ್ಲಿ ಅಂಬೇಡ್ಕರ್ ವಿಶ್ಲೇಷಣೆ ಕ್ರಮ ಆಯಾ ವಿಷಯಗಳಿಗೆ ವಿಭಿನ್ನ ದೃಷ್ಟಿಕೋನ ಒದಗಿಸುತ್ತದೆ. ಅದರಲ್ಲಿಯೂ ಭಾರತದಲ್ಲಿ ಜಾತಿಗಳ (ರಚನಾಕ್ರಮ-ಉತ್ಪತ್ತಿ) ಮಹಿಳೆ ಮತ್ತು ಜಾತಿ ಹಿನ್ನಲೆಯಲ್ಲಿ ವಿವಾಹ ಕುರಿತು ಚರ್ಚಿಸುವ ಕ್ರಮ ಈ ಅಧ್ಯಯನವು ಚರ್ಚಿಸಲೇಬೇಕಾದ ಆಕರವಾಗಿದೆ. ಆದ್ದರಿಂದ ಮೂರನೇ ಅಧ್ಯಯದಲ್ಲಿ ಈ ಸಂಗತಿಗಳನ್ನ ಮುಖ್ಯ ಚರ್ಚೆಗೆ ತರಲಾಗಿದೆ. ಇನ್ನೂ ಶೂದ್ರ ಯಾರು? ಎಂಬ ಕೃತಿ ಅಂಬೇಡ್ಕರ್ ಹಿಂದೂ ಸಮಾಜದ ಶ್ರೇಣೀಕರಣ ಕುರಿತ ಚರ್ಚೆ ಮಹತ್ವದ್ದು ಮಹಿಳೆ ಮತ್ತು ಜಾತಿಗಳ ನಡುವಿನ ಅಂತರಗಳ ಮಹಿಳಾ ಸಮುದಾಯಕ್ಕೆ ತಂದೊಡ್ಡುವ 'ದ್ವಿಗುಣ' ಶೋಷಣೆಗಳನ್ನು ಸೂಚಿಸುತ್ತದೆ.

**ಎರಡು: ಅಪ್ರಕಟಿತ ಬರಹಗಳು**

ಅಂಬೇಡ್ಕರ್ ಕೈಗೊಂಡ ಅನೇಕ ಅಧ್ಯಯನಗಳು ಪ್ರಕಟಗೊಳ್ಳದೆ ಹಾಗೆಯೇ ಉಳಿದಿದೆ. ಅನಂತರ ಮಹಾರಾಷ್ಟ್ರ ಸರ್ಕಾರದ ಶಿಕ್ಷಣ ಇಲಾಖೆ ಅವುಗಳನ್ನು ಸಂಗ್ರಹಿಸಿ ಪ್ರಕಟಿಸಿದೆ. ಅವುಗಳೆಂದರೆ: ಹಿಂದೂ ಧರ್ಮದ ಒಗಟುಗಳು ಅದರಲ್ಲಿ ಅನೇಕ ಬಿಡಿಲೇಖನಗಳಿವೆ. ಅಂದರೆ ಒಗಟು -೨ "ವೇದಗಳ ಹುಟ್ಟು ಬ್ರಾಹ್ಮಣರ ಸ್ಪಷ್ಟೀಕರಣ ಅಥವಾ ಲಂಬೋಕ್ತಿ ಕಲೆಯಕಸರತ್ತು", ಒಗಟು-೧೦ "ಬ್ರಾಹ್ಮಣರು ಹಿಂದೂ ದೈವಗಳನ್ನು ಪರಸ್ಪರ ಕಾದಾಡುವಂತೆ ಏಕೆ ಮಾಡಿದರು?," ಒಗಟು-೧೨ "ಬ್ರಾಹ್ಮಣರು ದೇವರುಗಳನ್ನು ಪದಚ್ಯುತಗೊಳಿಸಿ ದೇವಿಯರನ್ನೇಕೆ ಮೇಲೆರಿಸಿದರು?" ಒಗಟು-೧೯ "ಪಿತೃತ್ವದಿಂದ ಮಾತೃತ್ವಕ್ಕೆ ಬದಲಾವಣೆ ಇದರಿಂದ ಬ್ರಾಹ್ಮಣರು ಗಳಿಸಲು ಬಯಸಿದ್ದೇನು?" ಇತ್ಯಾದಿಗಳು ಮುಖ್ಯವಾದ ಲೇಖನಗಳು. ಒಗಟು-೧೨, ೧೯ರ ಲೇಖನಗಳು ವೈದಿಕ ರಾಜಕರಣದಿಂದ ಮಹಿಳೆಯನ್ನು ಹೇಗೆ ವೈಭವೀಕರಿಸಲಾಯಿತು ಎಂಬುದನ್ನು ಸೂಕ್ಷ್ಮವಾಗಿ ಬಿಚ್ಚಿಡುತ್ತವೆ.

ಅಸ್ಪೃಶ್ಯರು ಅಥವಾ ಭಾರತದ ಕೊಳೆಗೇರಿಗಳ ಮಕ್ಕಳು ಕುರಿತಾದ ಅವರ ಅಧ್ಯಯನ ಒಳಗೊಂಡಿರುವ ಲೇಖನಗಳೆಂದರೆ: "ಅಸ್ಪೃಶ್ಯತೆ ಅದರ ಮೂಲ", "ಅಸ್ಪೃಶ್ಯತೆ ಮತ್ತು ಅರಾಜಕತೆ", "ಹಿಂದೂ ಮತ್ತು ಜಾತಿ ಪದ್ಧತಿಯಲ್ಲಿ ಅವರ ನಂಬಿಕೆ". "ಪ್ರತ್ಯೇಕತೆಯ ಸಮಸ್ಯೆ", "ಬೇಧ-ಪಕ್ಷಪಾತ ಸಮಸ್ಯೆ", "ಸ್ಪೃಶ್ಯರು ಮತ್ತು ಅಸ್ಪೃಶ್ಯರು", "ಜಾತಿಯೆಂಬ ಶಾಪ", "ಅಸ್ಪೃಶ್ಯರ ಬಂಡಾಯ" ಇತ್ಯಾದಿ ಮುಖ್ಯವಾದವುಗಳು. ಅದರಲ್ಲಿ ಅಸ್ಪೃಶ್ಯತೆ ಮತ್ತು ಅರಾಜಕತೆ ಚರ್ಚೆ ಮಹತ್ವದ್ದು ಏಕೆಂದರೆ ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗುವ ದಲಿತ ಮಹಿಳೆಯರ ಮೇಲಿನ ನಡೆಯುವ ದೌರ್ಜನ್ಯ ಸಂಬಂಧಿ ಘಟನೆಗಳನ್ನು ದಾಖಲಿಸುತ್ತಾರೆ.

ಹಿಂದೂ ಧರ್ಮ ಕುರಿತು ಅವರ ವಾದ ಅಭೂತ ಪೂರ್ವವಾದುದು. ಏಕೆಂದರೆ ಇದು ಮುಂದೆ ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವ ಮೂಲಕವೇ ದಲಿತರ ವಿಮೋಚನೆ ಸಾಧ್ಯ ಎನ್ನುವುದನ್ನು ನಂಬಿ ಅಂಬೇಡ್ಕರ್ ಮತಾಂತರ ಹೊಂದಿದರು. ಈ ಬಗೆಗಿನ ಅವರ ಅಧ್ಯಯನಗಳೆಂದರೆ: "ಹಿಂದೂ ಧರ್ಮ ತತ್ವಜ್ಞಾನ" "ಭಾರತ ಮತ್ತು ಸಮತಾವಾದ ಪೂರ್ವಭಾವಿ ಅವಶ್ಯಕತೆಗಳು" "ಶೂದ್ರ ಮತ್ತು ಪ್ರತಿಕ್ರಾಂತಿ" "ಸ್ತ್ರೀಯರು ಮತ್ತು ಪ್ರತಿಕ್ರಾಂತಿ" "ಬುದ್ಧ ಮತ್ತು ಕಾರ್ಲ್‌ಮಾರ್ಕ್ಸ್" ಬರಹಗಳು ಪ್ರಮುಖವಾದವು. ಹಿಂದೂ ಧರ್ಮ ತತ್ವಜ್ಞಾನ ನ್ಯಾಯ ಮತ್ತು ಉಪಯುಕ್ತತೆ ಎಂಬ ಪರೀಕ್ಷೆ ಅಡಿಯಲ್ಲಿ ಅವರ ಹಿಂದೂ ಧರ್ಮ ಅಸಮಾನತೆಯ ಎಲ್ಲ ನೆಲೆಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ. ಸ್ತ್ರೀಯರು ಮತ್ತು ಪ್ರತಿಕ್ರಾಂತಿ ಧರ್ಮ ಸಂಬಂಧಿ ಸ್ತ್ರೀಯರು ಬಳಸಬೇಕಾದ ಭಾಗಗಳನ್ನು ಚರ್ಚಿಸುತ್ತಾರೆ. ಅಂಬೇಡ್ಕರ್ ಪ್ರಾಚೀನ ಭಾರತ ಕುರಿತು ಅನೇಕ ಅಧ್ಯಯನಗಳನ್ನು ಮಾಡಿದ್ದಾರೆ. ಪ್ರಾಚೀನ ಭಾರತದಲ್ಲಿ "ಅಸ್ಪೃಶ್ಯರು ಮತ್ತು ಬ್ರಿಟಿಷ್ ಸಾಮ್ರಾಜ್ಯ ಇಂಗ್ಲೀಷ್ ಸಂವಿಧಾನ ಕುರಿತ ಉಪನ್ಯಾಸಗಳು ಮುಖ್ಯವಾದವುಗಳಾಗಿವೆ.

### ೩. ಪತ್ರಿಕೆಗಳು

ಅಂಬೇಡ್ಕರ್ ಭಾರತದಲ್ಲಿ ಅಸ್ಪೃಶ್ಯರ ಸ್ಥಿತಿಗತಿ ಕುರಿತು ಸ್ವಾತಂತ್ರ್ಯ ಹೋರಾಟದಲ್ಲಿ ನಿಮ್ನ ವರ್ಗದ ಜವಾಬ್ದಾರಿ ಬಗ್ಗೆ ಅಸ್ಪೃಶ್ಯರ, ರಾಜಕೀಯ, ಸಾಮಾಜಿಕ, ಆರ್ಥಿಕ ಹಕ್ಕುಗಳ ಬಗ್ಗೆ ಜಾಗೃತಿ ಮೂಡಿಸಲು ಅನೇಕ ಪತ್ರಿಕೆಗಳನ್ನು ಆರಂಭಿಸಿದರು. ಅವುಗಳೆಂದರೆ:

"ಮೂಕನಾಯಕ" (೧೯೨೦) ಇದರ ಉದ್ದೇಶ ಭಾರತದಲ್ಲಿ ಬದಲಾಗುತ್ತಿದ್ದ ಸಾಮಾಜಿಕ ಮತ್ತು ರಾಜಕೀಯ ಸಂದರ್ಭದಲ್ಲಿ ಅಸ್ಪೃಶ್ಯರ ದನಿಯನ್ನು ಪ್ರಸುತ್ತ ಪಡಿಸುತ್ತಿತ್ತು. "ಬಹಿಷ್ಕೃತ ಭಾರತ ಪಾಕ್ಷಿಕ" (೧೯೨೭) ಚೌಡರಾಕೆರೆಯ ನೀರು ಮುಟ್ಟುವ ಪ್ರಸಂಗದ ನಂತರ ಅಂಬೇಡ್ಕರ್ ಈ ಪತ್ರಿಕೆಯನ್ನು ತಂದರು. "ಜನತಾ ಪತ್ರಿಕೆ" (೧೯೩೦) ಭಾರತದ ಸ್ವಾತಂತ್ರ್ಯ ಹೋರಾಟದ ಹಿನ್ನಲೆಯಲ್ಲಿ ನಿಮ್ನವರ್ಗದವರ ಜವಾಬ್ದಾರಿಯ ಬಗ್ಗೆ ಅರಿವು ಮೂಡಿಸಲು ಈ ಪತ್ರಿಕೆಯನ್ನು ಹೊರತಂದರು. ಈ ಮೂಲಕ ಅನೇಕ ವೈಚಾರಿಕ ಬರಹಗಳನ್ನು ಪ್ರಕಟಿಸಿದರು.

### ೪. ಚಳುವಳಿ ಕುರಿತು ಸಾಹಿತ್ಯ

ಅಂಬೇಡ್ಕರ್ ಭಾರತದಲ್ಲಿನ ಅಸ್ಪೃಶ್ಯರ, ರೈತರ, ಕಾರ್ಮಿಕ, ಸಮಸ್ಯೆಗಳ ಅಧ್ಯಯನಕ್ಕೆ ಅಷ್ಟು ಸೀಮಿತವಾಗದೆ. ಅದನ್ನು ತೊಲಗಿಸಲು ಅನೇಕ ಸಂಘಟನೆ, ಪಕ್ಷಗಳು ಕಟ್ಟಿದರು. ಚಳುವಳಿ, ಸಮಾವೇಶಗಳನ್ನು ಸಂಘಟಿಸಿದರು. ಹಾಗೆಯೇ ಅನೇಕ ಸಭೆಗಳಲ್ಲಿ ಭಾಷಣ ಮಾಡಿದರು. ಸಮಿತಿಗಳಿಗೆ ಸಾಕ್ಷ್ಯ ನೀಡಿದ್ದಾರೆ. ಅಲ್ಲದೆ ಅನೇಕ ಕಡೆ ಉಪನ್ಯಾಸ ನೀಡಿದರು.

ಅವುಗಳೆಂದರೆ: "ಕೊಲ್ಲಾಪುರ ಮೊಂಗಾವ್‌ನಲ್ಲಿ ಅಸ್ಪೃಶ್ಯರ ಸಮಾವೇಶ" (೧೯೨೦). "ಅಖಿಲ ಭಾರತ ಮಟ್ಟದ ಅಸ್ಪೃಶ್ಯರ ಸಮಾವೇಶ ನಾಗಪುರ" (೧೯೨೦). "ಚೌಡರ್ ಕೆರೆಯ ನೀರು ಮುಟ್ಟುವ ಚಳುವಳಿ" (೧೯೨೭). "ಮಹರ್ ಸತ್ಯಾಗ್ರಹ" (೧೯೨೭). "ಮಹಡ್‌ನಲ್ಲಿ ರೈತ ಸಮಾವೇಶ" (೧೯೩೬) ಇತ್ಯಾದಿ ಬಗೆಗೆ ಪ್ರಸ್ತಾಪಿಸಬಹುದು. ಈ ಕುರಿತು ಅನೇಕ ಸಂಗತಿಗಳು ಬೆಳಕಿಗೆ ಬರಬೇಕಾಗಿದೆ. ಘಟನೆಗಳ ಬಗ್ಗೆ ಮಾಹಿತಿ ಲಭ್ಯವಾದರೆ ಈ ಕುರಿತಾದ ಅಧ್ಯಯನ ಮತ್ತೊಂದು ಹೊಸ ರೂಪಪಡೆಯುತ್ತದೆ.

### ೪.೧. ಸಂಘ ಸಂಸ್ಥೆಗಳು:

ಅಂಬೇಡ್ಕರ್ ಅನೇಕ ಸಂಘ-ಸಂಸ್ಥೆ-ಪಕ್ಷಗಳನ್ನು ಸ್ಥಾಪಿಸಿದರು. ಅವುಗಳೆಂದರೆ: "ಬಹಿಷ್ಕೃತ ಹಿತಕಾರಿಣಿ ಸಭಾ" (೧೯೨೯). "ಸಮಾಜ್ ಸಮತಾಸಂಘ" (೧೯೨೭). "ಸಮತಾ ಸೈನಿಕ ದಳ" (೧೯೨೮). "ನಿಮ್ನವರ್ಗದವರ ಶಿಕ್ಷಣ ಸಂಸ್ಥೆ" (೧೯೨೮). "ಇಂಡಿಪೆಂಡೆಂಟ್ ಲೇಬರ್ ಪಾರ್ಟಿ" (೧೯೩೬). "All nidia Scheduled Castes Fedartion"(1941). "ಪೀಪಲ್ಸ್ ಎಜುಕೇಷನ್ ಸೊಸೈಟಿ" (೧೯೪೬) ಸ್ಥಾಪಿಸಿದರು. ಇವೆಲ್ಲ ಸಂಘ, ಸಂಸ್ಥೆ, ಪಕ್ಷಗಳಿಗೆ ಅಂಬೇಡ್ಕರ್ ಉಪಕ್ರಮಗಳನ್ನು ಬರೆದರು. ಅದರ ಉದ್ದೇಶಗಳ ಹಿಂದಿನ ನೋಟವೇ ಅವರ ಚಿಂತನಾಕ್ರಮವನ್ನು ಸೂಚಿಸುತ್ತದೆ.

### ೪.೨. ಹೇಳಿಕೆಗಳು – ಸಾಕ್ಷ್ಯಗಳು – ಉಪನ್ಯಾಸಗಳು:

ಭಾರತದಲ್ಲಿ ತಳಸಮುದಾಯಗಳಿಗೆ ರಾಜಕೀಯ ಹಕ್ಕು ಒದಗಿಸಲು ನೇಮಕಗೊಂಡಿದ್ದ ಸೌತ್ ಬರೋ ಸಮಿತಿಗೆ ೧೯೧೯ರಲ್ಲಿ ನಿಮ್ನ ವರ್ಗದ ಮತದಾನಹಕ್ಕು ಮತ್ತು ಪ್ರತ್ಯೇಕ ಮೀಸಲಾತಿ ಕುರಿತು ಸಾಕ್ಷ್ಯ ನೀಡಿದರು.

ನಂತರ ಭಾರತೀಯ ರಾಷ್ಟ್ರೀಯ ಚಳುವಳಿ ಕುರಿತು ಅಧ್ಯಯನ ಮಾಡಲು ಬ್ರಿಟಿಷ್ ಸರ್ಕಾರ ೧೯೨೮ರಲ್ಲಿ ಸೈಮನ್ ಕಮೀಷನ್ ರಚಿಸಿತು. ಅದರ ಮುಂದೆ ಹಾಜರಾದ ಅಂಬೇಡ್ಕರ್ ನಿಮ್ನ ವರ್ಗದ ಸಾಮಾಜಿಕ ಪರಿಸ್ಥಿತಿಯನ್ನು ವಿವರಿಸುತ್ತ ಚುನಾವಣೆಗೆ ಮೀಸಲು ಸ್ಥಾನಗಳಿಗೆ ಒತ್ತಾಯಿಸಿದರು. ಇನ್ನೊಂದು ಕಡೆ ದುಂಡು ಮೇಜಿನ ಮೂರು ಸಮ್ಮೇಳನದಲ್ಲಿ ಭಾಗವಹಿಸಿ ಅವರು ಪ್ರತ್ಯೇಕ ಚುನಾವಣೆ ಹಕ್ಕನ್ನು ಮಂಡಿಸಿದರು. ಈ ಬೇಡಿಕೆಗೆ ಬ್ರಿಟಿಷ್ ಸರ್ಕಾರದಿಂದ ಒಪ್ಪಿಗೆಯೂ ಸಿಕ್ಕಿತು.

### ೪.೩. ಅಂಬೇಡ್ಕರ್‌ರವರ ಭಾಷಣಗಳೆಂದರೆ

೧೯೪೩ರಲ್ಲಿ ಎಂ.ಜಿ. ರಾನಡೆಯವರ ಜನ್ಮದಿನ ನಿಮಿತ್ತ ಅಂಬೇಡ್ಕರ್ "ರಾನಡೆ, ಗಾಂಧಿ ಮತ್ತು ಜಿನ್ನಾ" ಕುರಿತು ತೌಲನಿಕ ನೆಲೆಯಲ್ಲಿ ಸಮಾಜಕ್ಕೆ ಉಪಯುಕ್ತ ಆಲೋಚನೆಗಳನ್ನು ಪ್ರಸುತ್ತಪಡಿಸಿದರು.

ನಂತರ ಜಾತಿ ವಿರುದ್ಧ ಹೋರಾಡುವ ಉದ್ದೇಶದಿಂದ ಸ್ಥಾಪನೆಯಾದ 'ಜಾತ್ ತೋಡಕ್ ಮಂಡಲ' ಸಮಿತಿಯು ಲಾಹೋರ್‌ನಲ್ಲಿ ಸಮ್ಮೇಳನ ಆಯೋಜಿಸಿತು. ಅದರ ಅಧ್ಯಕ್ಷತೆಗೆ ಅಂಬೇಡ್ಕರ್‌ರನ್ನು ಆಹ್ವಾನಿಸಿದ್ದರು. ಇದಕ್ಕೆ ಅವರು "ಜಾತಿ ನಿರ್ಮೂಲನೆ" ಎಂಬ ಭಾಷಣ ಬರೆದಿದ್ದರು. ಕಾರಣಾಂತರಗಳಿಂದ ನಿಂತು ಹೋಯಿತು. ೧೯೪೮ರಲ್ಲಿ ಮಹಾಬೋಧಿ ಸೊಸೈಟಿಯ "Future of his Region" ಎಂಬ ವಿಷಯ ಕುರಿತು ಮಾತನಾಡಿದರು.

## ೫. ಆಡಳಿತಗಾರರಾಗಿ ತೆಗೆದುಕೊಂಡ ತೀರ್ಮಾನಗಳು

ಬ್ರಿಟಿಷ್ ಭಾರತದಲ್ಲಿ ಹಾಗೂ ಸ್ವಾತಂತ್ರ್ಯ ಭಾರತದ ಆಡಳಿತದಲ್ಲಿ ಅಂಬೇಡ್ಕರ್ ಅವರು ಒಬ್ಬ ಜನ ಪ್ರತಿನಿಧಿಯಾಗಿ ನೇಮಕ ಆಗಿದ್ದರು. ಅನೇಕ ಹುದ್ದೆಗಳನ್ನು ನಿಭಾಯಿಸಿದ್ದರು. ಆಗ ಅವರು ಮುಂಬಯಿ ಸಂಸತ್ತು, ಭಾರತದ ಸಂಸತ್ತಿನಲ್ಲಿ ಚರ್ಚಿಸಿದ ವಿಷಯಗಳು ಮಹತ್ವವಾದವು. ಅವುಗಳೆಂದರೆ "ಚಿಕ್ಕ ಹಿಡುವಳಿದಾರರ ಪರಿಹಾರ ಮಸೂದೆ" (೧೯೩೨). ಮಂಡಿಸಿದರು. ಈ ಮೂಲಕ ಅವರು ಭಾರತೀಯ ಕೃಷಿವಲಯಕ್ಕೆ "ಹೊಂದಾಣಿಕೆ ಕೃಷಿ ಕ್ಷೇತ್ರ" ಎಂಬ ಪರಿಕಲ್ಪನೆಯನ್ನು ಪರಿಚಯಿಸಿದರು.

ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದ ವರ್ಗಗಳ ಪರಿಸ್ಥಿತಿಯನ್ನು ಅಂಕಿ ಅಂಶಗಳ ಸಮೇತ ವಿವರಿಸಿದರು. ಜೊತೆಗೆ ಹಂಟರ್ ಆಯೋಗವು ಮಹಮ್ಮದೀಯರ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಮಾಡಿದ ಶಿಪಾರಸ್ಸುಗಳನ್ನು ನಿಮ್ನ ವರ್ಗದವರಿಗೆ ಅನ್ವಯಿಸದೆ ಹೋದರೆ ಅವರು ಎಂದಿಗೂ ಶೈಕ್ಷಣಿಕ ಪ್ರಗತಿ ಸಾಧಿಸಲು ಸಾಧ್ಯವಿಲ್ಲ ಎಂದರು.

ನಂತರ ಮಹಿಳಾ ಕಾರ್ಮಿಕರಿಗೆ ಹೆರಿಗೆ ಭತ್ಯೆ ಮತ್ತು ಗಣಿಗಳಲ್ಲಿ ಕೆಲಸದ ನಿಷೇಧ ಕುರಿತು ಅತ್ಯಂತ ವೈಜ್ಞಾನಿಕ ನೆಲೆಯಲ್ಲಿ ಪ್ರಸ್ತಾಪಿಸಿದರು. ಆ ಮೇಲೆ ೧೯೪೨ರಿಂದ ಐದು ವರ್ಷಗಳ ತನಕ ವೈಸರಾಯ್ ಸರ್ಕಾರದಲ್ಲಿ ಕಾರ್ಮಿಕ ಮಂತ್ರಿಯಾಗಿ ಅಂಬೇಡ್ಕರ್ ಕಾರ್ಮಿಕ ಸಮಸ್ಯೆಗಳನ್ನು ವಿವರಿಸಲು ಹಲವು ಹೊಸ ಪ್ರಯತ್ನ ಮಾಡಿದರು. ಅಸಂಘಟಿತ ಕಾರ್ಮಿಕರ ಹಿತರಕ್ಷಣೆಗೆ ಕ್ರಮ ಕೈಗೊಳ್ಳುವ ಮೂಲಕ ಹಲವು ಸಂಗತಿಗಳ ಬಗೆಗೆ ಬೆಳಕು ಚೆಲ್ಲಿದರು. ಈ ಎಲ್ಲಾ ಸಂಗತಿಗಳು ಸಹ ಅವರ ಬರಹಗಳಾಗಿ ಸಂಪುಟದಲ್ಲಿ ಸೇರಿಕೊಂಡಿವೆ.

ನಂತರ ಸ್ವತಂತ್ರ್ಯ ಭಾರತದ ಸಂವಿಧಾನ ರಚನೆ ಸಮಿತಿಯಲ್ಲಿ ಕರುಡು ಸಮಿತಿ ಅಧ್ಯಕ್ಷರಾದ ಅಂಬೇಡ್ಕರ್ ಏಳು ಅಧ್ಯಾಯಗಳ ೩೧೫ ಅನುಚ್ಛೇದಗಳುಳ್ಳ ಸಂವಿಧಾನ ರಚಿಸಿ ಕರಡು ಪ್ರತಿಯನ್ನು ಸಂಸತ್ತಿಗೆ ಸಲ್ಲಿಸಿದರು. ನಂತರ ಇದು ಅನೇಕ ಚರ್ಚೆಗೊಳಗಾಗಿ ನಂತರ ಅನುಮೋದನೆ ಪಡೆಯಿತು. ಇದರಲ್ಲಿ ಅವರು ಸಮಾನತೆ ತತ್ವ ಆಧಾರದ ಮೇಲೆ ಎಲ್ಲ ಜಾತಿ ಧರ್ಮ, ಲಿಂಗ, ವರ್ಣ, ಹಕ್ಕು ಬಾಧ್ಯತೆಗಳನ್ನು ಕಲ್ಪಿಸಿದರು. ಅವುಗಳನ್ನು ಐದನೇ ಅಧ್ಯಯನವೊಂದರಲ್ಲಿ ವಿಸ್ತೃತವಾಗಿ ಚರ್ಚಿಸಿದೆ.

ಇನ್ನೊಂದು ಕಡೆ ಅಂಬೇಡ್ಕರ್ ನೆಹರೂ ಸಂಪುಟದಲ್ಲಿ ಕಾನೂನು ಮಂತ್ರಿಯಾಗಿದ್ದರು. ಆಗ ಭಾರತೀಯ ಮಹಿಳೆಯರ ಸ್ಥಾನಮಾನಗಳು ಮಹಿಳೆಯರು ಸಮಾನತೆ ಮತ್ತು ಸ್ವಾತಂತ್ರವನ್ನು ಅನುಭವಿಸುವ ಮೂಲಕ ಬದಲಾವಣೆ ಆಗಬೇಕು. ವಿಶೇಷವಾಗಿ ಆಸ್ತಿಯಲ್ಲಿ ಮಹಿಳೆಯ ಹಕ್ಕುಗಳನ್ನು ಕಾಯ್ದಿರಿಸಲು ಹಿಂದೂ ವಿವಾಹ ಕಾಯ್ದೆಯನ್ನು ಪ್ರಸ್ತಾಪಿಸಿದರು. ಇದು ಭಾರತೀಯ ರಾಜಕೀಯದದಲ್ಲಿ ಅನೇಕ ಇಕ್ಕಟ್ಟುಗಳನ್ನು ತಂದು ಒಡ್ಡಿತು. ಆದರೆ ಅಂಬೇಡ್ಕರ್ ಸಾಹಿತ್ಯದಲ್ಲಿ ಇದು ಸ್ಥಾನ ಪಡೆಯಿತು. ಹಾಗಾಗಿ ಅಧ್ಯಯನಕ್ಕೆ ಅಂಬೇಡ್ಕರ್ ಸಾಹಿತ್ಯವೇ ಪ್ರಾಥಮಿಕ ಆಕರವಾಗಿರುವ ಹಿನ್ನೆಲೆಯಲ್ಲಿ ಅವುಗಳನ್ನು ವಿವಿಧ ಭಾಗಗಳಲ್ಲಿ ಚರ್ಚಿಸಿದ್ದೇನೆ. ಇನ್ನು ಮುಂದೆ ಅಧ್ಯಯನದಲ್ಲಿ ಬಳಸಿದ ಆನುಷಂಗಿಕ ಆಕರ ಕುರಿತು ಒಂದಿಷ್ಟು ಮಾತುಗಳನ್ನು ಹೇಳಬಹುದು.

**ಆನುಷಂಗಿಕ ಆಕರ: ಮಹಿಳಾ ಅಧ್ಯಯನ ಸಾಹಿತ್ಯ**

ಮಹಿಳಾ ಅಧ್ಯಯನದಲ್ಲಿ ಮಹಿಳೆಯರ ಕುರಿತು ಅಂಬೇಡ್ಕರ್ ಆಲೋಚನೆಯ ಅಗತ್ಯತೆ ಮತ್ತು ಅದರ ಜೊತೆಯಲ್ಲಿಯೇ ಸಮಸ್ಯೆ ತಿಳಿಯುವುದು ಉಪಯುಕ್ತ. ಅದಕ್ಕೆ ಮಹಿಳಾ ಅಧ್ಯಯನ ಸಾಹಿತ್ಯಿಕ ಆಕರ ಹೆಚ್ಚು ನೆರವಾಗುತ್ತದೆ.

ಮಹಿಳೆಯರ ಕುರಿತ ಸಂಶೋಧನೆಗಳ ಆಸಕ್ತಿಯ ಮೂಲವನ್ನು ನಾವು ೧೯ನೆಯ ಶತಮಾನದಷ್ಟು ಹಿಂದೆಯೇ ಸತಿಸಹಗಮನ, ಬಾಲ್ಯವಿವಾಹ ಇತ್ಯಾದಿ ಅಮಾನುಷ ಪದ್ಧತಿಗಳನ್ನು ತೀವ್ರವಾಗಿ ವಿರೋಧಿಸುವ ಸಾಮಾಜಿಕ ಚಳುವಳಿಗಳ ಪ್ರೇರಣೆಯಲ್ಲಿ ಗುರುತಿಸಬಹುದು. ಆದರೆ ಇತ್ತೀಚಿನ ವರ್ಷಗಳಲ್ಲಿ ಮಹಿಳೆಯರನ್ನು ಕೌಟುಂಬಿಕ ಚೌಕಟ್ಟಿನಾಚೆ ಗುರುತಿಸಲಾಗುತ್ತಿದೆ. ಆರ್ಥಿಕ, ರಾಜಕೀಯ ಕ್ಷೇತ್ರದಲ್ಲಿ ಆಕೆಯ ಸ್ಥಾನ ಈಗ ಹೆಚ್ಚಿನ ಗಮನ ಸೆಳೆಯುತ್ತವೆ. ಇದು ಸಮಾಜದಲ್ಲಿ ಮಹಿಳೆಯರ ಸ್ಥಾನ ಹಾಗೂ ಪಾತ್ರ ಬಗ್ಗೆ ಬದಲಾಗುತ್ತಿರುವ ದೃಷ್ಟಿಕೋನವನ್ನು ತೋರಿಸುತ್ತದೆ. ಅರವತ್ತರ ದಶಕದಲ್ಲಿ ಜನಸಂಖ್ಯೆಯ ಹೆಚ್ಚಳದ ವಿರುದ್ಧ ವ್ಯಕ್ತವಾದ ಆಕ್ರೋಶ ಹಾಗೂ ಪ್ರತಿಭಟನೆಯ ಹಿನ್ನಲೆಯಲ್ಲಿ ಮಹಿಳೆಯ ಶಿಕ್ಷಣದ ಬಗೆಗಿನ ಕಳಕಳಿ ವ್ಯಕ್ತವಾಯಿತು. ಆದರೆ ಈ ಎಲ್ಲ ಸಂಗತಿಗಳು ಕೂಡ ಮಹಿಳೆಯರನ್ನು ಆಧುನೀಕರಿಸುವ ಪಕ್ರಿಯೆ ಆಗಿವೆ. ಇತ್ತೀಚಿನ ವರ್ಷಗಳಲ್ಲಿ ಬಡತನ, ನಿರುದ್ಯೋಗ, ಆಹಾರ ಕೊರತೆ, ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆ ಇತ್ಯಾದಿ ಸಮಸ್ಯೆಗಳನ್ನು ಜೊತೆ ಜೊತೆಗೆಯೇ ಚರ್ಚಿಸಲಾಗುತ್ತದೆ. ಅಂತರ್‌ರಾಷ್ಟ್ರೀಯ ಮಹಿಳಾ ವರ್ಷದಲ್ಲಿ (೧೯೭೫) ಹೊರಬಂದ ಭಾರತ ಸರ್ಕಾರದ ಭಾರತೀಯ "ಮಹಿಳೆಯರ ಸ್ಥಾನಮಾನದ ಕುರಿತು ವರದಿಯು ನಮ್ಮಲ್ಲಿ ಮಹಿಳಾ ಅಧ್ಯಯನ ಅಗತ್ಯತೆ, ಈ ಕುರಿತು ಮೂಲ ಸಾಮಗ್ರಿಯನ್ನೊದಗಿಸಲು ಅನೇಕ ಸಂಗತಿಗಳ ಬಗ್ಗೆ ಗಂಭೀರವಾಗಿ ಯೋಚಿಸುವಂತೆ ಮಾಡಿತು." (ವೀಣಾ ಮಜುಂದಾರಾ ಮತ್ತು ನೀರಾದೇಸಾಯಿ: ೧೯೭೫: ಪು-೭೭-೮೦)

ಸಂಪ್ರದಾಯಗಳು, ಸಾಂಸ್ಕೃತಿಕ ಹಾಗೂ ಧಾರ್ಮಿಕ ಪರಂಪರೆಗಳಂತಹ ಒಂದು ದೇಶದ ರಾಜಕೀಯ ಹಾಗೂ ಆರ್ಥಿಕ ಸ್ಥಿತಿಗಳೇ ಮಹಿಳೆಯ ಶೋಷಣೆಗೆ ಹೆಚ್ಚಿನ ಕಾರಣಗಳೆಂಬುದು. ಈ ಅಭ್ಯಾಸಗಳಿಂದ ದೃಢಪಟ್ಟವು. ಈ ಕುರಿತು ವೀಣಾ ಮಜುಂದಾರ್ ಮತ್ತು ಮೈತ್ರಿಕೃಷ್ಣ ರಾಜನ್ ಹಾಗೂ ನೀರಾದೇಸಾಯಿ ಒಳಗೊಂಡ ಸಮಿತಿಯ ಶಿಫಾರಸ್ಸುಗಳು ಮಹಿಳಾ ಅಧ್ಯಯನಕ್ಕೆ ಒಂದು ಸಾಂಸ್ಥಿಕ ರೂಪ ನೀಡಿದವು. ಹಾಗಾಗಿಯೇ ಭಾರತದಲ್ಲಿ ಮಹಿಳಾ ಅಧ್ಯಯನ ವಿಭಾಗ, ಕೇಂದ್ರಗಳು ಆರಂಭವಾದವು. ಅವು ಲಿಂಗ ಸಂಬಂಧಿ ಅಧ್ಯಯನ ಕೈಗೊಂಡವು. ಅವುಗಳು ಸರ್ಕಾರದ ಕಾರ್ಯಕ್ರಮಗಳು ಯೋಜನೆಗಳಿಗೆ ತಾತ್ವಿಕತೆಯನ್ನು ರೂಪಿಸಿಕೊಟ್ಟವು. ಈ ಹಿನ್ನೆಲೆಯಲ್ಲಿ ಪತ್ಯ ಪತ್ಯೇತರವಾಗಿ ಚಟುವಟಿಕೆಗಳಿಂದ ಮಹಿಳೆಯ ವಿಷಯಗಳು ಪುನರ್ ಪರಿಶೀಲನೆ ಆರಂಭವಾಯಿತು. ಆಗ ಸಂಶೋಧನೆ ಅನುಸರಿಸಬೇಕಾದ ವಿಧಾನಗಳು ಪರಿಭಾವಿಸಬೇಕಾದ ನೆಲೆಗಟ್ಟಿನ ಬಗ್ಗೆ ನಡೆದ ಚರ್ಚೆಗಳು ಅನೇಕ. ಹಾಗಾಗಿ ಮಹಿಳಾ ಅಧ್ಯಯನದಲ್ಲಿ ಸಂಶೋಧನೆ ಮೂಲ ಶೋಧ, ಅನ್ವಯಿಕ ಸಂಶೋಧನ, ಕ್ರಿಯಾ ಸಂಶೋಧನೆ ಎಂಬ ಮೂರು ರೂಪದಲ್ಲಿ ಕಾಣಿಸಿಕೊಂಡಿತು. ಆಗ ಅನೇಕ ಮಹಿಳಾ ವಿಷಯಗಳು ಅಧ್ಯಯನಕ್ಕೆ ಒಳಪಟ್ಟವು. ಮಹಿಳೆಯ ಪರಿಸ್ಥಿತಿಯ ಭೂತ, ವರ್ತಮಾನ, ಭವಿಷ್ಯದ ಕುರಿತು ರಾಷ್ಟ್ರೀಯ, ರಾಜ್ಯ, ಪ್ರದೇಶ ಮಟ್ಟದಲ್ಲಿ ಅಂಕಿಅಂಶಗಳನ್ನು ಕಲೆಹಾಕಿ ವಿಶ್ಲೇಷಿಸಿದರು. ಭಾರತೀಯ ಸಮಾಜ ಸಂರಚನೆಯಲ್ಲಿ ತನ್ನದೇ ಆದ ಪಾತ್ರ ಉಳಿಸಿಕೊಂಡಿರುವ ಜಾತಿಶ್ರೇಣೀಕರಣ ಗಮನಿಸಲೇಬೇಕಾದದ್ದು ಮಂಡಲ್ ವಿರೋಧಿ ಚಳುವಳಿಯ ಪ್ರಸಂಗಗಳು ಸ್ತ್ರೀವಾದಿಗಳನ್ನು ಅತಿಸೂಕ್ಷ್ಮತೆಗೊಳಿಸಿತು. ಈ ಹಿನ್ನೆಲೆಯಲ್ಲಿ ಸ್ತ್ರೀವಾದ ಭಾರತೀಯ ಸಂದರ್ಭದಲ್ಲಿ ಮತ್ತೊಂದು ದಲಿತ ಸ್ತ್ರೀವಾದ ಎಂಬ ಕವಲು ಪಡೆದುಕೊಂಡಿತು. ಇದು ಜಾತಿ ಮತ್ತು ಮಹಿಳೆ ಕುರಿತು ಅಧ್ಯಯನಗಳಿಗೆ ಒಂದು ತರಹದ ಮುಮ್ಮಡಿ ಆಗ ಮಹಿಳಾ ಅಧ್ಯಯನಗಳು ಭಾರತೀಯ ಚರಿತ್ರೆಯಲ್ಲಿ ಮಹಿಳೆ ಮತ್ತು ಜಾತಿಗಳು ಕುರಿತು ನಡೆದ ಅಧ್ಯಯನ ಬಗೆಗೆ ಶೋಧಿಸಲು ಪ್ರಯತ್ನಿಸಿದವು. ಆಗ ವಿಶೇಷ ಗಮನ ಸೆಳೆದವರು ಅಂಬೇಡ್ಕರ್. ಅವರ ಮಹಿಳಾ ಅಲೋಚನೆ ಕುರಿತು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಅನೇಕ ಅಧ್ಯಯನಗಳು ನಡೆದವು. ಅದರಲ್ಲಿ ಕೆಲವು ಜಾತಿ ಮಹಿಳೆಯ ಕುರಿತು ಅಂಬೇಡ್ಕರ್‌ರ ನಿಲುವುಗಳನ್ನು ಚರ್ಚಿಸಿದರೆ, ಇನ್ನು ಕೆಲವು ಅಂಬೇಡ್ಕರ್ ಪ್ರಸ್ತಾಪಿಸುವ ಮಹಿಳಾ ವಿಷಯಗಳನ್ನು ದಾಖಲಿಸಿವೆ. ಈ ಎಲ್ಲ ಅಧ್ಯಯನಗಳು ಅಂಬೇಡ್ಕರ್ ಕುರಿತಾದ ಅಧ್ಯಯನಗಳಾಗಿವೆ. ಅವುಗಳೆಂದರೆ ಡಾ. ಮ.ನ ಜವರಯ್ಯ "ಅಂಬೇಡ್ಕರ್ ಮತ್ತು ಸ್ತ್ರೀ ಸ್ವಾತಂತ್ರ್ಯ" (೨೦೦೨) (ಪುಸ್ತಕ: ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಂಬೇಡ್ಕರ್) ಡಾ. ಎಚ್.ಟಿ. ಪೋತೆ, "ಅಂಬೇಡ್ಕರ್ ಮತ್ತು ಮಹಿಳೆ" (೨೦೦೭). (ಪುಸ್ತಕ; ಅಂಬೇಡ್ಕರ್ ಸಂವೇದನೆ).

ಡಾ.ಬಿ.ಯು.ಸುಮಾ, "ಡಾ.ಬಿ.ಆರ್.ಅಂಬೇಡ್ಕರ್ ವರ್ತಮಾನದೊಂದಿಗೆ ಮುಖಾಮುಖಿ, (೨೦೦೮).ಡಾ.ಟಿ.ಎಂ.ಭಾಸ್ಕರ್, "ಮಹಿಳೆ ಮತ್ತು ಅಂಬೇಡ್ಕರ್" (೨೦೦೫). ಡಾ.ಎಂ.ಪಿ. ಭುವನೇಶ್ವರ್, "ಮಹಿಳೆಯರ ಮುಕ್ತಿ" (೨೦೦೭), (ಪುಸ್ತಕ : ದಲಿತ ಜ್ವಾಲೆ ಡಾ. ಬಿ.ಆರ್. ಅಂಬೇಡ್ಕರ್). ಕೆ.ಮಾಯಿಗೌಡ "ಸ್ತ್ರೀ - ಮನು" (೨೦೦೬). (ಪುಸ್ತಕ : ಅಂಬೇಡ್ಕರ್ ದೃಷ್ಟಿಯಲ್ಲಿ ಮನು) ಕ್ರಿಸ್ಟಫ಼ಾ ಜಾಫರ್ಲೋ (ಮೂಲ) ಅನುವಾದ: ಡಾ.ಎಂ.ಎಸ್.ಆಶಾದೇವಿ "ಕುಲ ಮೀಮಾಂಸೆಯ ಮೂಲಕ ವರ್ಣವ್ಯವಸ್ಥೆಯ ನಿರ್ಮೂಲನೆ" (೨೦೦೫). (ಪುಸ್ತಕ: ಸಂ. ಕೋಟಗಾನಹಳ್ಳಿ ರಾಮಣ್ಣನ ತಲಪರಿಗೆ) ಡಾ.ಎಚ್.ಟಿ. ಪೋತೆ, ಡಾ.ಜಗನ್ನಾಥ ಸಿಂಧೆ, ಸಂ; "ಮೀಸಲಾತಿಯ ಸಮಸ್ಯೆ, ಸವಾಲುಗಳು" (೨೦೦೬). ಡಾ.ಟಿ.ಎಸ್.ವಿದ್ಯಾಸಾಗರ "ಸ್ತ್ರೀ ವಿಮೋಚಕ (೨೦೦೬) (ಪುಸ್ತಕ : ಅಂಬೇಡ್ಕರ್ ಮತ್ತು ಮಾನವೀಯ ಮೌಲ್ಯಗಳು), ಅನುವಾದ: ಡಾ.ಮ.ನ.ಜವರಯ್ಯ, (ಮೂಲ: ಡಾ.ಬಿ.ಆರ್.ಅಂಬೇಡ್ಕರ್) "ಜಾತಿಸತಿ ಮತ್ತು ಮಹಿಳೆ" (೨೦೦೦) ಇವಿಷ್ಟು ಅಂಬೇಡ್ಕರ್ ಅಧ್ಯಯನಗಳು ಮಹಿಳಾ ಕುರಿತಾದ ಸಂಗತಿಗಳನ್ನು ಒಳಗೊಂಡಿವೆ.

ಈ ಎಲ್ಲ ಅಧ್ಯಯನಗಳು ಪ್ರಸ್ತುತ ಪಡಿಸುವ ಸಂಗತಿಗಳನ್ನು ಎರಡು ರೀತಿಯಲ್ಲಿ ಗುರ್ತಿಸಬಹುದು. ಒಂದು: ಈ ಯಾವ ಅಧ್ಯಯನಗಳು ಮಹಿಳೆಯರ ಕುರಿತಾದ ಅಂಬೇಡ್ಕರ್ ಆಲೋಚನೆಗಳನ್ನು ಸಮಗ್ರವಾಗಿ ದಾಖಲಿಸಿಲ್ಲ, ಆದರೆ ಎಲ್ಲವೂ ದಾಖಲಿಸಿರುವ ಬಹುತೇಕ ಸಂಗತಿಗಳು ಹಿಂದೂ ಕೋಡ್‌ಬಿಲ್‌ಗೆ ಸಂಬಂಧಪಟ್ಟ ಮಾಹಿತಿಗಳೇ ಆಗಿವೆ. ಅವುಗಳ ವಿಶ್ಲೇಷಣೆಗೆ ಒಳಪಡಿಸದೆ ದಾಖಲಿಸಲಾಗಿದೆ. ಈ ಮೂಲಕ ಅಂಬೇಡ್ಕರ್ ಭಾರತೀಯ ಮಹಿಳಾ ಸಮುದಾಯದ ವಿಮೋಚಕ ಎಂದು ನಿರ್ವಚಿಸಲು ಪ್ರಯತ್ನಿಸುತ್ತಿವೆ ಎಂದು ಹೇಳಬಹುದು. ಎಡನೆಯದು: ಡಾ.ಮ.ನ.ಜವರಯ್ಯರವರ ಜಾತಿ ಸತಿ ಮತ್ತು ಮಹಿಳೆ ಎನ್ನುವ ಅಂಬೇಡ್ಕರ್‌ರವರ ಅನುವಾದ ಕೃತಿಯಾಗಿದೆ. ಇದು ಅಂಬೇಡ್ಕರ್‌ರವರ "ಭಾರತದಲ್ಲಿ ಜಾತಿಗಳು" ಮಹಿಳೆಯರಿಗೆ ಸಂಬಂಧಪಟ್ಟ ವಿವಾಹ, ವಿಧವೆ, ಸತಿ ಪದ್ಧತಿ ಇತ್ಯಾದಿ ಮಾಹಿತಿಗಳನ್ನು ದಾಖಲಿಸುತ್ತಾರೆ. ಹಾಗೆಯೇ ಹಿಂದೂ ಕೋಡ್‌ಬಿಲ್ಲ್ ಮತ್ತು ಕಾರ್ಮಿಕ ಕಾಯ್ದೆಯ ತಿದ್ದುಪಡೆಯನ್ನು ಉಲ್ಲೇಖಿಸುತ್ತಾರೆ. "ಸ್ತ್ರೀ ಮತ್ತು ಪ್ರತಿಕ್ರಾಂತಿ" ಯಲ್ಲಿ ವೈದಿಕ ಧರ್ಮ ಮಹಿಳೆಯರ ಮೇಲೆ ಹೇರಿರುವ ನಿರ್ಬಂಧನೆಗಳನ್ನು ದಾಖಲಿಸುತ್ತಾರೆ. ಅವುಗಳ ವಿಶ್ಲೇಷಣೆಗೆ ಒಳಪಡಿಸದೆ ದಾಖಲೆಗಳನ್ನೇ ಆಧಾರಿಸಿ ಅಂಬೇಡ್ಕರ್ ಭಾರತೀಯ ಮಹಿಳಾ ಸಮುದಾಯದ ವಿಮೋಚಕ ಎಂಬ ನಿರ್ಧಾರಕ್ಕೆ ಬರುತ್ತಾರೆ.

ಸ್ತ್ರೀವಾದಿ ದೃಷ್ಟಿಯಿಂದ ಅಂಬೇಡ್ಕರ್ ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಅದರಲ್ಲಿ ಸಂಶೋಧನೆ, ಲೇಖನ, ಪ್ರಾಜೆಕ್ಟ್‌ಗಳು ಸೇರಿವೆ. ಅವುಗಳೆಂದರೆ:

Sharmila rege, "Dait Women's Talk differhtal," (2004). "Writing caste/writing gender: Narrating. dalit women's testimonios" (2006). Kum Kum sangari (edit), "Recasting women" (2006). Uma Chakravrti, "Gendaring, Caste; Throug Feminist Lins" (2006). Badrinarayan, "Women Heros and Dalit Assertion in Norht India" (2006). Satadal Das Gupta, "Caste Kinship and Community" (1986). Meena Ananda (edita), "Dalit Women Fear and Discrimination" (2005). Eleahor Zelliat, "From untouchable to Dailt" (1992). Anshu Malhotra, "Gender, Caste and Religious indentities" (2002).

ಡಾ. ಬಾಬುರಾವಾ ಮುಡಬಿ "ಮಹಿಳಾ ಸಬಲೀಕರಣ : ಅಂಬೇಡ್ಕರ್ ದೃಷ್ಟಿಕೋನ" (೨೦೦೫), ಡಾ. ಎಂ. ಉಷಾ "ಮಹಿಳೆಯರ ಮತ್ತು ಜಾತಿ : ಒಂದು ಸೈದ್ಧಾಂತಿಕ ಗ್ರಹಿಕೆ (೨೦೦೫). ಡಾ. ಎಂ. ಉಷಾ ಲೇಖನ: ಮಹಿಳೆ ಮತ್ತು ಅಂಬೇಡ್ಕರ್ ಚಿಂತನೆ (2009) ಪುಸ್ತಕ: (ಅಂಬೇಡ್ಕರ್ ಚಿಂತನೆಗಳು ಅನಂತ ಸಾಧ್ಯತೆಗಳು).

ಈ ಅಧ್ಯಯನಗಳು ಮಹಿಳಾ ಅಧ್ಯಯನ ಜ್ಞಾನಶಾಖೆಗೆ ಉಪಯುಕ್ತವಾಗಿವೆ. ಆದರೆ ಅವುಗಳಲ್ಲಿ ಮಿತಿಯಿದೆ. ಇವುಗಳು ಮಹಿಳೆಯರ ಕುರಿತು ಅಂಬೇಡ್ಕರ್ ಚಿಂತನೆಗಳನ್ನು ಸಮಗ್ರವಾಗಿ ದಾಖಲಿಸಿಲ್ಲ ಮತ್ತು ವಿಶ್ಲೇಷಣೆಗೆ ಒಳಪಡಿಸಿಲ್ಲ. ಜೊತೆಗೆ ಅಂಬೇಡ್ಕರ್ ಮಹಿಳಾ ಕುರಿತು ಒಂದು ಸಂಗತಿಯನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿವೆ. ಇದರಲ್ಲಿ ಗಮನಿಸಲೇಬೇಕಾದ ಪುಸ್ತಕಗಳೆಂದರೆ: Kum Kum Sangari ಯವರ "Recasting women" ಇದು ಭಾರತದ ನಾಗರಿಕ ಸಮಾಜವು ಸ್ಥಳೀಯದಲ್ಲಿ ವರ್ಗ ಮತ್ತು ಜಾತಿ ರೂಪಿಸುತ್ತಿರುವ ಪಿತೃಪ್ರಧಾನತೆ, ಅದರ ಉತ್ಪನ್ನ ಕುರಿತದ್ದು. ಅದರ ಎಲ್ಲ ನೆಲೆಗಳನ್ನು ಆದೇಶ ವಿಲ್ಲದೆ ವಾಸ್ತವದಲ್ಲಿ ಒಪ್ಪುತ್ತದೆ. ಅಲ್ಲದೆ, ಮಹತ್ವವಾದ ಪಾತ್ರವನ್ನು ನಿರ್ವಹಿಸುತ್ತದೆ. ಆದ್ದರಿಂದ ಈ ಪ್ರಶ್ನೆಗಳು ರಾಜಕೀಯದೊಂದಿಗೆ ಸಂಬಂಧಿಸಿವೆ ಜೊತೆಗೆ ಮಹಿಳೆಯರ ಸಾಮಾಜಿಕ, ಸಾಂಸ್ಕೃತಿಕತೆಯಲ್ಲಿ ಬಹಳ ಮುಖ್ಯವಾದ ಪ್ರಶ್ನೆಯಾಗಿ ಮಹತ್ವ ಪಡೆಯುತ್ತಿವೆ. ಹಾಗಾಗಿ ಪ್ರಸ್ತುತ ಭಾರತೀಯ ಸಂದರ್ಭ ಸ್ಥಳೀಯದಲ್ಲಿ ಪಿತೃಪ್ರಧಾನತೆಯು ಮಹಿಳೆಯರನ್ನು 'Recaste' ಗೊಳಿಸುತ್ತಿದೆ. ಆದರೆ ಈ ಪಿತೃಪ್ರಧಾನತೆ ಪ್ರಶ್ನೆಯನ್ನು, ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಇಟ್ಟು ನಿರ್ವಚಿಸಬೇಕಾದ ಅಗತ್ಯತೆಯನ್ನು ತೋರಿಸುತ್ತದೆ.

ಹಾಗೆಯೇ ಶರ್ಮಿಳಾ ರೇಗಿಯವರ "Writing caste/writing gender: Narrating. dalit women's testimonios" (2006). ಜಾತಿ ಬರಹಗಳಲ್ಲಿ ಫುಲೆಯಿಂದ ಅಂಬೇಡ್ಕರ್‌ವರೆಗಿನ ತಾತ್ವಿಕ ಚರ್ಚೆಗಳು ಮಹಿಳೆಯರನ್ನ ಒಳಗೊಂಡ ಬಗೆಯನ್ನು ಪ್ರಸ್ತುತಪಡಿಸುತ್ತದೆ. ಅಲ್ಲದೆ ಮಹಿಳಾ ಅಧ್ಯಯನದ ಭಿನ್ನ ದೃಷ್ಟಿಕೋನ ಪ್ರಸ್ತುತಗೊಳಿಸುತ್ತದೆ. ಈ ಮೂಲಕ ಜಾತಿ ಮತ್ತು ಮಹಿಳಾ ಅಧ್ಯಯನಗಳು ಪಿತೃಪ್ರಧಾನತೆಯೊಂದಿಗೆ ಮುಖಾಮುಖಿಯಾಗಿಸುವ ಸಂಕಥನದ ನೆಲೆಗಳನ್ನು ತೋರಿಸುತ್ತದೆ ಎಂದು ಹೇಳಬಹುದು.

ಉಮಾಚಕ್ರವರ್ತಿಯವರ "Gendaring, Caste; Throug Feminist Lins" (2006). ಇದು ೭೦ರ ದಶಕದಲ್ಲಿ ಬಂದ ಮಂಡಲ್ ವರದಿಯ ನಂತರದಲ್ಲಿ, ಜಾತಿ ಪ್ರಜ್ಞೆ ಮತ್ತು ಮಹಿಳೆ, ತಳಸಮುದಾಯಗಳಲ್ಲಿನ ಲಿಂಗ ಶ್ರೇಣೀಕರಗಳ ಕುರಿತು ಜಾತಿ ಸಂಬಂಧಿ ತಾತ್ವಿಕ ಚರ್ಚೆಯನ್ನು ಬೆಳೆಸುತ್ತದೆ. ಹಂತ ಹಂತವಾಗಿ ಪಿತೃಪ್ರಧಾನತೆಗಳ ಬಹುರೂಪಿ ನೆಲೆಗಳನ್ನು ಪರಿಶೀಲಿಸುತ್ತದೆ. ಭಾರತೀಯ ಸ್ತ್ರೀವಾದದ ಐಡಿಯಲಿಸ್ಟಿಕ್ ಚರ್ಚೆಯನ್ನು ಇದರೊಂದಿಗೆ ವಾದಕ್ಕಿಳಿಸುತ್ತದೆ. ನಂತರ ಜಾತಿಯು ಲಿಂಗ ಶ್ರೇಣೀಕರಣವನ್ನು ಸೃಷ್ಟಿಸುತ್ತಿರುವ ಬಗೆಯನ್ನು ಪ್ರಸ್ತುತಗೊಳಿಸುತ್ತದೆ.

ಡಾ. ಎಂ. ಉಷಾ ರವರ "ಮಹಿಳೆ ಮತ್ತು ಜಾತಿ" ಒಂದು ಸೈದ್ಧಾಂತಿಕ ಗ್ರಹಿಕೆ. ಇದರಲ್ಲಿ ಅವರು ಜಾತಿ ಮತ್ತು ಮಹಿಳೆಯ ಪ್ರಶ್ನೆಗಳ ಸಂಬಂಧವನ್ನು ಚರ್ಚಿಸಿದ್ದಾರೆ. "ಜಾತಿ ಅಸಮಾನತೆಯು ಪಿತೃ ಪ್ರಧಾನತೆಯ ಉತ್ಪನ್ನ ಎಂದು ವಾದಿಸುತ್ತಾ, ಆಧುನಿಕ ಸಮಾಜಗಳಲ್ಲಿ ಇದು ನವ ಪಿತೃ ಪ್ರಧಾನತೆಯ ರೂಪದಲ್ಲಿ, ನವ ಜಾತಿಯತೆಯ ರೂಪದಲ್ಲಿ ಮೈದಾಳಿದೆ ಎನ್ನುವುದನ್ನು ವಿಮರ್ಶಿಸಿದ್ದಾರೆ." (ಎಂ.ಉಷಾ: ೨೦೦೫; ಪು-೩೮) ಪಿತೃ ಪ್ರಧಾನತೆ ಮತ್ತು ಜಾತಿ ವ್ಯವಸ್ಥೆಗಳು ವೈಚಾರಿಕವಾಗಿ ಸಹಸಂಬಂಧ ಪಡೆದಿವೆ ಎನ್ನುವುದನ್ನು ತೋರಿಸಲು ಪ್ರಯತ್ನಿಸುತ್ತಿದ್ದಾರೆಂದು ಹೇಳಬಹುದು.

ಹಾಗೆಯೇ ಡಾ. ಬಾಬುರಾವ್ ಮುಡಬಿಯವರು "ಮಹಿಳಾ ಸಬಲೀಕರಣ ಅಂಬೇಡ್ಕರ್ ದೃಷ್ಟಿಕೋನ" ಎನ್ನುವ ಮಹಾಪ್ರಬಂಧವು ಐದು ಅಧ್ಯಾಯಗಳನ್ನು ಒಳಗೊಂಡಿದ್ದು, "ಭಾರತೀಯ ಮಹಿಳೆ ನಡೆದುಬಂದ ಹಾದಿ ಎಂಬ ಅಧ್ಯಾಯದಲ್ಲಿ ಪ್ರಾಚೀನ ಕಾಲದಲ್ಲಿನ ಮಹಿಳೆಯರ ಪರಿಸ್ಥಿತಿಯನ್ನು ಗುರ್ತಿಸಿಕೊಳ್ಳುವ ನೆಲೆ ಏಕಾಕಾರವಾದದ್ದು. ಅಂದರೆ ವಿಷಯಕ್ಕೂ ಮತ್ತು ಒಳಗಿನ ಸಂಗತಿಗಳಿಗೂ ಒಂದು ಅಂತರ ಉಳಿದುಕೊಂಡಿರುವುದು ಸ್ಪಷ್ಟವಾಗುತ್ತದೆ. ಇನ್ನೂ ನಾಲ್ಕನೆಯ ಅಧ್ಯಾಯವು ಭಾರತೀಯ ಸ್ತ್ರೀ ವಿಮೋಚನೆಗೆ ಅಂಬೇಡ್ಕರ್‌ರವರ ಕೊಡುಗೆ ಎಂಬ ಶೀರ್ಷಿಕೆಯನ್ನು ಹೊಂದಿದೆ. ಈ ಅಧ್ಯಾಯದಲ್ಲಿ ಸಂವಿಧಾನಾತ್ಮಕ ಕಾನೂನು, ಕಾಯ್ದೆ ಸಂಗತಿಗಳನ್ನಿಟ್ಟುಕೊಂಡು ಭಾರತೀಯ ಸಾಮಾಜಿಕ ನೆಲೆಯಲ್ಲಿ ವಿವರಿಸಿಕೊಳ್ಳುತ್ತಾರೆ. ಹಾಗಾಗಿಯೇ ಅವರು ಅಂಬೇಡ್ಕರ್‌ರ ಈ ಎಲ್ಲ ಉಲ್ಲೇಖಿಸಿದ ಸಂಗತಿಗಳು ಭಾರತೀಯ ಮಹಿಳೆಯರನ್ನು ವಿಮೋಚನೆಗೊಳಿಸುತ್ತವೆ ಎಂದು ವಾದಿಸುತ್ತಾರೆ." (ಬಾಬುರಾವ್ ಮುಡ ಬಿ: ೨೦೦೫)ಆದರೆ ಅಂಬೇಡ್ಕರ್‌ರವರ ಮೂಲಭೂತವಾದ ಲಿಂಗ ಮತ್ತು ಜಾತಿಯನ್ನು ಒಗ್ಗೂಡಿಸುವ ಸಂಗತಿಗಳು ನಿರ್ಲಕ್ಷಿಸುತ್ತವೆ. ಈ ಅಧ್ಯಯನಗಳು ಮಹಿಳಾ ಕುರಿತು ಅಂಬೇಡ್ಕರ್‌ರವರ ಜಾತಿ ಮತ್ತು ಮಹಿಳೆಯರ ಸಂಬಂಧಿ ತಿಳುವಳಿಕೆಯನ್ನು ಅಧ್ಯಯನ ಮಾಡುವ ಸಾಧ್ಯತೆಯನ್ನು ತೋರಿಸುತ್ತವೆ. ಆದ್ದರಿಂದ ಅವರ ಮಹಿಳಾ

ಗ್ರಹಿಕೆಗಳಲ್ಲಿರುವ ಧೋರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಮಾಡಲಾಗಿದೆ. ಇದಿಷ್ಟು ಅಧ್ಯಯನ ವಸ್ತುವಿನ ಬಗ್ಗೆ ಇರುವ ಸಾಹಿತ್ಯವಾಗಿದೆ.

## ೧.೬. ಅಧ್ಯಯನದ ಸ್ವರೂಪ

ಮಹಿಳೆ, ಜಾತಿಗಳು, ಅಂಬೇಡ್ಕರ್ ಎಂಬ ಮೂರು ಸಂಗತಿಗಳನ್ನು ಒಳಗೊಂಡಿರುವ ಪ್ರಸ್ತತ ಅಧ್ಯಯನವು ಆರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ ಹಾಗೂ ಅಧ್ಯಯನ ಸಂಬಂಧಿ ಸಾಹಿತ್ಯ ಸಮೀಕ್ಷೆಯ ಜೊತೆಗೆ ಈ ಅಧ್ಯಯನದ ಅಗತ್ಯತೆ ಮತ್ತು ಮಹತ್ವವನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಈ ಅಧ್ಯಯನವು ಮಹಿಳೆ, ಜಾತಿಶ್ರೇಣೀಕರಣ ಪರಿಕಲ್ಪನೆಗಳನ್ನು ಸಾಮಾಜಿಕ ನೆಲೆಯಲ್ಲಿ ನಿರ್ವಚಿಸುತ್ತದೆ. ಜೊತೆಗೆ ಅಂಬೇಡ್ಕರ್ ಪೂರ್ವ, ಆತನ ಸಮಕಾಲೀನ ಸಂದರ್ಭದಲ್ಲಿ ಅವುಗಳ ಸ್ವರೂಪವನ್ನು ಚರ್ಚಿಸುತ್ತದೆ. ಹಾಗೆಯೇ ಆತನ ಸಮಕಾಲೀನರಾದ ಜ್ಯೋತಿಬಾ ಪುಲೆ, ಮಹಾತ್ಮ ಗಾಂಧೀಜಿ, ಪೆರಿಯಾರ ರಾಮಸ್ವಾಮಿ ನಾಯ್ಕರ್, ರಾಮ ಮನೋಹರಲೋಹಿಯಾರವರ ಲಿಂಗಾಧಾರಿತ ಶ್ರೇಣೀಕರಣ ಕುರಿತ ಚರ್ಚೆಗಳನ್ನು ಸಂಗ್ರಹಿಸುತ್ತದೆ. ಈ ಹಿನ್ನೆಲೆಯಲ್ಲಿ ಅಂದಿನ ಸಂದರ್ಭದಲ್ಲಿ ಮಹಿಳೆ ಮತ್ತು ಜಾತಿ ವಿಷಯಗಳಿಗೆ ಸಿಕ್ಕ ಆದ್ಯತೆ ಪ್ರಶ್ನೆಗಳನ್ನು ವಿವರಿಸುತ್ತದೆ. ನಂತರ ಭಾರತೀಯ ಸಂದರ್ಭದ ಸ್ತ್ರೀವಾದಕ್ಕೆ ಲಿಂಗಾಧಾರಿತ ಶ್ರೇಣೀಕರಣ ಗ್ರಹಿಸಲು ಅಂಬೇಡ್ಕರ್ ಚಿಂತನಾಕ್ರಮ ಗುರುತುಗೊಳ್ಳುವ ಬಗ್ಗೆಯನ್ನು ಪ್ರಸ್ತುತ ಪಡಿಸುತ್ತದೆ.

ಮೂರನೇ ಅಧ್ಯಾಯದಲ್ಲಿ ವಸಾಹತು ಸಂದರ್ಭದ ಚಿಂತನೆಗಳನ್ನು ಸಂಗ್ರಹಿಸಲಾಗಿದೆ. ಅಂದರೆ ಭಾರತೀಯ ಸಮಾಜದ ಲಿಂಗ ಮತ್ತು ಜಾತಿ ಅಸಮಾನತೆಗಳು ಈ ಕುರಿತ ಬಾಲ್ಯವಿವಾಹ, ಸತಿ, ವಿಧವೆ, ಅಸ್ಪೃಶ್ಯತೆಯಂತಹ ಸಂಗತಿಗಳು ಬ್ರಿಟೀಷ್ ಶಿಕ್ಷಣದಿಂದ ಹೊಸ ಚಾಲನೆ ಪಡೆದವು ಆಗ ಅವುಗಳ ಕುರಿತು ಪಾಶ್ಚಾತ್ಯ ಸುಧಾರಣಾ ವಾದಿ ವಿದ್ವಾಂಸರು ಮತ್ತು ದೇಶಿಯ ಸುಧಾರಣಾವದಿಗಳಾದ ಗಾಂಧಿ, ಪುಲೆ, ಪೆರಿಯಾರ್ ಇವರುಗಳಿಗೆ ಭಿನ್ನವಾಗಿ ಅಂಬೇಡ್ಕರ್ ಚಿಂತಿಸುತ್ತಿದ್ದರು. ಈ ಎಲ್ಲರ ಚಿಂತನೆಗಳನ್ನು ಸಂಗ್ರಹಿಸಿ ಸ್ತ್ರೀ ಪರವಾದ ನೆಲೆಯಿಂದ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಮಹಿಳೆ, ಜಾತಿ ಶ್ರೇಣೀಕರಣ ಕುರಿತು ಧರ್ಮ ಸಂಬಂಧಿ ಅಂಬೇಡ್ಕರ್ ಆಲೋಚನೆಗಳನ್ನ ಸಂಗ್ರಹಿಸಿ ಚರ್ಚಿಸಿದೆ. ಅಂದರೆ ಪುರಾತನ ಅಥವಾ ವೇದಕಾಲೀನ ಮತ್ತು ಆಧುನಿಕ ಸಮಾಜವೆಂದು ವರ್ಗೀಕರಿಸುವ ಅಂಬೇಡ್ಕರ್ ವೈದಿಕ ಧರ್ಮದ ಉತ್ಪನ್ನವೇ ಲಿಂಗಾಧಾರಿತ ಶ್ರೇಣೀಕರಣ ಆಗಿದೆ ಎಂಬುವುದನ್ನು ನ್ಯಾಯ ಮತ್ತು ಉಪಯುಕ್ತತೆ ಎಂಬ ಪರೀಕ್ಷೆಯಲ್ಲಿ ಚರ್ಚಿಸುತ್ತಾರೆ. ಈ ಮೂಲಕ ವೈದಿಕ ಸಮಾಜವನ್ನು

ತಾರತಮ್ಯವಿರುವ ಲಿಂಗ, ಜಾತಿ, ಅಸಮಾನತೆಯ ಮೈಗೂಡಿಸಿಕೊಂಡಿರುವುದನ್ನು ಬ್ರಾಹ್ಮಣ ಪಿತೃಪ್ರಧಾನತೆಯೊಂದಿಗೆ. ಗುರಿತುಸುವುದನ್ನು ಪ್ರಸ್ತುತ ಪಡಿಸುತ್ತದೆ. ಜೊತೆಗೆ ವೇದಕಾಲೀನ ಸಮಾಜ ತಾರತಮ್ಯಕ್ಕೆ ಹೊರತಾದದು ಎನ್ನುವುದನ್ನು ಚಾರಿತ್ರಿಕ ನೆಲೆಯ ಸಾಂಸ್ಕೃತಿಕ ಮಾದರಿಗಳಿಂದ ನಿರೂಪಿಸುತ್ತಿರುವುದು. ಅಂಬೇಡ್ಕರ್ ಕಾಲದ ಅಗತ್ಯತೆಯನ್ನು ತೋರಿಸುತ್ತದೆ.

ಅಧ್ಯಾಯ ಐದರಲ್ಲಿ ಮಹಿಳೆಗೆ ಸಂಬಂಧಿಸಿದಂತೆ ಅಧಿಕಾರ ವ್ಯವಸ್ಥೆಯಲ್ಲಿರುವಾಗ ಅಂಬೇಡ್ಕರ್ ಗ್ರಹಿಕೆಗಳನ್ನು ಸಂಗ್ರಹಿಸಿದೆ. ಈ ಹಿನ್ನೆಲೆಯಲ್ಲಿ ಅಂಬೇಡ್ಕರ್ ಸ್ವತಂತ್ರ ಪೂರ್ವ, ನಂತರದ ಸಂದರ್ಭದಲ್ಲಿ ಮಹಿಳೆ ಹಕ್ಕುಗಳು, ಮತ್ತು ಕರ್ತವ್ಯಗಳನ್ನು ಚರ್ಚಿಸುತ್ತಾರೆ. ಹಾಗೆಯೇ ಮಹಿಳಾ ಕಾರ್ಮಿಕರ ವೇತನ, ಹೆರಿಗೆ ಸೌಲಭ್ಯ, ಕೆಲಸದಲ್ಲಿ ತಾರತಮ್ಯ ಕುರಿತ ಚರ್ಚೆಗಳನ್ನು ಪ್ರಸ್ತಾಪಿಸುತ್ತದೆ. ಜೊತೆಗೆ ಹಿಂದೂ ವಿವಾಹ ಕಾಯ್ದೆಯಲ್ಲಿ ಬಹುಪತ್ನಿತ್ವ ನಿಷೇಧ, ಮಹಿಳೆ ಆಸ್ತಿ ಹಕ್ಕು, ಮಹಿಳೆ ದತ್ತು ಸ್ವೀಕಾರ ಇತ್ಯಾದಿ ಸಂಗತಿಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಎಲ್ಲಾ ಚರ್ಚೆಗಳನ್ನು ಅನುಲಕ್ಷಿಸಿ ಲಿಂಗಾಧಾರಿತ ಶ್ರೇಣೀಕರಣ ಸಂದರ್ಭದಲ್ಲಿ ಅಂಬೇಡ್ಕರ್‌ನ ಅಗತ್ಯತೆಯನ್ನು ಕಂಡುಕೊಂಡಿದ್ದು, ಈ ಹಿನ್ನೆಲೆಯಲ್ಲಿ ಅಧ್ಯಯನದ ಫಲಿತ ಹಾಗೂ ಅಧ್ಯಯನದ ಸಾಧ್ಯತೆಗಳನ್ನು ಪ್ರಸ್ತುತಗೊಂಡಿರುವುದು ಕಂಡುಬರುತ್ತದೆ.

## ೧.೭. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನ ಮಹಿಳಾ ಅಧ್ಯಯನದ ಭಾಗವಾಗಿ ಕೈಗೊಂಡ ಸಂಶೋಧನೆ. ಆದ್ದರಿಂದ ಮಹಿಳಾ ಅಧ್ಯಯನ ದೃಷ್ಟಿಯಿಂದಲೂ, ಅನೇಕ ವಿಷಯಗಳಿಂದಲೂ ಈ ಅಧ್ಯಯನ ಮಹತ್ವ ಪಡೆದಿದೆ.

ಈಗಿನ ಜ್ಞಾನ ವ್ಯವಸ್ಥೆಯ ವಲಯದಲ್ಲಿ ಮಹಿಳಾ ಅಧ್ಯಯನಕ್ಕೆ ತನ್ನದೇ ಆದ ಒಂದು ಮಹತ್ವವಿದೆ. ಅದರ ಒಂದು ಆಯಾಮ ಸ್ತ್ರೀವಾದಿ ವಿಮರ್ಶೆ. ಇದು ಈಗ ಅತ್ಯಂತ ಮುಖ್ಯವಾದ ಜ್ಞಾನರೂಪ. ಜಗತ್ತಿನ ಸಾಮಾಜಿಕ ವ್ಯವಸ್ಥೆಯನ್ನು ಅರ್ಥೈಸುವಲ್ಲಿ, ಟೀಕಿಸುವಲ್ಲಿ, ಸ್ತ್ರೀವಾದಿ ವಿಮರ್ಶೆಗೆ ಅನನ್ಯ ಸ್ಥಾನವಿದೆ. ಈ ಮಾತಿಗೆ ಇಂದು ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ನಡೆಯುತ್ತಿರುವ ಚರ್ಚೆಗಳು, ಮಹಿಳಾ ಪ್ರಶ್ನೆಗಳೇ ನಿದರ್ಶನ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ನಡೆಯುತ್ತದೆ.

ಪುರುಷನನ್ನು ಕೇಂದ್ರಿತವಾಗಿ ಚಿಂತಿಸುವುದೇ ಮಹಿಳೆಯರ ಅದೃಶ್ಯತೆಗೆ ಕಾರಣವೆಂಬ ಸ್ತ್ರೀವಾದದ ಹೇಳಿಕೆಯು ಭಾರತೀಯ ಸಂದರ್ಭದಲ್ಲಿ ಸಪ್ಪೆಯಾಗುತ್ತದೆ. ಏಕೆಂದರೆ ಜಾತಿ ವ್ಯವಸ್ಥೆ ಎಂಬ ಅಗಾಧವಾದ ಸವಾಲೊಂದನ್ನು ಸ್ತ್ರೀವಾದ ಎದುರಿಸುತ್ತಿದೆ. ಈ ಕುರಿತಾದ ಅಧ್ಯಯನಗಳಲ್ಲಿನ ಭಾರತೀಯ ಸಮಾಜದ ಮಹಿಳಾ ಪ್ರಶ್ನೆಗಳು ಗೊಂದಲ ಮತ್ತು ಸಂಕೀರ್ಣತೆಯನ್ನು ಒಳಗೊಂಡಿವೆ. ಹಾಗಾಗಿ ಪ್ರಸ್ತುತ ಅಧ್ಯಯನ ಮಹಿಳಾ ಶೋಷಣೆ,

ಲಿಂಗತಾರತಮ್ಯ ಕುರಿತಾದ ಶೋಧದಲ್ಲಿ ಸಾಮಾಜಿಕ ಭಿನ್ನತೆಗಳು ಹೇಗೆ ಮಹತ್ವ ಪಡೆಯುತ್ತವೆ ಎಂಬುದನ್ನು ಗೊತ್ತುಪಡಿಸುತ್ತದೆ.

ಭಾರತೀಯ ಮಹಿಳೆಯರ ಸ್ಥಾನಮಾನದ ನಿರ್ಧಾರದಲ್ಲಿ ಸಾಂಪ್ರದಾಯಿಕ ವ್ಯವಸ್ಥೆ ತನ್ನದೇ ಆದ ಪಾತ್ರವಹಿಸುತ್ತದೆ. ಹಾಗಾಗಿ ಸರ್ಕಾರ ಮಹಿಳೆಯರ ಸ್ಥಾನಮಾನದ ಬದಲಾವಣೆಗೆ ಹಮ್ಮಿಕೊಳ್ಳುವ ಯೋಜನೆಯಲ್ಲಿ, ಕಾರ್ಯಗಳಲ್ಲಿ, ಮಹಿಳೆ ಕುರಿತು, ಜಾತಿಯಲ್ಲಿನ ಮಹಿಳೆ ಕುರಿತು ವಹಿಸಬೇಕಾದ ಸೂಚನೆಯನ್ನು ಪ್ರತಿಬಿಂಬಿಸುತ್ತದೆ.

ಮಹಿಳಾ ಅಧ್ಯಯನ ಜ್ಞಾನಶಾಖೆಯ ಸೈದ್ಧಾಂತಿಕ ನೆಲೆಗಳನ್ನು ವಿಸ್ತರಿಸುವಲ್ಲಿ ಮತ್ತು ಗಟ್ಟಿಗೊಳಿಸುವಲ್ಲಿ ಈ ಅಧ್ಯಯನ ನೆರವಾಗುತ್ತದೆ. ಅಂದರೆ ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದ ಇಟ್ಟುಕೊಳ್ಳಬಹುದಾದ ಗುರಿ, ಉದ್ದೇಶ ಪಡೆದುಕೊಳ್ಳಬಹುದಾದ ಸ್ವರೂಪ ಬಳಸಬಹುದಾದ ಆಕರವನ್ನು ತಿಳಿಯಲು ಸಹಕಾರಿಯಾಗುತ್ತದೆ. ಈಗಾಗಲೇ ಭಾರತೀಯ ಸಂದರ್ಭದಲ್ಲಿ ದಲಿತ ಸ್ತ್ರೀವಾದ ಎಂಬ ವಾದ ಹುಟ್ಟಿಕೊಂಡಿವೆ. ಅದು ವಿವಿಧ ಆಯಾಮಗಳಲ್ಲಿ ಪರ್ಯಾವಸಾನಗೊಳ್ಳುತ್ತಿದೆ. ಈ ವಾದಕ್ಕೆ ಅಂಬೇಡ್ಕರ್ ಚಿಂತನಾಕ್ರಮವೇ ಆಧಾರವೆಂದು ಹೇಳಲಾಗುತ್ತಿದೆ. ಪ್ರಸ್ತುತ ಅಧ್ಯಯನ ದಲಿತ ಸ್ತ್ರೀವಾದ ಮತ್ತು ಅಂಬೇಡ್ಕರ್ ನಡುವಿರುವ ಒಳಸಂಬಂಧವನ್ನು ತಿಳಿಯುವ ದೃಷ್ಟಿಯಿಂದ ಮಹತ್ವ ಪಡೆಯುತ್ತದೆ.

ಸಮಕಾಲೀನ ಭಾರತದ ರಾಜಕೀಯ, ಸಾಮಾಜಿಕ ಮತ್ತು ಸಾರ್ವಜನಿಕ ವಲಯದಲ್ಲಿ ಹಿಂದೆಂದಿಗಿಂತಲೂ ಅಂಬೇಡ್ಕರ್ ಚಿಂತನೆಗಳು ಪ್ರಸ್ತುತ ಪಡೆಯುತ್ತಿರುವುದು ವಾಸ್ತವ. ಹಾಗಾಗಿ ಭಾರತೀಯ ಮಹಿಳೆಯರನ್ನು ಅಧ್ಯಯನ ಮಾಡುವಲ್ಲಿ, ಅಂಬೇಡ್ಕರ್ ಚಿಂತನಾಕ್ರಮದ ಅಗತ್ಯತೆ ಮತ್ತು ಸೂಕ್ಷ್ಮತೆಗಳನ್ನು ತಿಳಿಯುವ ದೃಷ್ಟಿಯಿಂದ ಈ ಅಧ್ಯಯನಕ್ಕೆ ಮಹತ್ವವಿದೆ.

ಅಂಬೇಡ್ಕರ್‌ರವರು ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ಮಾನವಶಾಸ್ತ್ರ, ಅರ್ಥಶಾಸ್ತ್ರ, ತತ್ವಶಾಸ್ತ್ರಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡಿ ತಮ್ಮದೇ ಆದ ವಾದವನ್ನು ಮಂಡಿಸಿದ್ದಾರೆ. ಅವರು ಅನೇಕ ಮಹಿಳಾ ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. ಹಾಗಾದರೆ ಅಂಬೇಡ್ಕರ್ ಮಹಿಳೆಯರ ಸಾಮಾಜಿಕ, ಧಾರ್ಮಿಕ ವಲಯದಲ್ಲಿ ಯಾವ ಸಂಗತಿಯನ್ನು ಚರ್ಚಿಸುತ್ತಾರೆ. ಈ ಚರ್ಚೆಗಳು ಹೇಗೆ ಅಂಬೇಡ್ಕರ್‌ರನ್ನು ಮಹಿಳಾ ಅಧ್ಯಯನ ಮತ್ತು ಇತರ ಜ್ಞಾನಶಾಖೆಗಳಿಗೆ ವಿಸ್ತರಿಸುತ್ತವೆ ಎಂಬುದನ್ನು ತಿಳಿಯುವ ದೃಷ್ಟಿಯಿಂದ ಮುಖ್ಯವಾದುದು.

ಅಂಬೇಡ್ಕರ್ ಸಂವಿಧಾನದಲ್ಲಿ ಮಹಿಳೆಯನ್ನು ಹೇಗೆ ಪರಿಭಾವಿಸುತ್ತಾರೆ. ಆ ಮೂಲಕ ಲಿಂಗ ಸಮಾನತೆಯನ್ನು ಯಾವ ನೆಲೆಯಿಂದ ಸಾಧಿಸಬೇಕೆಂದು ಪ್ರತಿಪಾದಿಸುತ್ತಾರೆ. ಅದಕ್ಕೆ ಮಹಿಳಾ ಸಬಲೀಕರಣಕ್ಕೆ ಇರುವ ಸಹಸಂಬಂಧವನ್ನು ತಿಳಿಯುವ ದೃಷ್ಟಿಯಿಂದ ಉಪಯೋಗವಿದೆ.

## ಉಲ್ಲೇಖಗಳು


೦೧. ಸಿಮೋನ್ ದ ಬೋವಾ: ೨೦೦೭, ದ ಸೆಕೆಂಡ್ ಸೆಕ್ಸ್, ಎಚ್.ಎಸ್.ಶ್ರೀಮತಿ, (ಅನು) ಅಧ್ಯಯನ ಮಂಡಲ, ಬೆಂಗಳೂರು, ಪು- ೧೬-೧೭

೦೨. ಅದೇ, ಪು- ೩೭-೫೮

೦೩. ಅದೇ, ಪು- ೫-೪೦

೦೪. ಪ್ರೀತಿ ಶುಭಚಂದ್ರ: ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು- ೧೩೮

೦೫. ಸಿಮೋನ್ ದ ಬೋವಾ: ೨೦೦೭, ದ ಸೆಕೆಂಡ್ ಸೆಕ್ಸ್, ಎಚ್.ಎಸ್.ಶ್ರೀಮತಿ, (ಅನು) ಅಧ್ಯಯನ ಮಂಡಲ, ಬೆಂಗಳೂರು, ಪು-೪೦

೦೬. ಚ.ನ. ಶಂಕರರಾವ್: ೨೦೦೪: ಭಾರತೀಯ ಸಮಾಜ ರಚನೆ ಪರಿವರ್ತನೆ, ಜೈ ಭಾರತ್ ಪ್ರಕಾಶನ, ಮಂಗಳೂರು, ಪು- ೪೦

೦೭. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೭

೦೮. ಬಿ.ಯು.ಸುಮಾ; ೨೦೦೮; ಡಾ.ಬಿ.ಆರ್.ಅಂಬೇಡ್ಕರ್ ವರ್ತಮಾನದೊಂದಿಗೆ ಮುಖಾಮುಖಿ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು-೩೬

೦೯. Kacha Illaiah, 'A Paradingm Shift' ಎಂಬ ಲೇಖನ Peccan Herald, April-೧೪, ೨೦೦೫

೧೦. ಸಿಮೋನ್ ದ ಬೋವಾ (ಮೂಲ), ಅನು: ಎಚ್.ಎಸ್.ಶ್ರೀಮತಿ, ಸೆಕೆಂಡ್ ಸೆಕ್ಸ್ (೨೦೦೭), ಅಧ್ಯಯನ ಮಂಡಲ, ಬೆಂಗಳೂರು, ಪು- ೩೪

೧೧. ಡಿ.ಡೊಮಿನಿಕ್, ಕರ್ನಾಟಕದಲ್ಲಿ ಜಾತಿಗಳು ಕನ್ನಡ ಸಾಹಿತ್ಯ ಮತ್ತು ವಸಾಹತುಶಾಹಿ ಸಂದರ್ಭ, ಪು- ೬೭

೧೨. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕ.ವಿ.ಹಂ, ಪು- ೧೩೮,೧೪೦

೧೩. ಅದೇ, ಪು-೧೨೯,೧೩೮,೧೪೦

೧೪. ವಂಸತ ಮೂನ್ (ಮೂಲ), ೨೦೦೨, ಅನು: ಎಂ.ಸನದಿ, ಡಾ.ಬಿ.ಆರ್.ಅಂಬೇಡ್ಕರ್ ಜೀವನ ಚರಿತ್ರೆ, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಪು- ೩

೧೫. ಸಿಮೋನ್ ದ ಬೋವಾ (ಮೂಲ), ಅನು: ಎಚ್.ಎಸ್.ಶ್ರೀಮತಿ, ಸೆಕೆಂಡ್ ಸೆಕ್ಸ್ (೨೦೦೭), ಅಧ್ಯಯನ ಮಂಡಲ, ಬೆಂಗಳೂರು, ಪು- ೪೪

೧೬. ಅದೇ, ಪು-೫೪

೧೭. ಹೆಚ್.ಎಸ್.ಶ್ರೀಮತಿ, ೨೦೦೩; ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು, ೫೭,೯೪

೧೮. ಹೇಮಲತಾ.ಎಚ್.ಎಂ, ೨೦೦೪; ಮಹಿಳಾ ಅಧ್ಯಯನ ಭಾಗ-೧, ಡಿ.ವಿ.ಕೆ.ಮೂರ್ತಿ, ಮೈಸೂರು, ಪು- ೭೫

೧೯. ಬಿ.ಎಸ್.ಚಂದ್ರಶೇಖರ್, ಸಮಾಜ ವಿಜ್ಞಾನಗಳಲ್ಲಿ ಸಂಶೋಧನಾ ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು- ೧೪೪

೨೦. ಅದೇ, ಪುಟ - ೧೪೩

೨೧. Nielsen, Joyce MC Carl (ed), (1999-10), Feminist reserach methods; Exemplary readings In Social Sciences, west view press Boulder. P-28,42

೨೨. ವೀಣಾ ಮಜುಂದಾರ್ ಮತ್ತು ಮೀರಾ ದೇಸಾಯಿ, Towards Equality, Government of India, ಪು-೭೭,೮೦

೨೩. ಎಂ. ಉಷಾ, ಮಹಿಳೆ ಮತ್ತು ಜಾತಿ - ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು- ೩೮

೨೪. ಬಾಬುರಾವ್ ಮುಡಬಿ, ೨೦೦೫; ಮಹಿಳಾ ಸಬಲೀಕರಣ - ಅಂಬೇಡ್ಕರ್ ದೃಷ್ಟಿಕೋನ. ಲಕ್ಷ್ಮಿ ಪ್ರಕಾಶನ, ಬೆಂಗಳೂರು.

## ಅಧ್ಯಾಯ– ಎರಡು

# ಮಹಿಳೆ ಮತ್ತು ಜಾತಿ ಶ್ರೇಣೀಕರಣ; ಸಾಮಾಜಿಕ ಹಿನ್ನಲೆ

## ಅಧ್ಯಾಯ– ಎರಡು

# ಮಹಿಳೆ ಮತ್ತು ಜಾತಿ ಶ್ರೇಣೀಕರಣ; ಸಾಮಾಜಿಕ ಹಿನ್ನಲೆ

ಭಾರತೀಯ ಸ್ತ್ರೀವಾದಗಳಲ್ಲಿ ಕಳೆದ ಹತ್ತು ವರ್ಷಗಳಿಂದ ಚರ್ಚೆಗೆ ಬಂದಿರುವ ದಲಿತ ಸ್ತ್ರೀವಾದ ಇದ್ದಕ್ಕಿದ್ದಂತೆ ಹುಟ್ಟಿ ಬಂದುದು ಅಲ್ಲ. ಅವುಗಳಿಗೆ ಅದರದೇ ಆದ ಐತಿಹಾಸಿಕತೆಯಿದೆ. ಈ ಮಾತನ್ನು ದಲಿತ ಸ್ತ್ರೀವಾದದಿಂದ ವಿಸ್ತರಿಸುವುದಾದರೆ ಇದು ಈ ಪೂರ್ವದಲ್ಲಿ ದಲಿತ ಐಡಿಯಾಲಜಿ ಆಗಿ ಗುರುತಿಸಲ್ಪಡುತ್ತಿತ್ತು. 1970 ರ ದಶಕದಲ್ಲಿ ಭಾರತದಲ್ಲಿ ನಡೆದ ಮಂಡಲ್ ವಿರೋಧಿ ಪ್ರಸಂಗವು ಸ್ತ್ರೀವಾದಿ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ ದಲಿತ ಮಹಿಳೆಯರನ್ನು ಅತಿ ಸೂಕ್ಷ್ಮಗೊಳಿಸಿತ್ತು. ಆಗ ಈ ಮಹಿಳೆಯರು ದಲಿತ ಚಿಂತನೆಗಳನ್ನು ಮಹಿಳಾ ದೃಷ್ಟಿಯಿಂದ ದಲಿತ ಸ್ತ್ರೀವಾದ ಅಂತ ಒಂದು ಫಿಲಾಸಫಿ ಆಗಿ ಪ್ರಸ್ತುತಪಡಿಸುತ್ತಿದ್ದರು. ಆಗ ಬಹುಮುಖ್ಯ ಚರ್ಚೆಗಳಲ್ಲಿ ಅಂಬೇಡ್ಕರ್ ಪ್ರಸ್ತಾಪವಾದರು. ಏಕೆಂದರೆ ದಲಿತ ಚಳುವಳಿಗಳು, ಚಿಂತನೆಗಳು ಎಂದು ತಕ್ಷಣವೇ ನೆನೆಪಿಗೆ ಬರುವುದು ಅಂಬೇಡ್ಕರ್. ಈತನನ್ನು "ಅಧ್ಯಯನಗಳು ದಲಿತ ಚಿಂತನೆಯ ಪ್ರತಿಪಾದಕ" (ವಸಂತ್ ಮೂನ್: 2002: ಪು– 36) ಎನ್ನುವರು. ಅದು ಏನೇ ಇರಲಿ. ಈ ಚಿಂತನೆಗೆ ತಾತ್ವಿಕತೆಯನ್ನು ಕಟ್ಟಿಕೊಟ್ಟವರಲ್ಲಿ ಅಂಬೇಡ್ಕರ್ ಪ್ರಮುಖರು ಎನ್ನಬಹುದು. ದಲಿತ ಸ್ತ್ರೀವಾದ ಪೂರ್ವದ ದಲಿತ ಚಿಂತನೆಗಳು ಮತ್ತು ಅದರಲ್ಲಿ ಪ್ರಮುಖರೆಂದು ಗುರುತಿಸುತ್ತಿರುವ ಅಂಬೇಡ್ಕರ್ ಮಹಿಳಾ ಪರವಾಗಿದ್ದರೋ, ಇದ್ದರೆ ಯಾವ ಮಹಿಳೆಯರ ಪರವಾಗಿದ್ದರು ಎಂಬುದು ಪ್ರಸ್ತುತ ಅಧ್ಯಯನದ ಮುಖ್ಯವಾದ ಸಂಗತಿ. ಅದಕ್ಕೆ ಅಧ್ಯಯನ ಪ್ರವೇಶಿಸುವದಕ್ಕೆ ಎರಡು ಮಾರ್ಗಗಳಿವೆ. ಒಂದು ಮಹಿಳೆ ಮತ್ತು ಜಾತಿ ಶ್ರೇಣೀಕರಣವನ್ನು ಒಟ್ಟೊಟ್ಟಿಗೆ ಗಮನಿಸುವುದು.

ಇನ್ನೊಂದು ಅಂಬೇಡ್ಕರ್‌ವಾದ, ಅದನ್ನು ನಿರ್ವಚನ ಮಾಡಿಕೊಂಡು ಜಾತಿ ಮತ್ತು ಮಹಿಳೆಯರನ್ನು ಹೇಗೆ ನೋಡಲಾಗಿದೆ ಎಂದು ತಿಳಿಯುವುದು.

ಆದ್ದರಿಂದ ಈ ಅಧ್ಯಾಯದಲ್ಲಿ ಮಹಿಳೆ ಮತ್ತು ಶ್ರೇಣೀಕರಣ ಪರಿಕಲ್ಪನೆಗಳನ್ನು ಪರಿಭಾಷಿಸುವುದರ ಜೊತೆಗೆ ಅವುಗಳು ಅಂಬೇಡ್ಕರ್ ಪೂರ್ವ ಸಮಕಾಲೀನ ಸಾಮಾಜಿಕ ಸಂದರ್ಭದ ಚರ್ಚೆಗಳನ್ನು ಚರ್ಚಿಸುವ ಉದ್ದೇಶವಿದೆ.

**೨.೧. ಮಹಿಳೆ, ಜಾತಿ ಶ್ರೇಣೀಕರಣ ಪರಿಕಲ್ಪನೆಗಳು**

**ಮಹಿಳೆ, ಹೆಂಗಸು, ಸ್ತ್ರೀ:** ಈ ಪದಗಳ ಕುರಿತಂತೆ ಈಗಾಗಲೇ ಪ್ರಕಟಗೊಂಡ ನಿಘಂಟುವಿನಲ್ಲಿ, ವಿಶ್ವಕೋಶ, ಪಾರಿಭಾಷಿಕ ಪದಕೋಶದಲ್ಲಿ ಭಿನ್ನ ಅರ್ಥಗಳಿವೆ. ಅದರಲ್ಲಿಯೂ ಗೊಂದಲಗಳಿವೆ. ಅವುಗಳನ್ನು ಹೀಗೆ ಅರ್ಥೈಸಬಹುದು.

ಮಹಿಳೆ ಎಂಬ ಕನ್ನಡ ಪದಕ್ಕೆ ಸಂವಾದಿಯಾಗಿ ಇಂಗ್ಲೀಷ್‌ನಲ್ಲಿ Woman ಎನ್ನುವ ಪದವನ್ನು ಬಳಸಲಾಗುತ್ತದೆ. ಈ ಕುರಿತು :

ಕನ್ನಡ – ಇಂಗ್ಲೀಷ್ ಡಿಕ್ಷನರಿ : **ಎಫ್.ಕಿಟೆಲ್**

ಮಹಿಳೆ – Mahile - ಳೆ; A Woman (ABP 28.20)

ಕನ್ನಡ – ಇಂಗ್ಲೀಷ್ ಡಿಕ್ಷನರಿ : **ಪ್ರೊ.ವೆಂಕಟಸುಬ್ಬಯ್ಯ**

ಮಹಿಳೆ – (ಮಹಿಳಾ)(ವಾ) ಹೆಂಗಸು, ಸ್ತ್ರೀ

ಕನ್ನಡ – ಕನ್ನಡ - ಇಂಗ್ಲೀಷ್ ನಿಘಂಟು : **ಪ್ರೊ.ಎಲ್.ಎಸ್.ಶೇಷಗಿರಿರಾವ್**

ಮಹಿಳೆ – (ನಾ) ಹೆಂಗಸು, ಸ್ತ್ರೀ (n) Woman : Lady

ಇಂಗ್ಲೀಷ್ – ಕನ್ನಡ ನಿಘಂಟು : **ಮೈಸೂರು ವಿಶ್ವವಿದ್ಯಾಲಯ**

Woman – ಮಹಿಳೆ, ವನಿತೆ, ಸಾಮಾನ್ಯ ಸ್ತ್ರೀ, ಸ್ತ್ರೀಜಾತಿ ಯಾವುದೇ ಹೆಣ್ಣುಮಗಳು, ಸಾಮಾನ್ಯ ಹೆಂಗಸು, How does differ from man, ಹೆಂಗಸು ಗಂಡಿಗಿಂತ ಹೇಗೆ ಭಿನ್ನಳು, ಸಂಭೋಗದಲ್ಲಿನ ಸ್ತ್ರೀಸಂಗಾತಿ, ಕೆಲಸದವಳು, ಕಸಮುಸರೆಯ ಹೆಂಗಸು, ಸ್ತ್ರೀತ್ವ, ಹೆಂಗಸದ್ದೆಂದು ರೂಢಿಯಲ್ಲಿ ಭಾವಿಸಿರುವ ಗುಣಲಕ್ಷಣಗಳು, ಭಾವನೆಗಳ ಹೆಂಗಸು.

Chamber English Dictionary: **W.S. Ramson & G.David**

Women - An adult Female of the human race; A wife (now dial); a mistress; The Female Sex; A char woman or daily domestic help.

The Oxford Dictionary : **H.W. Fowler (edit)**

Woman/Women - A adult human Female, The Female sex, any or average woman, wife or female sexual partner. A female domestic help emotions or characteristics traditionally associated with women (P.P.1409)

ಸಾಹಿತ್ಯದ ಕೆಲವು ಆಕರಗಳು ಸಹ ಸ್ತ್ರೀ - ಮಹಿಳೆಯನ್ನು "ಆಕೆಯ ನೋವನ್ನು ಸಹಿಸಿಕೊಳ್ಳುವ ಶಕ್ತಿಯಿರುವ ಧರಿಣಿ, ನಾಲ್ಕು ಗೋಡೆಗಳ ಒಳಗಿರುವ ಆಕೆಯ ಹೃದಯ ಮೃದು, ಶರೀರ ಕೋಮಲ, ಮೃದು ಹೃದಯ ಆದ ಕರುಣಾಮಯಿ, ಹಾಗೆ ಭಾವನಾಮಯಿ, ಮಹಿಳೆಗೆ ಕಣ್ಣೀರು ಸಹಜವಾಗಿರುವಂತೆ ಅದನ್ನು ತಡೆದುಕೊಳ್ಳಲು ಪ್ರಕೃತಿ ಗುಣವಿದೆ. ಆದ್ದರಿಂದ ಆಕೆ ಭೂಮಿ, ಜೀವಿಗಳಿಗೆ ಜನ್ಮ ನೀಡುವ ತ್ಯಾಗಮಯಿ ಎಂದು ವ್ಯಾಖ್ಯಾನಿಸಿವೆ." (ಕನ್ನಡ ಕವನಗಳಲ್ಲಿ ಅನೇಕ ನಿದರ್ಶನಗಳಿವೆ).

ಈ ಅಭಿಪ್ರಾಯಗಳು ಮಹಿಳೆಯನ್ನು 'ಗರ್ಭಾಶಯ' ಎನ್ನುವ ಪದದಿಂದ ನಿರ್ವಚಿಸುತ್ತವೆ. ಕರುಣೆ, ತ್ಯಾಗ, ಮೃದುಸ್ವಭಾವ, ಇತ್ಯಾದಿ ಅವಳ ಗುಣಗಳು ಹುಟ್ಟಿನಿಂದ ಬಂದಂತಹವು ಎಂದು ನಿರೂಪಿಸುತ್ತವೆ. ಆದರೆ ಈ ಕುರಿತು ಸ್ತ್ರೀವಾದಿಗಳ ಪ್ರತಿಕ್ರಿಯೆ ಗಂಭೀರವಾದುದು. ಸಿಮೋನ್ ದ ಬೊವಾರವರ ಪ್ರಕಾರ ಹೆಣ್ಣು - ಗಂಡುಗಳ ನಡುವೆ ವಿಕಾಸದ ನೆಲೆಯಲ್ಲಿಯೆ ಒಂದು ನೈಸರ್ಗಿಕ ತಾರತಮ್ಯವಿದೆ ಎಂಬ ವಾದವನ್ನು ನಿರಾಕರಿಸುವ ಆಕೆ "ಹೆಣ್ಣಾಗಿ ಯಾರು ಹುಟ್ಟುವುದಿಲ್ಲ. ಅವಳನ್ನು ಸಮಾಜ ಮತ್ತು ಸಂಸ್ಕೃತಿ ಸಂರಚಿಸುತ್ತದೆ ಅಥವಾ ಕಟ್ಟುತ್ತದೆ (She is not born but she is made) ಎನ್ನುತ್ತಾಳೆ." (ಸಿಮೋನ್ ದ ಬೋವಾ: ೨೦೦೭, ಪು-೧೬, ೧೭) ಅಂದರೆ ಹೆಣ್ಣು ಎಂಬ ಪರಿಕಲ್ಪನೆಯು ಜೈವಿಕವಾಗಿ ಹುಟ್ಟುವುದಿಲ್ಲ. ಸಮಾಜ ಸಂರಚಿಸಿದ ಪರಿಕಲ್ಪನೆ ಅದು. ಅಂದರೆ ಅವಳಿಗೆ ಆರೋಪಿಸಿರುವ ಗುಣಗಳು ಸಮಾಜ ಹೇರಲ್ಪಟ್ಟಿದ್ದು ಎಂದು ಹೇಳುತ್ತಾಳೆ. ಪ್ರಸ್ತುತ ಅಧ್ಯಯನವು ಸಹ ಮಹಿಳೆಯನ್ನು ಜೈವಿಕ ಸ್ಥಿತಿ ಅಂತ ನಿರ್ವಚಿಸದೆ, ಅದು ಒಂದು ಸಾಮಾಜಿಕ ಸ್ಥಿತಿ ಅಂತ ಪರಿಭಾವಿಸುತ್ತದೆ.

### ೨.೧. ಜಾತಿ, ಶ್ರೇಣೀಕರಣ ಪರಿಕಲ್ಪನೆ

ಈ ಪರಿಕಲ್ಪನೆಯಲ್ಲಿ ಎರಡು ಪದಗಳಿವೆ. ಒಂದು ಜಾತಿ ಮತ್ತೊಂದು ಶ್ರೇಣೀಕರಣ. "ಜಾತಿ ಎನ್ನುವ ಪದವನ್ನು ಇಂಗ್ಲೀಷ್‌ನ 'Caste' ಎನ್ನುವ ಪದಕ್ಕೆ ಸಂವಾದಿಯಾಗಿ ಬಳಕೆಯಾಗುತ್ತಲಿದೆ. 'Caste' ಪದವು ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ಭಾಷೆಯಿಂದ ನಿಷ್ಪನ್ನಗೊಂಡಿದೆ. ಅದರ ಪ್ರಕಾರ 'Caste' ಅಂದರೆ ವಂಶ ಅಥವಾ ಜನಾಂಗ ಎಂದರ್ಥ. ಲ್ಯಾಟಿನ್ ಪದವಾದ 'Castus' ಸಹ ಬಳಕೆಯಲ್ಲಿದೆ. ಅದರ ಅರ್ಥ 'ಶುದ್ಧ' ಎಂದು. ಆದರೆ ಭಾರತದಲ್ಲಿ ಜಾತಿ ಪದದ ಬಳಕೆ ಪೋರ್ಚುಗೀಸ್ ಅರ್ಥವನ್ನು ಪ್ರತಿನಿಧಿಸುತ್ತದೆ." (ಚ.ನ.ಶಂಕರರಾವ್: ೨೦೦೪, ಪು-೩೭)

'Hierarchy' ಎನ್ನುವ ಇಂಗ್ಲೀಷ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಶ್ರೇಣೀಕರಣ ಎನ್ನುವ ಪದವನ್ನು ಬಳಸಲಾಗುತ್ತದೆ. ಶ್ರೇಣೀಕರಣ ಎಂದರೆ "ಕ್ರಮಾಗತವಾಗಿ ಸ್ಥಾನ-ಮಾನಗಳು ನಿಗದಿಯಾಗಿರುತ್ತವೆ." (ಬಿ.ಎಸ್.ಚಂದ್ರಶೇಖರ್: ೨೦೦೫, ಪು-೧೦೮)

ಈ ಎರಡು ಪದಗಳನ್ನು ಸಂಯೋಜಿಸಿ 'Caste Hierarchy' ಎಂಬ ಇಂಗ್ಲೀಷ್ ಪದಕ್ಕೆ ಸಮಾನಾರ್ಥ ಪದವಾಗಿ 'ಜಾತಿಶ್ರೇಣೀಕರಣ' ಎಂಬ ಕನ್ನಡ ಪದವನ್ನು ಬಳಸಲಾಗುತ್ತದೆ. ಹೀಗೆಂದರೆ ಹುಟ್ಟು, ಆ ಜನಾಂಗದವರ ಬದುಕು ಕ್ರಮಾಗತವಾಗಿದೆ. ಅಂದರೆ ಇಳಿಕೆಯ ಕ್ರಮದಲ್ಲಿದೆ. ಲಂಬಾತ್ಮಕವಾಗಿದೆ. ತಾನು ಮೇಲು-ಉಳಿದವರು ಕೀಳು ಎಂಬ ಮನೋಭಾವ ಅಡಕವಾಗಿದೆ ಎಂದು ಅರ್ಥೈಸಬಹುದು. ಇವುಗಳ ಕುರಿತು ದಾಖಲೆಗಳು ಗೊಂದಲಗಳಿಂದ ಕೂಡಿವೆ.

ಕನ್ನಡ – ಇಂಗ್ಲೀಷ್ ಡಿಕ್ಷನರಿ : **ಎಫ್.ಕಿಟೆಲ್**

ಜಾತಿ – ಜಾಜಿ, Birth, Production, ಹುಟ್ಟು, ಸಂತತಿ

ಕನ್ನಡ – ಇಂಗ್ಲೀಷ್ ಡಿಕ್ಷನರಿ : **ಪ್ರೊ.ವೆಂಕಟಸುಬ್ಬಯ್ಯ**

ಜಾತಿ (ಸಂ)(ನಾ) – ಹುಟ್ಟು, ಜನನ, ಹುಟ್ಟಿದ ಕುಲ, ವಂಶ, ಜಾತಿ ಚತುರ್ವರ್ಣ

ಶ್ರೇಣಿ (ಸಂ)(ನಾ) – ಪಂಕ್ತಿ, ಸಾಲು, ಗುಂಪುಗಳ ಸಮೂಹ

ಕನ್ನಡ – ಕನ್ನಡ ಇಂಗ್ಲೀಷ್ ನಿಘಂಟು : **ಪ್ರೊ.ಎಲ್.ಎಸ್.ಶೇಷಗಿರಿರಾವ್**

ಜಾತಿ (ನಾ) – ಹಿಂದೂಗಳ ನಾಲ್ಕು ಮುಖ್ಯ ಕುಲಗಳಲ್ಲಿ ಒಂದು; One of the Four Chief Castes descent the Hindus, ಹುಟ್ಟಿದ ವಂಶ

ಜಾತಿ ಪದ್ಧತಿ (ನಾ) – ಜಾತಿಗಳಾಗಿ ವರ್ಗೀಕರಿಸುವ ಪದ್ಧತಿ

ಶ್ರೇಣೀಕರಣ – ಮೆಟ್ಟಿಲು, ಮೆಟ್ಟಿಲಾಗಿ, ಜೋಡಣೆ, ಹಂತಗಳಾಗಿ ವಿಂಗಡಣೆ Gradation, Hierarchy

ಇಂಗ್ಲೀಷ್ – ಕನ್ನಡ ನಿಘಂಟು : **ಮೈಸೂರು ವಿಶ್ವವಿದ್ಯಾಲಯ**

Caste - ಕಾಸ್ಟ್ (ನಾ); (ಭಾರತದಲ್ಲಿ ಜಾತಿ, ಕೋಮು, ವರ್ಣ; ಇತರೆ ಕಡೆಗಳಲ್ಲಿ ಅನುವಂಶಿಕವೂ, ಇತರರೊಡನೆ ಬೆರೆಯದ್ದೂ ಆದ ಪಂಗಡ, ಗುಂಪು; ಪ್ರತ್ಯೇಕ ಪಂಗಡ ಪದ್ಧತಿ; ಜಾತಿ ವ್ಯವಸ್ಥೆ; ಜಾತಿಯಿಂದ ಬರುವ ಸ್ಥಾನಮಾನ ಪ್ರತಿಷ್ಠೆ

ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶ : **ಬಿ.ಎಸ್.ಚಂದ್ರಶೇಖರ್**

Caste – ಜಾತಿ ಸದಸ್ಯರ ಸ್ಥಾನಮಾನ, ಉದ್ಯೋಗ, ವಾಸ್ತವ್ಯದ ಜಾಗ, ಸಾಮಾಜಿಕ ಸಂಬಂಧ ಇವೆಲ್ಲವುಗಳನ್ನು ವಂಶಪಾರಂಪರ್ಯವಾಗಿ ಅಥವಾ ಹುಟ್ಟಿನಿಂದ ನಿರ್ಧರಿಸುವ ಮುಚ್ಚಿದ ಸಾಮಾಜಿಕ ವರ್ಗ

Caste Hierarchy - ಜಾತಿ ಸ್ತರವಿನ್ಯಾಸ, ಜಾತಿ ಪಣಿ – ಶ್ರೇಣಿ; ಜಾತಿ ವ್ಯವಸ್ಥೆಯಲ್ಲಿ ಕಂಡುಬರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಲಂಬಾತ್ಮಕ ಸ್ಥಾನಭೇದ

Cambers English Dictionary : **W.S. Ramson & G. David**

Caste: (n) Social class in India ; an exclusive social class a type of individual in some polymorphic insects, an indication of caste warn, the Forehead

Hierarchy - (n) A ruler in holy things; A chief priest a preclate; An are hanged (milt); One in a high position the collective body of angles grouped in three divisions and nine orders diffrerent power and glory

Oxford Dictionary : **H.W. Fowler (edit)**

Caste - any of the hindu here ditary classes whose members have no social contact with other classes; a more or less exlusive social class; a system of such classes.

Hierarchy - a system in which grades or classes of status or authority are rank one above the others. The hierarchial system; each of the three division of angles.

ಒಟ್ಟಿನಲ್ಲಿ ಈ ಎಲ್ಲ ವಿವರಣೆಯಲ್ಲಿ ಅಸ್ಪಷ್ಟತೆಯಿದೆ. ಈ ಕುರಿತು ಸಮಾಜಶಾಸ್ತ್ರ ಅಧ್ಯಯನಗಳ ಹೇಳಿಕೆಗಳು ಗಮನಾರ್ಹವಾದವು. ಎಸ್.ವಿ.ಕೇತ್ಕರ್ ಪ್ರಕಾರ "ಜಾತಿ ಎನ್ನುವುದು ಒಂದು ಜನಾಂಗ, ಅನುವಂಶೀಯತೆ ಎಂಬ ಅರ್ಥಕ್ಕೆ ಮಾತ್ರ ಸೀಮಿತವಾಗದೆ, ಅದು ಕುಟುಂಬ, ರಕ್ತ ಪರಿಶುದ್ಧತೆಯನ್ನು (Purity of Blood) ಕಾಪಾಡಲು ಸ್ಥಾಪಿತವಾದ ಸಾಂಸ್ಥಿಕ ರಚನೆಯಾಗಿದೆ ಎನ್ನುತ್ತಾರೆ." (ಎಸ್.ವಿ.ಕೇತ್ಕರ್: ೧೯೩೦, ಪು–)ಅಂದರೆ ಜಾತಿ ಎಂಬುದು ಪವಿತ್ರ – ಅಪವಿತ್ರಗಳಿಂದ ಕೂಡಿದೆ ಎಂದು ಪ್ರಸ್ತುತಪಡಿಸಿದ್ದಾರೆ. ಈ ಕುರಿತ ಅಂಬೇಡ್ಕರ್ ವಿಶ್ಲೇಷಣೆ ಅದರ ಸಾಮಾಜಿಕ ಜೀವಂತಿಕೆಯನ್ನು ಪ್ರತಿಬಿಂಬಿಸುತ್ತದೆ. "ಶೂದ್ರಸಮಸ್ಯೆ...... ಹಿಂದೂ ಆರ್ಯರ ಸಾಮಾಜಿಕ ವ್ಯವಸ್ಥೆ ಚಾತುರ್ವರ್ಣ ತತ್ವದ ಮೇಲೆ ಆಧಾರಿತವಾಗಿದೆ. ಚಾತುರ್ವರ್ಣ ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಸಾಮಾಜಿಕ ವಿಭಜನೆ ಎನ್ನುವ ಸಾಮಾನ್ಯ ಅಭಿಪ್ರಾಯ ಇದೆ. ಇದು ಶೂದ್ರ ಸಮಸ್ಯೆಯ ನಿಜವಾದ ಸ್ವರೂಪವನ್ನಾಗಲಿ ಅಥವಾ ಅದರ ವಿಸ್ತಾರವನ್ನಾಗಲಿ ಸೂಚಿಸುವುದಿಲ್ಲ. ಸಮಾಜವನ್ನು ಕೇವಲ ನಾಲ್ಕು ವರ್ಣಗಳನ್ನಾಗಿ ವಿಭಜಿಸುವುದೇ ಆಗಿದ್ದರೆ ಚಾತುರ್ವರ್ಣ ತೀರಾ ಅಮಾಯಕ ತತ್ವವಾಗಿ ಬಿಡುತ್ತಿತ್ತು. ಆದ್ದರಿಂದ ಚಾತುರ್ವರ್ಣ ತತ್ವ ಇದಕ್ಕಿಂತಲೂ ಹೆಚ್ಚಿನದನ್ನು ಒಳಗೊಂಡಿದೆ. ಸಮಾಜವನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸುವುದರ ಜೊತೆಗೆ ಈ ನಾಲ್ಕು ವರ್ಣಗಳ ನಡುವಣ ಸಾಂಘಿಕ ಜೀವನದ ನೀತಿಯನ್ನು ನಿರ್ಧರಿಸಲು ಶ್ರೇಣೀಕೃತ ಅಸಮಾನತೆಯ ತತ್ವವಾಗಿ ಆಧಾರ ಮಾಡುವ ತನಕ ಈ ತತ್ವ ಹೋಗುತ್ತದೆ

ಮತ್ತು ಶ್ರೇಣೀಕೃತ ಅಸಮಾನತೆಯ ಈ ವ್ಯವಸ್ಥೆ ಕೇವಲ ಕಾಲ್ಪನಿಕವಲ್ಲ. ಅದು ಶಾಸನೀಯ, ದಂಡನೀಯ ಚತುರ್ವರ್ಣ ಪದ್ಧತಿಯಲ್ಲಿ ಶೂದ್ರನನ್ನು ಕೆಳದರ್ಜೆಯಲ್ಲಿ ಇಡುವುದಷ್ಟೆ ಅಲ್ಲದೆ ಧರ್ಮ ನಿರ್ಧರಿಸಿರುವ ಸ್ಥಿತಿಯಿಂದ ಮೇಲೆಳದಂತೆ ಅವರನ್ನು ತಡೆಗಟ್ಟಲೂ ಅಸಂಖ್ಯಾತ ಅಪರಾಧಗಳಿಗೂಅನರ್ಹತೆಗಳಿಗೂ ಅವರನ್ನು ಅಧೀನಗೊಳಿಸಲಾಗಿದೆ" (ಡಾ.ಬಾ.ಅಂ.ಬ.ಭಾ.ಸ-೭: ಪು-೧.೩) ಇದು ವರ್ಣಗಳ ನಡುವೆ ಲಂಬಾತ್ಮಕ ಅಂತರವನ್ನು ಕಾಯ್ದಿರಿಸಿರುವುದನ್ನು ಖಚಿತಪಡಿಸಿತು. ಜೊತೆಗೆ ನಂತರ ಭಾರತದಲ್ಲಿ ಬಂದ ಜಾತಿವ್ಯವಸ್ಥೆಗಳಿಗೂ ಸಹ ಶ್ರೇಣೀಕರಣ ಜಾತಿವ್ಯವಸ್ಥೆಯನ್ನು ಅವರಿಸಿತು ಎನ್ನಬಹುದು" ಆದ್ದರಿಂದ, ಜಾತಿಗಳು ಶ್ರೇಣೀಕರಣ ನೆಲೆಯಲ್ಲಿವೆ. ಈ ಕುರಿತು ಕ್ರಿಸ್ಟಫ್ ಜಾಪ್‌ರ್ಲೋ ಹೇಳಿಕೆ ಗಮನಾರ್ಹವಾದುದು. "ಶ್ರೇಣೀಕೃತ ಅಸಮಾನತೆಯು ಶಕ್ತಿಶಾಲಿ ಗುಂಪುಗಳನ್ನು ಶೋಷಕರ ವಿರುದ್ಧ ಹೋರಾಟ ನಡೆಸಲು ಅವರು ಒಂದಾಗುವುದನ್ನು ತಡೆಯುತ್ತದೆ. ಅಂದರೆ ಶ್ರೇಣೀಕೃತ ವ್ಯವಸ್ಥೆಯಲ್ಲಿ ಸಮಾನಪಾತಳಿ ಎನ್ನುವುದು ಇರುವುದಿಲ್ಲ. ಸಮಾನಪಾತಳಿ ಸಾಧ್ಯವಾಗುವುದು ವ್ಯವಸ್ಥೆಯಲ್ಲಿ ಮೇಲು-ಕೀಳು ಎನ್ನುವ ಎರಡು ವರ್ಗೀಕರಣಗಳು ಇದ್ದಾಗ ಮಾತ್ರ ಎನ್ನಬಹುದು." (ಕ್ರಿಸ್ಟಫ್ ಜಾಪರ್ಲೊ: ೨೦೦೫, ಪು-೩೦)ಅಂದರೆ ಭಾರತೀಯ ಜಾತಿ ಪದ್ಧತಿಯಂತಹ ಶ್ರೇಣೀಕೃತ ವ್ಯವಸ್ಥೆಯಲ್ಲಿ ಮಹಿಳೆ ಒಂದು ಸಾಮಾಜಿಕ ಘಟಕವಾಗಿಲ್ಲ. ಅತ್ಯಂತ ಶ್ರೇಷ್ಠ ಮಹಿಳೆ. ಅತೀ ಶ್ರೇಷ್ಠ ಮಹಿಳೆ, ಕನಿಷ್ಠ ಮಹಿಳೆ, ಅತೀ ಕನಿಷ್ಠ ಮಹಿಳೆ, ಅತ್ಯಂತ ಕನಿಷ್ಠ ಮಹಿಳೆ ಎನ್ನುವ ವರ್ಗೀಕರಣವಿದೆ. ಆದ್ದರಿಂದ ಪ್ರಸ್ತುತ ಅಧ್ಯಯನ ಮಹಿಳೆಯನ್ನು ಒಂದು ಸಾಮಾಜಿಕ ಘಟಕವಾಗಿ ಅಷ್ಟೇ ಅಲ್ಲ, ಜಾತಿಶ್ರೇಣೀಕರಣದಲ್ಲಿ ಹಂಚಿಹೋಗಿರುವ, ಮಹಿಳೆರಾಗಿಯೂ ಪರಿಭಾವಿಸಿಕೊಂಡು ಅಂಬೇಡ್ಕರವರನ್ನು ಅಧ್ಯಯನ ಮಾಡಲಾಗಿದೆ. ಆದ್ದರಿಂದ ಭಾರತೀಯ ಜಾತಿವ್ಯವಸ್ಥೆ ಬಗ್ಗೆ ತರ್ಕಬದ್ಧವಾದ ಮಂಡಿಸುತ್ತಿರುವ ಅಂಬೇಡ್ಕರ್‌ರವರ ಮಹಿಳೆಯರ ಕುರಿತ ಚಿಂತನಾಕ್ರಮವನ್ನು ಅರ್ಥಮಾಡಿಕೊಳ್ಳಬೇಕಾದರೆ ಅಂಬೇಡ್ಕರ್ ದೃಷ್ಟಿಕೋನ ರೂಪಿತವಾದ ಮತ್ತು ಅದಕ್ಕೂ ಪೂರ್ವದ ಸಾಮಾಜಿಕ ಸಂದರ್ಭವನ್ನು ಗಮನಿಸಲೇಬೇಕು.

## ೨.೨ ಮಹಿಳೆ, ಜಾತಿ ಶ್ರೇಣೀಕರಣ : ಅಂಬೇಡ್ಕರ್ ಪೂರ್ವದ ಸ್ಥಿತಿ-ಗತಿ

ಅಂಬೇಡ್ಕರ್ ಹೊರತುಪಡಿಸಿ ದಲಿತ ಚಿಂತನೆಯನ್ನು ಹೇಗೆ ಕಲ್ಪಿಸಿಕೊಳ್ಳಲಾಗುವುದಿಲ್ಲವೋ ಹಾಗೆಯೇ ಭಾರತ ಮತ್ತು ಮಹಾರಾಷ್ಟ್ರದ ಭೂಮಿಕೆಯನ್ನು ಹೊರತು ಪಡಿಸಿ ಅಂಬೇಡ್ಕರ್ ಚಿಂತನೆಯನ್ನು ಕಲ್ಪಿಸಿಕೊಳ್ಳಲಾಗುವುದಿಲ್ಲ. ಹಾಗಾಗಿ ಅಂಬೇಡ್ಕರ್ ಚಿಂತನಾಕ್ರಮಕ್ಕೆ ಬೆನ್ನೆಲುಬಾದ ಸಾಮಾಜಿಕ ಸಂದರ್ಭವನ್ನು ನಾವು ಪರಿಶೀಲಿಸಬೇಕಾಗಿದೆ. ಅಂದರೆ ಅಂಬೇಡ್ಕರ್ ಮೊದಲಿನ ಸಾಮಾಜಿಕ ಸಂದರ್ಭವನ್ನು ಅನುಲಕ್ಷಿಸಿ ಮಹಿಳೆ ಮತ್ತು ಜಾತಿ ವ್ಯವಸ್ಥೆಯ ಸ್ವರೂಪವನ್ನು ಗಮನಿಸಬೇಕಾಗಿದೆ.

ಜಾಗತಿಕ ದೃಷ್ಟಿಯಿಂದ ಹದಿನೆಂಟನೆಯ ಶತಮಾನವು ಗಮನಾರ್ಹವಾದುದು. ಏಕೆಂದರೆ ಆಗ ಪಾಶ್ಚಾತ್ಯ ರಾಜಕೀಯ ವಲಯದಲ್ಲಿದ್ದ ಪ್ರಜಾಪ್ರಭುತ್ವ ಮೇಲೆ ನಿರಂಕುಶ ಪ್ರಭುತ್ವದ ಆಕ್ರಮಣ, ಕೈಗಾರೀಕರಣ ಮತ್ತು ಹಾರ್ಡ್‌ವೇರ್ ಯಂತ್ರಗಳ ಬಳಕೆ, ಜಗತ್ತಿನ ಸಾಮಾಜಿಕತೆಯಲ್ಲಿ ಅನೇಕ ಬದಲಾವಣೆಯನ್ನು ತಂದಿತು. ಇದು ಎಲ್ಲ ದೇಶ, ಸಮಾಜ, ಸಮುದಾಯಗಳ ಮೇಲೆ ತನ್ನದೇ ಆದ ಪ್ರಭಾವ ಬೀರಿತು. ಇದರ ಪ್ರಮುಖ ಕೇಂದ್ರಗಳಾಗಿ ಯುರೋಪಿನ ದೇಶಗಳು ಗಮನ ಸೆಳೆದವು. ಆಗ ಈ ದೇಶಗಳಲ್ಲಿನ ಕೈಗಾರಿಕಾ ಕ್ರಾಂತಿಯಿಂದ ಸೃಷ್ಟಿಗೊಂಡ ಸಾವಿರಾರು ಉದ್ಯೋಗಗಳಿಗೆ ಪುರುಷ ಕೆಲಸಗಾರರ ಕೊರತೆ ಉಂಟಾಯಿತು. ಇದು ಮನೆಯಲ್ಲಿರುವ ತಮ್ಮ ಮಹಿಳೆಯರನ್ನು ಹೊರಗಿನ ಉತ್ಪಾದಕ ಕೆಲಸಗಳಿಗೆ ಕರೆತರುವಂತೆ ಮಾಡಿತು. ಈ ಅವಕಾಶ ಪಾಶ್ಚಾತ್ಯ ಮಹಿಳೆ ಸಮುದಾಯದಲ್ಲಿ ಹಲವು ಬದಲಾವಣೆಯನ್ನು ತಂದಿತು. ಈ ಬದಲಾವಣೆ ಅಲ್ಲಿನ ಮಹಿಳಾ ಸಮುದಾಯವನ್ನು ಹಲವು ಇತಿಮಿತಿಗಳ ಮಧ್ಯೆ ತನ್ನದೇ ಆದ ಪ್ರಪಂಚಕ್ಕೆ ತೆರೆದುಕೊಳ್ಳುವ ಅವಕಾಶವನ್ನು ತಂದುಕೊಟ್ಟಿತು. ಆಗ ಈ ಮಹಿಳೆಯರಿಗೆ ತಮ್ಮ ಮೇಲಿನ ಶೋಷಣೆಗಳು ತಮ್ಮ ಸಮಸ್ಯೆಗಳು ಎಲ್ಲ ಮಹಿಳೆಯರ ಸಾಮಾನ್ಯ ಶೋಷಣೆಗಳು, ಸಮಸ್ಯೆಗಳಾಗಿವೆ ಎಂಬ ಸಾರ್ವತ್ರಿಕ ಅರಿವು ಬೆಳೆಯತೊಡಗಿತು.

ಈ ಹಿನ್ನಲೆಯಲ್ಲಿ ಬೌದ್ಧಿಕ ವಲಯದಲ್ಲಿ ಮಹಿಳೆ ಕುರಿತು ಹಲವು ಚಿಂತನೆಗಳು ಹುಟ್ಟಿಕೊಂಡವು. ಅದರಲ್ಲಿ ಗಮನಿಸಬೇಕಾಗಿರುವುದು ಉದಾರವಾದಿ ಸ್ತ್ರೀವಾದಿ ಹಾರಿಯಟ್ ಟೇಲರ್ ಮಿಲ್ಲರವರ "ದಿ ಎನ್‌ಫ್ರಾಸ್ಟಾಟ್ ಬ್ಯಸಾಮೆಂಸ್ ಆಫ್ ವಿಮೆನ್" ಪುಸ್ತಕದಲ್ಲಿ ಆಕೆಯ "ಲಿಂಗ ಅಸಮಾನತೆಯನ್ನು ಹೋಗಲಾಡಿಸಲು ಮಹಿಳೆಯರಿಗೆ ವೈಚಾರಿಕ ಸಮಾನಶಿಕ್ಷಣ, ಸಮಾನ ಉದ್ಯೋಗ, ವಿವಾಹ ಸಂಬಂಧದಲ್ಲಿ ಸಹಭಾಗಿತ್ವಬೇಕು" (ಹಾರಿಯಟ್ ಟೇಲರ್ ಮಿಲ್ ಉದ್ಧೃತ, ಇಂದಿರಾ ಆರ್ ೧೯೯೫, ಪು.೧೬-೨೧) ಎಂದು ವಾದಿಸುತ್ತಾರೆ. ಇದಿಷ್ಟು ಜಾಗತಿಕ ಸಂದರ್ಭದ ನೋಟಗಳಾಗಿವೆ. ಅಲ್ಲಿನ ಮಹಿಳಾ ಅಧ್ಯಯನವು ಮಹಿಳಾ ಸಂಬಂಧಿ ಈ ವಿಷಯಗಳನ್ನು ಉದಾರವಾದಿ ಆಲೋಚನೆಗಳೆಂದು ಗುರುತಿಸುತ್ತದೆ.

ಭಾರತವು ಹಲವು ಜಾತಿ, ಧರ್ಮ, ಭಾಷೆ, ಸಂಸ್ಕೃತಿ, ಸಮುದಾಯಗಳಿಂದ ಕೂಡಿದ್ದು, ತನ್ನದೇ ಆದ ಪ್ರಾಚೀನತೆಯನ್ನು ಒಳಗೊಂಡಿದೆ. ಅದರಲ್ಲಿ ಮಹಿಳೆಯರ ಬದುಕು, ವರ್ಗ, ಜಾತಿ, ವರ್ಣವ್ಯವಸ್ಥೆಯಲ್ಲಿ ಪುರುಷ ಸಂಸ್ಕೃತಿಯ ಅಧೀನತೆಗೆ ಒಳಪಟ್ಟಿತ್ತು. ಇದನ್ನು ಸಾಹಿತ್ಯಿಕ ನೆಲೆಯಿಂದ ಬಾಬುರಾವ್ ಮುಡಬಿಯವರು ಹೀಗೆ ಹೇಳುತ್ತಾರೆ. "ಭಾರತದ ಸ್ತ್ರೀ ಅನೇಕ ಸ್ತರಗಳಲ್ಲಿ, ಅನೇಕರೂ ವರ್ಗಗಳಲ್ಲಿ, ಪ್ರತಿಮೆಗಳಲ್ಲಿ, ಪ್ರಾಚೀನ ಸಾಹಿತ್ಯದಲ್ಲಿ ದಾಖಲಾಗಿದ್ದಾರೆ.

ಅದು ಪ್ರಜ್ಞಾಪೂರ್ವಕವಾಗಿಯೇ, ಅಪ್ರಜ್ಞಾಪೂರ್ವಕವಾಗಿಯೇ ಅವಳ ಎಲ್ಲಾ ತಾಕಲಾಟಗಳು ದಾಖಲಾಗಿದೆ. ಇದರಿಂದ ಚಾರಿತ್ರಕವಾಗಿ ಹೆಣ್ಣಿನ ಮೇಲೆ ಎಲ್ಲ ವಲಯದಲ್ಲಿ ಹಂತ ಹಂತವಾಗಿ ಆಕ್ರಮಣ ನಡೆದಿರುವುದನ್ನು ತೋರಿಸುತ್ತದೆ. ಹಾಗಾಗಿಯೇ ಭಾರತೀಯ ಸಾಹಿತ್ಯ ಆಯಾ ಕಾಲಘಟ್ಟದ ಎಲ್ಲಾ ಆಗುಹೋಗುಗಳ ಪ್ರತಿಬಿಂಬವಾಗುತ್ತವೆ" (ಮನುಸ್ಮೃತಿ, ಉದೃತ: ಬಾಬುರಾವ್ ಮುಡಬಿ, ೨೦೦೫, ಪು.೧೭) ಎನ್ನುತ್ತಾರೆ.

ಹಾಗೆಯೇ ಮಹಾಕಾವ್ಯಗಳಲ್ಲಿನ ಮಹಿಳೆಯರ ಸ್ಥಾನಮಾನಗಳ ಬಗೆಗೆ ಮುಡುಬಿಯವರು ಹೀಗೆ ವಿಶ್ಲೇಷಿಸುತ್ತಾರೆ. "ಎಲ್ಲಿ ಸ್ತ್ರೀಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ವಾಸಿಸುತ್ತಾರೆ" (ಮನುಸ್ಮೃತಿ, ಉದೃತ: ಬಾಬುರಾವ್ ಮುಡಬಿ, ೨೦೦೫, ಪು.೨೭) ಎಂದು ನಂಬಿಸಿರುವ ಭಾರತೀಯ ಸಂಸ್ಕೃತಿ ಹೀಗೆ ಮಹಿಳೆಯರನ್ನು ಒಂದು ಕಡೆ ವೈಭವೀಕರಿಸುತ್ತಲೇ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಸೀತೆ, ಊರ್ಮಿಳಾ, ದ್ರೌಪದಿಯಂತಹ ಪಾತ್ರಗಳು ಈಗಿನ ಮಹಿಳೆಯರ ಮಾದರಿಗಳೆಂದು ಪ್ರಸ್ತುತಪಡಿಸುತ್ತದೆ. ಮತ್ತೊಂದು ದಾರಿಯಲ್ಲಿ ತುಚ್ಛೀಕರಿಸುತ್ತದೆ. ಆದರೆ ಇವುಗಳ ಸ್ಥಾಪಿತ ವ್ಯವಸ್ಥೆ ಮೌಲ್ಯಗಳಾದ ಶೀಲ, ಅಶ್ಲೀಲ, ಪಾತಿವ್ರತ್ಯ, ಪತಿನಿಷ್ಠೆಯನ್ನು ಕಾಪಾಡುವ ಹೆಣ್ಣಿನ ಪ್ರತಿನಿಧಿಗಳು ಎಂಬ ಪ್ರಜ್ಞೆ ಕೂಡ ಮೂಡದಂತಹ ವಿಸ್ಮೃತಿಯನ್ನು ಭಾರತೀಯ ಮಹಿಳಾ ಸಮುದಾಯಕ್ಕೆ ತಂದಿಟ್ಟಿದೆ.

"ಹೆಣ್ಣಾಗಿ ಹುಟ್ಟುವುದೇ ಒಂದು ಶಾಪ ಎಂಬ ನಂಬಿಕೆ ನಮ್ಮ ಜನಪದ ಕಾವ್ಯಗಳಲ್ಲಿ ಚಿತ್ರಿತವಾಗಿದೆ. ಅದು ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣನ್ನು ಮಗಳಾಗಿ, ತಾಯಿಯಾಗಿ ಪುರುಷ ಅಧೀನದಲ್ಲಿರುವುದನ್ನು ಸ್ಥಿರೀಕರಿಸುತ್ತದೆ. ಇದು ಆಕೆಯ ಬದುಕಿನ ವಿವಾಹ ಸಂದರ್ಭವನ್ನು ಒಳಗೊಂಡಂತೆ ಎಲ್ಲ ಹಂತದಲ್ಲೂ ಹೆಣ್ಣಿನ ಸಹಜ ಆಸೆ, ಆಕಾಂಕ್ಷೆಗಳನ್ನು ನಾಶಮಾಡಿ ಅವಳನ್ನು ನಾಲ್ಕು ಗೋಡೆಗಳಿಗೆ ಸೀಮಿತಗೊಳಿಸುವುದನ್ನು ಪ್ರತಿನಿಧಿಸುತ್ತದೆ."(ಶೈಲಜ ಹಿರೇಮಠ, ೨೦೦೩, ಪು.೪೧-೫೫)

ಇಷ್ಟೆಲ್ಲಾ ನೋವು ದುಖಃಗಳಿಗೆ ಒಳಪಟ್ಟ ಮಹಿಳೆಯ ಅಸ್ತಿತ್ವವನ್ನು ಭಾರತೀಯ ಸಂಸ್ಕೃತಿಯಲ್ಲಿ ಶೋಧಿಸುವುದು ಕಷ್ಟಸಾಧ್ಯದ ಮಾತು. ಇದನ್ನು ಲಿಖಿತ ಪರಂಪರೆಯ ಸಾಹಿತ್ಯ ವಲಯವನ್ನಾಧರಿಸಿ ಶೋಧಿಸುವುದಕ್ಕೆ ಪ್ರಯತ್ನಿಸುವುದಾದರೆ ಈ ಸಂಸ್ಕೃತಿಗೆ ಅನೇಕ ಸಾವಿರ ವರ್ಷಗಳ ಇತಿಹಾಸವಿದೆ. ಅದು ಸಾಹಿತ್ಯದಲ್ಲಿ ಪ್ರತಿನಿಧಿಸಲ್ಪಟ್ಟಿದೆ. ಸಾಹಿತ್ಯದ ಚರಿತ್ರೆಯುದ್ದಕ್ಕೂ ಅನೇಕ ಸಂಗತಿಗಳು ದಾಖಲಾಗಿವೆ. ಭಾರತೀಯ ಸಮಾಜವು ಅನೇಕ ಕಾಲಘಟ್ಟಗಳನ್ನು ದಾಟಿದ್ದು ನಾನಾ ಸ್ಥಿತ್ಯಂತರಗಳಿಗೆ ಒಳಗಾಗಿದೆ. ಆಯಾ ಶತಮಾನದಲ್ಲಿ ಘಟಿಸಿದ ಘಟನೆಗಳು ಆ ಕಾಲದ ಬುಡಕಟ್ಟು ಸಮಾಜದಲ್ಲಿ ದಾಖಲಾಗಿವೆ. ಇದೆಲ್ಲ ಲಿಖಿತ ಪರಂಪರೆಗಿಂತ ಹೆಚ್ಚಾಗಿ ಮೌಖಿಕ ಪರಂಪರೆಯಲ್ಲಿ ಸ್ಮೃತಿಗಳ ಮೂಲಕ ದಾಖಲಾಗಿವೆ. ಇದು ಮಹತ್ವವಾದ ಸಂಗತಿ. ಈ ಕುರಿತ ಮಾಹಿತಿಗಳು ದಾಖಲಾಗಬೇಕಾಗಿವೆ. ಇದು ಮತ್ತೊಂದು ಅಧ್ಯಯನದ

ಲಿಖಿತ ಪರಂಪರೆಗಳಲ್ಲಿ ಮನು ಆಲೋಚನೆಗಳು ಮಹತ್ವವಾದವು. ಆತನ ಪ್ರಕಾರ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" (ಮನು, ಉದೃತ: ಶೇಷನವರತ್ನ, ೨೦೦೪, ಪು.೯೬) ಎಂಬ ಮನುವಿನ ಮಹಿಳಾ ವಿರೋಧಿ ಮಾನವ ಸಿದ್ಧಾಂತ ನಮ್ಮ ಸಮಾಜದಲ್ಲಿ ಪ್ರಚಲಿತಗೊಂಡಿತ್ತೆ ಇಲ್ಲವೇ ಎಂಬ ಅನೇಕ ಚರ್ಚೆಗಳಿವೆ. ಈ ಕುರಿತು ಆ ಕ್ಷೇತ್ರದಲ್ಲಿ ಸಾಕಷ್ಟು ಅಧ್ಯಯನಗಳು ನಡೆದಿವೆ. ಅದರಲ್ಲಿ ಡಿ.ಡಿ.ಕೋಸಾಂಬಿ, ದೇವಿಪ್ರಸಾದ್, ಆರ್.ಎಸ್.ಶರ್ಮಾ ಮುಂತಾದ ವಿದ್ವಾಂಸರು ಚರಿತ್ರೆಯನ್ನು ಹೆಚ್ಚು ವೈಚಾರಿಕವಾಗಿ ವಿಶ್ಲೇಷಿಸಿದ್ದಾರೆ. ಅವರ ಅಧ್ಯಯನದ ಹಿನ್ನಲೆಯಲ್ಲಿ ಭಾರತೀಯ ಮಹಿಳೆಯರ ಕುರಿತ ಕೆಲವು ಸಂಗತಿಗಳನ್ನು ಪರಿಶೀಲಿಸುವುದು ಉಪಯುಕ್ತ.

ಅವರ ಪ್ರಕಾರ "ಆರ್ಯರು ಭಾರತಕ್ಕೆ ಆಗಮಿಸುವ ಮುಂಚೆ ದ್ರಾವಿಡರ ಸಮಾಜದಲ್ಲಿ ಕುಟುಂಬಗಳು ಕೃಷಿಯನ್ನೇ ತಮ್ಮ ಪ್ರಧಾನ ವೃತ್ತಿಯಾಗಿಸಿಕೊಂಡಿದ್ದು, ಆಗ ಸ್ತ್ರೀ - ಪುರುಷರ ನಡುವೆ ಯಾವುದೇ ತಾರತಮ್ಯ ಇರಲಿಲ್ಲ. ಜೊತೆಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಅಲೆಮಾರಿ ಜನಾಂಗವಾಗಿದ್ದ ಆರ್ಯರು ಭಾರತಕ್ಕೆ ಬಂದಮೇಲೆ ಇಲ್ಲಿ ಅಸ್ತಿತ್ವದಲ್ಲಿದ್ದ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಬೇಕಾದ ಆಸಕ್ತಿ, ಜ್ಞಾನ ಹೊಂದಿಲ್ಲದ ಅವರು ಸ್ಥಳೀಯರೊಂದಿಗೆ ಸಂಘರ್ಷಕ್ಕೆ ಇಳಿದರು. ಪರಿಣಾಮ ಭಾರತದಲ್ಲಿದ್ದ ಬುಡಕಟ್ಟು ಸಮಾಜದ ಪ್ರಾಥಮಿಕ ಸಂರಚನೆ ವ್ಯವಸ್ಥೆ ಇಮ್ಮುಖಗೊಂಡಿತು. ಆಗ ಪಿತೃಪ್ರಧಾನ ಕುಟುಂಬಗಳು ಆಕಾರ ಪಡೆಯುವ ಸಂದರ್ಭ ಒದಗಿಬಂದಿತು. ಈ ಹಂತದಲ್ಲಿ ಆರ್ಥಿಕ ರಚನೆ ತೀರ ಸರಳವಾದ್ದರಿಂದ ಸ್ತ್ರೀ-ಪುರುಷರ ನಡುವೆ ಒಡೆಯ-ಗುಲಾಮನ ಸಂಬಂಧಗಳಾಗಿರಲಿಲ್ಲ" ಎಂದು ಹೇಳಬಹುದು. (ಡಿ.ಡಿ. ಕೋಸಾಂಬಿ; ಉದೃತ: ಎನ್.ಗಾಯಿತ್ರಿ, ೧೯೯೬, ಪು.೨೨-೨೩)

ಆದರೆ ಅಲೆಮಾರಿಗಳಾದ ಆರ್ಯರು ಭಾರತಕ್ಕೆ ಬಂದು ಸ್ಥಿರವಾಗಿ ನಿಂತ ನಂತರ ಭಾರತೀಯ ಸಮಾಜದೊಂದಿಗೆ ಬೆರತರು. ಕ್ರಮೇಣ ಇಲ್ಲಿನ ದ್ರಾವಿಡರ ಕೃಷಿ, ಅದರ ಸಂಬಂಧಿ ವೃತ್ತಿಗಳನ್ನು ರೂಢಿಸಿಕೊಂಡರು. ಈ ಮುಖಾಂತರವೇ ಆರ್ಯರು ದ್ರಾವಿಡರ ಸಾಮಾಜಿಕತೆಯನ್ನು ಪಕ್ಕಕ್ಕೆ ಸರಿಸಿ ತಮ್ಮ ಬದುಕಿನ ಕ್ರಮವನ್ನು ಸ್ಥಾಪಿಸಿದರು. ನಂತರ ಆರ್ಯರು ತಮ್ಮ ಹಿಂದಿನ ಸಮಾಜದ ಸ್ವರೂಪ, ಭಾವ, ಲಯವನ್ನೆ ಸಾಹಿತ್ಯದಲ್ಲಿ ಕಟ್ಟಿಕೊಟ್ಟಿದ್ದರು.

ಅದಕ್ಕೆ ಸಂಬಂಧಿಸಿದಂತೆ ಋಗ್ವೇದ, ಒಳಗೊಂಡ ಸಾಹಿತ್ಯ ಮಹತ್ವವಾದದ್ದು. ಇದರಲ್ಲಿ "ಹೆಣ್ಣನ್ನು ಒಂದು ಜೀವಿಯಂತೆ ಪರಿಭಾವಿಸಿದ್ದಾರೆ. ಇದು ಮಹಿಳೆಯ ಎಲ್ಲ ಸ್ಥಾನಮಾನವನ್ನು ಸೂಚಿಸುತ್ತದೆ. ಜೊತೆಗೆ ಆಗಿನ ಯಾವ ಸಾಮಾಜಿಕ ಸಂಸ್ಥೆ ಕೂಡ ವಿವಾಹ ಒಳಗೊಂಡು

ಯಾವ ವಿಷಯವನ್ನು ಕಡ್ಡಾಯಗೊಳಿಸಿರಲಿಲ್ಲ" ಎಂದು ನಿರೂಪಿಸುತ್ತದೆ. (ಡಿ.ಡಿ. ಕೋಸಾಂಬಿ; ಉದ್ಧೃತ: ಎನ್.ಗಾಯಿತ್ರಿ, ೧೯೯೬, ಪು.೨೬)

ನಂತರದಲ್ಲಿ "ದ್ರಾವಿಡರ ಮೇಲೆ ಆರ್ಯರು ಅಧಿಕಾರ ಸ್ಥಾಪಿಸಿದ ಪರಿಣಾಮ ಆ ಸಮಾಜ ಕ್ರಮೇಣ ಆರ್ಯರ ಸಮಾಜದ ವರ್ಗೀಕರಣದಲ್ಲಿ ಬೆರೆತುಹೋಯಿತು. ವರ್ಣಾಶ್ರಮ ವ್ಯವಸ್ಥೆ ಅಸ್ತಿತ್ವ ಪಡೆದುಕೊಂಡಿತು. ಕೆಳಜಾತಿಗಳು ನಿಷ್ಪನ್ನಗೊಂಡವು. ಇವರು ಆರ್ಯರ ಮೇಲ್ಜಾತಿಯವರ ಆರ್ಥಿಕ ಕೃಷಿ ಚಟುವಟಿಕೆಗಳಲ್ಲಿ ದುಡಿಯುವ ಆಕರಗಳಾದರು. ಇಂತಹ ದೊಡ್ಡ ಪ್ರಮಾಣದ ಕೃಷಿಯಲ್ಲಿ ಮಹಿಳೆಯರಿಗೆ ಉತ್ಪಾದನಾ ಚಟುವಟಿಕೆಗೆ ಅವಕಾಶ ದೊರೆಯಬೇಕಾಗಿತ್ತು. ಆದರೆ ವಾಸ್ತವದಲ್ಲಿ ಆಗಲಿಲ್ಲ. ಇದಕ್ಕೆ ಎರಡು ಕಾರಣಗಳಿವೆ. ಒಂದು ಕೆಳಜಾತಿ. ಎರಡನೆಯದು ಪಿತೃಪ್ರಧಾನತೆಯ ಪರಿಣಾಮ. ಆದ್ದರಿಂದ ಅವರಿಗೆ ಉದ್ಯೋಗಾವಕಾಶಗಳೇ ಕಡಿಮೆಯಾದವು." (ಅದೇ, ಪು, 24–25) ಅಂದರೆ ಮೊದಲು ಜನಜೀವನದ ಎಲ್ಲಾ ರಂಗಗಳಲ್ಲಿ ಪ್ರಧಾನ ಪಾತ್ರವಹಿಸುತ್ತಿದ್ದ ಮಹಿಳೆ ಕ್ರಮೇಣ ಕೇಂದ್ರಭಾಗದ ಬದುಕಿನ ರಂಗದಿಂದ ಪರದೆಯ ಹಿಂದಕ್ಕೆ ಸರಿದಳು. ಪಶುಪಾಲನೆ ಮತ್ತು ಕೃಷಿಯಲ್ಲಿ ಮಹಿಳೆಯ ಅವಲಂಬನೆ, ದುಡಿಯುವ ವರ್ಗದ ದೃಷ್ಟಿಯಿಂದ ಕಡಿಮೆಯಾಯಿತು. ಜೊತೆಗೆ ಉಳುಮೆಗೆ ನೇಗಿಲು ಎಂಬ ಸಾಧನ ಅಸ್ತಿತ್ವಕ್ಕೆ ಬಂದನಂತರ ಮಹಿಳೆಯನ್ನು 'ಬಯಲು' ಎಂಬ ಪ್ರಕೃತಿದತ್ತ ಸಾರ್ವಜನಿಕ ಸ್ಥಳದಿಂದ ನಾಲ್ಕು ಗೋಡೆ ಎಂಬ ಸಾಮಾಜಿಕ ನೆಲೆಯ ಖಾಸಗಿ ಸ್ಥಳಕ್ಕೆ ಕೂಡಿ ಹಾಕಲಾಯಿತು. ಅದರಲ್ಲಿ ಆರ್ಯ ಮಹಿಳೆಯರು ಪತ್ನಿಯರಾದರು. ಮನೆಗೆಲಸ ಮಾಡುತ್ತಿದ್ದ ಕೆಳಜಾತಿಯ ಹೆಂಗಸರು ಆರ್ಯ ಪುರುಷ ಲೈಂಗಿಕತೆ ಪೂರೈಸುವ ವಸ್ತುಗಳಾದರು. "ಇದು ಮುಂದುವರಿದು ಉಪಪತ್ನಿಯಾಗುವ ಪದ್ಧತಿಯೂ ಜಾರಿಗೆ ಬಂತು. ಮನೆಯ ಹೊರಗೆ ಅವಕಾಶಗಳನ್ನು ಕಳೆದುಕೊಂಡ ಆರ್ಯಮಹಿಳೆ ಗೃಹದಲ್ಲಿ ಬಂಧಿತಳಾಗಿ ಗೃಹಲಕ್ಷ್ಮಿ ಅಂತ ಗುರುತಿಸಲ್ಪಟ್ಟಳು." (ಎನ್.ಗಾಯಿತ್ರಿ, ೧೯೯೬, ಪು.೨೬)

ಸಮಾಜದಲ್ಲಿ ಉಂಟಾದ ಈ ಅಸ್ವಸ್ಥಧೋರಣೆಯಿಂದಾಗಿ ದಾಸ್ಯಗಳ ಜನಸಮೂಹವೇ ನಿರ್ಮಾಣಗೊಂಡಿತು. ಆದರೆ ದಾಸ್ಯಗಳಲ್ಲಿ ಪುರುಷ ಮತ್ತು ಮಹಿಳೆ ನಡುವಿನ ಲಕ್ಷಣಗಳನ್ನು ಸ್ಪಷ್ಟವಾಗಿ ಗುರುತಿಸಲು ಆಗಲಿಲ್ಲ. ಆದರೆ ಅದು ವರ್ಣಗಳಾಗಿ ವಿಂಗಡಿಸಲ್ಪಟ್ಟಿತು. ನಂತರ ಅವಧಿಯ ಸಮಾಜ ವರ್ಗೀಕರಣದಲ್ಲಿ 'ಶೋಷಕರು', 'ಶೋಷಿತರು' ಎಂಬ ಎರಡು ಪ್ರಭೇದಗಳು ರೂಪಗೊಂಡವು. ಅದರಲ್ಲಿ ಶೋಷಿತರು ಪುರುಷರ ಒಂದು ವರ್ಗ ಒಂದೆಡೆ, ಮತ್ತೊಂದೆಡೆ ಮಹಿಳೆಯರ ವರ್ಗಗಳನ್ನು ಗುರುತಿಸುತ್ತಿದ್ದರು. ಇದರಲ್ಲಿ ಕೆಳಜಾತಿ ಮಹಿಳೆಯ ಪ್ರಶ್ನೆಗಳು ಪ್ರಸ್ತುತಗೊಳ್ಳಲಿಲ್ಲ.

ನಂತರ ಕ್ರಿ. ಪೂ. ಆರನೇ ಶತಮಾನದಲ್ಲಿ "ಬೌದ್ಧ ಮತ್ತು ಜೈನ ಧರ್ಮಗಳು ಅಸ್ತಿತ್ವಕ್ಕೆ ಬಂದವು. ಇವು ಹಿಂದೂ ಧರ್ಮದ ಕೊರತೆಯನ್ನು ತುಂಬುವ ಪ್ರಯತ್ನವನ್ನು ಮಾಡಿದವು. ಆದರೆ ಇದರ ರಚನೆ, ತಾತ್ವಿಕ ನೆಲೆಗಳ ಮಹಿಳಾ ಕುರಿತಾದ ಧೋರಣೆ ಬಗ್ಗೆ ಅಧ್ಯಯನದ ಅಗತ್ಯತೆಯಿದೆ. ಆದರೂ ಸಮಾಜದ ಎಲ್ಲಾ ಮಹಿಳೆಯರನ್ನು ಅವರ ಅಂತಸ್ತು, ಜಾತಿ, ಧರ್ಮಗಳನ್ನು ಪರಿಗಣಿಸದೆ ತನ್ನ ತೆಕ್ಕೆಗೆ ತೆಗೆದುಕೊಂಡಿದ್ದವು" (ಡಿ.ಡಿ. ಕೋಸಾಂಬಿ; ಉದ್ಧೃತ: ಎನ್.ಗಾಯಿತ್ರಿ, ೧೯೯೬, ಪು.೨೯-೩೦) ಈ ಎಲ್ಲ ಬೆಳವಣಿಗೆಯನ್ನು ಚರಿತ್ರಾಕಾರರು ಅಂದಿನ "ಬಹುದೊಡ್ಡ ಕ್ರಾಂತಿಯಾಗಿತ್ತು" ಎನ್ನುತ್ತಾರೆ.

ಇದಕ್ಕೆ "ಪ್ರತಿಯಾಗಿ ಹಿಂದೂ ಧರ್ಮದ ಪುರೋಹಿತಶಾಹಿಗಳು ಅವನತಿಯ ಹಾದಿಯಲ್ಲಿದ್ದ ವೈದಿಕ ಧರ್ಮವನ್ನು ಪ್ರತಿಷ್ಠಾಪಿಸುವ ಆವೇಶದಲ್ಲಿ ಸಮಾಜಕ್ಕೆ ಅನೇಕ ಬಿಗಿ ನಿಯಮ ಮತ್ತು ನಿಷೇಧಗಳನ್ನು ಹೇರಿದರು. ಇದರಲ್ಲಿ ಮಹಿಳೆಯೇ ಕೇಂದ್ರ ವಸ್ತುವಾದಳು. ಇದನ್ನು ಅಧ್ಯಯನಗಳು ಸ್ಮೃತಿಗಳ ಕಾಲವೆಂದು ಗುರುತಿಸಿವೆ." (ಬಾಬುರಾವ್ ಮುಡಬಿ, ೧೯೯೬, ಪು.೭,೯) ಈ ಕಾಲದಲ್ಲಿನ ಮಹಿಳೆ ಕುರಿತ ಮನುವಿನ ವಿಚಾರ ಪರಿಶೀಲನೆ ಬಯಸುತ್ತದೆ.

ಈ ಕುರಿತು ಎನ್.ಗಾಯತ್ರಿಯವರ ವಿಶ್ಲೇಷಣೆ ಮಹತ್ವದ್ದು. "ಇದು ಮಹಿಳೆಯ ಚಾರಿತ್ರ್ಯದ ಬಗ್ಗೆ ಹೆಚ್ಚು ಒತ್ತು ಕೊಟ್ಟ ಕಾಲ ಇದು. ಪಾತಿವ್ರತ್ಯವನ್ನು ಹೆಣ್ಣಿನ ಶ್ರೇಷ್ಠ ಮೌಲ್ಯವಾಗಿಸಿ ಅದನ್ನು ಹಿಂದೂಗಳ ತಲೆಯಲ್ಲಿ ಭದ್ರವಾಗಿ ಬೇರು ಬಿಡುವಂತೆ ಮಾಡುವುದರಲ್ಲಿ ಯಶಸ್ವಿಯಾದ ಈ ಕಾಲದಲ್ಲಿ ಕಟ್ಟುನಿಟ್ಟಾಗಿ ಏಕ ವಿವಾಹ ಪದ್ಧತಿಯನ್ನು ಸಾಮಾಜಿಕ ನಿಯಮವಾಗಿ ಪ್ರತಿಪಾದಿಸಿದರು." (ಎನ್.ಗಾಯಿತ್ರಿ: 1996: ಪು,33) ಆದರೆ ಏಂಗಲ್ಸ್‌ನು "ಕುಟುಂಬದ ಉಗಮ ಕೃತಿಯಲ್ಲಿ ಹೇಳುವಂತೆ ಏಕ ವಿವಾಹ ಮಹಿಳೆಯರಿಗೆ ಮಾತ್ರ ಕಡ್ಡಾಯವಾಗಿತ್ತೇ ಹೊರತು ಪುರುಷರಿಗಲ್ಲ. ಬಹುಪತ್ನಿತ್ವವನ್ನು ಆಚರಿಸುವ ಪುರುಷರಿಗೆ ಏಕ ವಿವಾಹ ನಿಯಮವನ್ನು ಭಾರತದಲ್ಲಿ ಅನ್ವಯವಾಗುವುದೇ ಇಲ್ಲ. ಜೊತೆಗೆ ಸ್ತ್ರೀಗೆ ವಿದ್ಯಾಭ್ಯಾಸವನ್ನು ನಿರಾಕರಿಸಿದ್ದು, ಬಾಲ್ಯವಿವಾಹ ಇವು ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನವನ್ನು ಕೆಳಕ್ಕಿಳಿಸಿದವು"(ಏಂಗೆಲ್ಸ್, ಉದ್ಧೃತ: ಎನ್.ಗಾಯಿತ್ರಿ, ೧೯೯೬, ಪು.೩೩) ಎನ್ನುತ್ತಾರೆ.

ಗಂಡಿನ ಪ್ರಾಧಾನ್ಯತೆಯು ಬಹುವಾಗಿದ್ದ ಈ ಕಾಲದಲ್ಲಿ ಹೆಣ್ಣು ಪರಾವಲಂಬನೆಯ ದಾಸ್ಯದ ಅಂಚಿಗೆ ನೂಕಲ್ಪಟ್ಟಳು. "ಹೆಣ್ಣಾದವಳು ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿ, ವಯಸ್ಕಳಾದಾಗ ಪತಿಯ ಪೋಷಣೆಯಲ್ಲಿ ಮತ್ತು ವೃದ್ಧಳಾದಾಗ ಮಗನ ಪೋಷಣೆಯಲ್ಲಿ ಇರಬೇಕೆಂದು ಪ್ರತಿಪಾದಿಸಿ, "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ"(ಮನು. ಉದ್ಧೃತ: ಶೇಷನವರತ್ನ,

೨೦೦೪, ಪು.೫೩) ಎಂದು ಘೋಷಿಸಿದ ಮನುವಿನ ಮಾತಿನ ಧೋರಣೆ ಹಲವಾರು ಶತಮಾನಗಳವರೆಗೆ ಉಳಿದುಕೊಂಡಿದ್ದು, ನವಪಿತೃಪ್ರಧಾನತೆ ಇಂದಿಗೂ ಮುಂದುವರೆಯುತ್ತಿದೆ. "ಪತಿಯೇ ಪರದೈವ" ಎನ್ನುವ ಮೂಲಕ ಮನು ಹೆಣ್ಣಿನ ನಿಷ್ಠೆಯನ್ನು ಗಂಡನಿಗೆ ಖಾಯಂಗೊಳಿಸಿದ. ಹಾಗಾಗಿ ಮಹಿಳೆಯರ ಪರಿಸ್ಥಿತಿ ಅವರ ಯಾವ ವರ್ಗಕ್ಕೆ ಸೇರಿದವರು ಎಂಬ ಅಂಶದ ಆಧಾರದ ಮೇರೆಗೆ ನಿಗದಿಗೊಂಡಿತ್ತು.

ನಂತರದ ಸಂದರ್ಭದಲ್ಲಿ ಅಸ್ತಿತ್ವಕ್ಕೆ ಬಂದ ಭಕ್ತಿಪಂಥ, ಗಂಡು-ಹೆಣ್ಣು, ಜಾತಿ-ವರ್ಗ, ಭೇದ-ಭಾವಗಳನ್ನು ಧಿಕ್ಕರಿಸಿ ಎಲ್ಲರೂ ದೇವರು ಮುಂದೆ ಮಾನವರು ಎಂಬ ಭಾವನೆಯನ್ನು ಮೂಡಿಸುತ್ತಾ ತನ್ನ ಕಾರ್ಯವನ್ನು ಆರಂಭಿಸಿತು. ಅದು ಅಷ್ಟು ಪ್ರಸ್ತುತ ಪಡೆಯಲಿಲ್ಲ. ಅಲ್ಲದೆ ಅದು ಬೇರೆ ಪ್ರದೇಶ, ಭಾಷೆಗಳಲ್ಲಿ, ಬೇರೆ ನೆಲೆಯಲ್ಲಿ ಅಸ್ತಿತ್ವ ಪಡೆದಿತ್ತು ಎನ್ನಬಹುದು. ಈ ಹಂತಕ್ಕಾಗಲೇ ಭಾರತವು ರಾಜಕೀಯವಾಗಿ ಹಲವು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತು. ಆದರೆ ಮಧ್ಯಕಾಲೀನ ಸಂದರ್ಭದಲ್ಲಿನ ಮುಸ್ಲಿಂ ಆಕ್ರಮಣ, ದಬ್ಬಾಳಿಕೆ ಭಾರತದ ಅರಸರ ಆಡಳಿತವನ್ನು ಕುಸಿಯುವಂತೆ ಮಾಡಿತು. ಭಾರತದಲ್ಲಿ ಈ ರಾಜಕೀಯ ವ್ಯವಸ್ಥೆಯಿಂದಾಗಿ ಸಮಾಜದಲ್ಲಿ ಕಂದಾಚಾರ ತುಂಬಿ ತುಳುಕುತ್ತಿತ್ತು. ಶೋಷಣೆಗಳಿಂದ ಜನ ರೋಸಿ ಹೋಗಿದ್ದರು. ಈ ಎಲ್ಲ ರಾಜಕೀಯ ಲಕ್ಷಣಗಳನ್ನು ಮಹಾರಾಷ್ಟ್ರವು ಸಹ ಒಳಗೊಂಡಿತ್ತು.

ಭಾರತೀಯ ಸಮಾಜವು ಅನೇಕ ಭಿನ್ನತೆಗಳಿಂದ ಕೂಡಿದ್ದು, ತುಂಬಾ ಸಂಕೀರ್ಣವಾಗಿದೆ. ಈ ಸಂಕೀರ್ಣದಲ್ಲಿ ಶ್ರೇಣೀಕರಣ ಅಸಮಾನತೆ ತುಂಬಾ ವ್ಯವಸ್ಥಿತವಾಗಿ ಕೆಲಸ ಮಾಡುತ್ತದೆ. ಇದನ್ನು ಜಾರಿಗೊಳಿಸಿದ ಜಾತಿ ಪದ್ಧತಿ ಸಮಾಜವನ್ನು ಆವರಿಸಿತ್ತು. ಇದರ ಕೆಳಸ್ಥಾನದಲ್ಲಿ ಅಸ್ಪೃಶ್ಯರು ಇದ್ದರು. ಇವರನ್ನು ಸವರ್ಣೀಯರು ಸಾಮಾಜಿಕ ಕಳಂಕ ಎಂದು ಪರಿಗಣಿಸಿದ್ದರು. "ಊರಿನಿಂದಾಚೆಗೆ ಕೊಳಗೇರಿಗಳಲ್ಲಿ ಬದುಕುತ್ತಾ ತಮ್ಮದೇ ಆದ ಯಾವುದೇ ರೀತಿಯ ಅಸ್ತಿತ್ವವನ್ನು ಹೊಂದಿರದ ಈ ಜನಾಂಗದವರ ನೆರಳು ಸೋಂಕಿದ್ದರೂ ಅಪವಿತ್ರವೆಂದು ಭಾವಿಸಲಾಗುತ್ತಿತ್ತು. ಮಲ ಹೋರುವ ಸತ್ತ ಪ್ರಾಣಿಗಳನ್ನು ತಿನ್ನುವ ಇವರು ಸವರ್ಣೀಯರನ್ನು ನೋಡದಂತೆ, ಮುಟ್ಟದಂತೆ, ಬದುಕಬೇಕಿತ್ತು. ತಾವು ನಡೆದ ಹಾದಿಯಲ್ಲಿ ಮೂಡಿದ ತಮ್ಮ ಹೆಜ್ಜೆ ಗುರುತುಗಳನ್ನು ಅಳಿಸಿ ಹಾಕಲು ಬೆನ್ನಿಗೆ ಪೊರಕೆ ಕಟ್ಟಿಕೊಂಡು, ಎಂಜಲು ಉಗಿಯಲು ಮಡಕೆ ಕಟ್ಟಿಕೊಂಡು, ಸಾಕಿದ ಪ್ರಾಣಿಗಳಿಗಿಂತ ಹೀನಾಯವಾದ ಬದುಕನ್ನು ಈ ಸಮುದಾಯದವರು ಅನೇಕ ಶತಮಾನಗಳಿಂದ ಬದುಕಿದ್ದರು. ಊರಿನೊಳಗೆ ಕಾಲಿಡುವುದು, ಸಾರ್ವಜನಿಕ ಕೆರೆಬಾವಿಗಳ ನೀರನ್ನು ಉಪಯೋಗಿಸದಿರುವುದು, ಓದು-ಬರಹದ ಕನಸನ್ನು ಕಾಣುವುದು ಕೂಡ ಇವರ ಪಾಲಿಗೆ ಮಾರಣಾಂತಿಕ ಅಪರಾಧವಾಗಿತ್ತು. ಮನುಷ್ಯನಿಗೆ

ಅತ್ಯಗತ್ಯವಾಗಿ ಬೇಕಾದ ಊಟ, ಬಟ್ಟೆ, ಸೂರು ಕೂಡ ಇವರು ಬಾಳಲು ಬೇಕಾದಷ್ಟು ಇರಲಿಲ್ಲ. ಒಟ್ಟಿನಲ್ಲಿ ಅಸ್ಪೃಶ್ಯರು ಶತಮಾನಗಳಿಂದ ಇಂಥ ಅವಮಾನವನ್ನು ಅನುಭವಿಸಿಕೊಂಡು, ಪ್ರಾಣಿ ಸಾದೃಶ್ಯ ಬದುಕನ್ನು ಬದುಕಿದರೂ ಯಾರು ಇದರ ವಿರುದ್ಧ ಉಸಿರೆತ್ತುವುದು ಸಾಧ್ಯವಾಗದಂತಹ ಸ್ಥಿತಿಯಲ್ಲಿ ಅಸ್ಪೃಶ್ಯರ ಧ್ವನಿಯನ್ನು ವ್ಯವಸ್ಥಿತವಾಗಿ ಅಡಗಿಸಲಾಗುತ್ತಿತ್ತು". (ಬಿ.ಯು.ಸುಮಾ, ೨೦೦೮, ಪು.೩)

ಮತ್ತೊಂದು ಕಡೆ ಮಹಿಳೆಯರ ಯಾತನೆಗೆ ಕೊನೆಯೇ ಇರಲಿಲ್ಲ. ಅವರನ್ನು ಕೇಳುವವರಿರಲಿಲ್ಲ. ಅಂದರೆ ಮಹಿಳೆಯರಿಗೂ ಮನಸ್ಸಿದೆ, ಭಾವನೆಗಳಿವೆ ಎಂಬುದನ್ನು ತಿಳಿದು ಒಪ್ಪಲು ಯಾರು ಸಿದ್ಧರಿರಲಿಲ್ಲ. ತವರು ಮನೆಯಲ್ಲಿ ಹುಟ್ಟಿ ಲಗ್ನವಾದೊಡನೆ ಭಯಭೀತಿಯಿಂದ ಗಂಡನೊಂದಿಗೆ ದಿನ ತಳ್ಳುವುದು ಹಾಗು ಮುಪ್ಪಿನಲ್ಲಿ ಮಕ್ಕಳ ಆಶ್ರಿತರಾಗಿ ಕೊನೆಯುಸಿರೆಳೆಯುವುದು ಅವರ ಪಾಡಾಗಿತ್ತು.

ಮಹಾರಾಷ್ಟ್ರ ಸಾಮಾಜಿಕ ಪರಿಸ್ಥಿತಿಯು ಇದಕ್ಕಿಂತ ಭಿನ್ನವಾಗಿರಲಿಲ್ಲ. ಆದರೆ ಶಿವಾಜಿ ಮಹಾರಾಷ್ಟ್ರದಲ್ಲಿ ಇಸ್ಲಾಂ ಆಡಳಿತದ ವಿರುದ್ಧ ಹಿಂದೂ ರಾಷ್ಟ್ರದ ಪರಿಕಲ್ಪನೆಯನ್ನು ಹುಟ್ಟುಹಾಕಿದರು. ಶಿವಾಜಿ ಆಳ್ವಿಕೆಯಲ್ಲಿ ಪ್ರಮುಖರಾಗಿದ್ದ ಪೇಶ್ವೆಗಳು ಸ್ವತಃ ಬ್ರಾಹ್ಮಣರಾಗಿದ್ದು, ವರ್ಣಾಶ್ರಮ ಚೌಕಟ್ಟನ್ನು ಮುರಿದು ಕ್ಷತ್ರೀಯ ಸ್ಥಾನವನ್ನು ಪಡೆದುಕೊಂಡುದಲ್ಲದೇ ಈ ಪಲ್ಲಟವನ್ನು ಉಳಿಸಿಕೊಳ್ಳಲು ಸೈನ್ಯ, ಹಣಕಾಸು, ಭೂಮಾಲೀಕತ್ವ ಇತ್ಯಾದಿ ಹಲವಾರು ವಲಯಗಳಲ್ಲಿ ತಮ್ಮನ್ನು ಪ್ರತಿಷ್ಠಾಪಿಸಿಕೊಂಡರು. ಅದರೊಂದಿಗೆ ಹೆಚ್ಚಿನ ಅಧಿಕಾರಕ್ಕಾಗಿ ತಾವೇ ಮುರಿದ ಚಾತುರ್ವರ್ಣದ ಚೌಕಟ್ಟು ತಮಗಲ್ಲದೆ ಬೇರ್‍ಯಾವ ಸಮಾಜಕ್ಕೂ ಹೊಸ ಸಾಧ್ಯತೆಗಳನ್ನು ತೆರೆಯಬಾರದು ಎಂಬ ಕಾರಣಕ್ಕಾಗಿಯೇ ಬ್ರಾಹ್ಮಣ ಪರವಾಗಿದ್ದ ಎಲ್ಲ ಸಾಮಾಜಿಕ, ಧಾರ್ಮಿಕ ಮೌಲ್ಯಗಳನ್ನು ರಾಜಕೀಯ ಶಾಸನಗಳಾಗಿಸಲು ತೊಡಗಿದರು. ಆಗ ಅವರು ಜಾತಿಪದ್ಧತಿಯನ್ನು ಕಟ್ಟುನಿಟ್ಟಾಗಿ ಆಚರಿಸುವುದು, ಜಾತಿ-ಜಾತಿಗಳ ನಡುವಿನ ಚಲನೆಯೊಂದನ್ನು ಸಂಪೂರ್ಣವಾಗಿ ನಿರ್ಬಂಧಿಸುತ್ತಿದ್ದರು.

ಅದಕ್ಕಾಗಿ "ಪೇಶ್ವೆಗಳು ಸಮಾಜದ ಅರ್ಧಭಾಗವಾದ ಸ್ತ್ರೀಯರ ಮೇಲೆ ನಿಯಂತ್ರಣ ಹೇರುವ ಮೂಲಕ ಪುರುಷ ನಿರ್ಬಂಧದ ಪ್ರಶ್ನೆಗಳನ್ನು ಎತ್ತದೆ ಹೇಗೆ ಅತ್ಯಂತ ವ್ಯವಸ್ಥಿತವಾಗಿ ಚಾತುರ್ವರ್ಣವನ್ನು, ಜಾತೀಯತೆಯನ್ನು ಅದರಲ್ಲಿನ ಶ್ರೇಣೀಕರಣ ಮೌಲ್ಯಗಳನ್ನು ಉಳಿಸಿಕೊಂಡರು. ಜಾತಿಗಳ, ವರ್ಣಗಳ ನಡುವಿನ ಮಹಿಳೆಯ ಚಲನೆಯನ್ನು (ಲೈಂಗಿಕ ಚಲನೆಯನ್ನು) ಉಗ್ರವಾದ ಶಾಸನಗಳ ಮೂಲಕ ನಿಯಂತ್ರಿಸಿದರು. ಅದು ವೈದಿಕ ಸಮಾಜದ ಎಲ್ಲ ಹಿಡಿತವನ್ನು ಉಳಿಸಿಕೊಳ್ಳುವುದರ ಜೊತೆಗೆ ಬಲಪಡಿಸಿಕೊಂಡಿತ್ತು. ಆದ್ದರಿಂದ ಪೇಶ್ವೆಗಳ ಆಳ್ವಿಕೆಯು ಬ್ರಾಹ್ಮಣ ಮಹಿಳೆಯರನ್ನು ಒಳಗೊಂಡಂತೆ ಸಮಾಜದ ಎಲ್ಲ ವರ್ಗದ ಸ್ತ್ರೀಯರನ್ನು ಆಕ್ರಮಿಸಿತು." (ಲೇ: ಎಂ.ಉಷಾ. ಸಂ: ಟಿ.ಆರ್.ಚಂದ್ರಶೇಖರ: ಪು.೬-೭)

ಇದನ್ನು ಒಟ್ಟಾರೆಯಾಗಿ ಹೇಳುವುದಾದರೆ ಪೇಶ್ವೆಗಳ ಆಳ್ವಿಕೆಯಲ್ಲಿ ಸ್ತ್ರೀಯರ ವಿವಾಹ ಬಾಹಿರ, ಜಾತಿ ಬಾಹಿರ ಸಂಬಂಧಗಳನ್ನು ಘೋರ ಅಪರಾಧ ಎಂದು ಪರಿಗಣಿಸಲಾಗಿತ್ತು. ಅಲ್ಲದೆ ಇದಕ್ಕೆ ಸ್ತ್ರೀ ಮಾತ್ರ ಉಗ್ರ ಶಿಕ್ಷೆಗೆ ಗುರಿಯಾಗುತ್ತಿದ್ದಳು. ಅಂದರೆ ಜಾತಿ ವ್ಯವಸ್ಥೆಯಿಂದಾಗಿ ಪುರುಷ ಸಮಾಜದ ಶ್ರೇಷ್ಠತೆಯನ್ನು ಸತಿ, ವಿಧವಾ ಆಚರಣೆಯ ಮೂಲಕ ಎತ್ತಿ ಹಿಡಿಯುತ್ತಿದ್ದರೆ, ಪುರುಷರು ಮಾತ್ರ ಎಲ್ಲ ಸ್ವಚ್ಛಂದ ಮೂಲಕವೇ ತನ್ನ ಶ್ರೇಷ್ಠತೆಯನ್ನು ತೋರಿಸುತ್ತಿದ್ದರು. ಆದರೆ ಬ್ರಾಹ್ಮಣ ಸೇವಾ ಸೌಕರ್ಯಕ್ಕಾಗಿ ಅದೇ ಸಮಾಜದ ಸ್ತ್ರೀಯರು, ಕೆಳ ಸಮಾಜದ ಸ್ತ್ರೀ - ಪುರುಷರು ಬರಲೇಬೇಕಾಗಿತ್ತು. ಹಾಗಾಗಿ ಎಲ್ಲ ವರ್ಗದ ಮಹಿಳೆಯರು ಮತ್ತು ಕೆಳಜಾತಿಯ ಪುರುಷರು ಜಾತಿ ಶ್ರೇಣೀಕರಣದಲ್ಲಿ ದಾಸ್ಯಕ್ಕೆ ಒಳಪಟ್ಟರು ಎಂದು ಹೇಳಬಹುದು.

ಇಂತಹ ಭಾರತದ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗಳ ನಡುವೆ ಭಾರತದ ಮೇಲಿನ ಬ್ರಿಟಿಷ್‌ರ ಆಕ್ರಮಣ ಮತ್ತು ಅವರ ಶಿಕ್ಷಣ ಸ್ವರೂಪ ಹೊಸದೊಂದು ತಿಳುವಳಿಕೆಯನ್ನು ನೀಡಿತ್ತು. ಅಲ್ಲದೆ, ಭಾರತೀಯ ಸಾಮಾಜಿಕತೆಯಲ್ಲಿನ ಮಹಿಳೆ ಮತ್ತು ಜಾತಿ ಸಂಬಂಧಿ ವಿಷಯಗಳನ್ನು ಬೇರೊಂದು ಚೌಕಟ್ಟಿನಲ್ಲಿ ಚರ್ಚಿಸಿತ್ತು. ಇದು ನಮ್ಮನ್ನು ಮತ್ತೊಂದು ಕಡೆ ಕೊಂಡೊಯ್ಯುತ್ತದೆ. ಬ್ರಿಟಿಷ್‌ರು ತಮ್ಮ ಒಡೆದು ಆಳುವ ನೀತಿಯಿಂದಾಗಿ ಭಾರತದ ಎಲ್ಲ ಪ್ರದೇಶಗಳನ್ನು ತಮ್ಮ ಹಿಡಿತಕ್ಕೆ ತಗೆದುಕೊಂಡರು. ಇದರಿಂದ ಭಾರತದ ವಿವಿಧ ಕ್ಷೇತ್ರ, ವಲಯಗಳಲ್ಲಿ ಬ್ರಿಟಿಷರ ಪ್ರಭಾವ ತೀವ್ರವಾಗಿ ಆವರಿಸಿತು. "ಬ್ರಿಟಿಷ್‌ರು ಈ ಉಪಖಂಡದ ಮೇಲಿನ ತಮ್ಮ ಹಿಡಿತವನ್ನು ತಮ್ಮ ಉತ್ತಮ ತಿಳುವಳಿಕೆಯ ಫಲದ ಕುರುಹು ಎಂದು ಭಾವಿಸಿದ್ದರು." (ಜೊರಾಲ್ಡಿನಾ ಪೋರ್ಬ್ಸ್: ೨೦೦೪: ಪು.೨೦) ಆಗ ಪಾಶ್ಚಾತ್ಯರು ಜಾತಿಪದ್ಧತಿಯನ್ನು ಭಾರತದ ಸಮಕಾಲೀನ ಸಾಮಾಜಿಕ ಪದ್ಧತಿಯಾಗಿ ಗ್ರಹಿಸಲು ಪ್ರಯತ್ನಿಸಿದರು. ಏಕೆಂದರೆ ಈ ಪದ್ಧತಿ ಅವರಿಗೆ ಹೊಸದಾಗಿತ್ತು. ಅಲ್ಲದೆ, ಅಪರಿಚಿತವಾಗಿದ್ದ ಅದನ್ನು ಅವರು ತಮಗೆ ತಾವೇ ವಿವರಿಸಿಕೊಳ್ಳಲು ಪ್ರಯತ್ನಿಸಿದರು. ಹಾಗಾಗಿ ಅವರು "ಮೊದಲಿಗೆ ಜಾತಿಯ ಮೂಲವನ್ನು ಜಾತಿಯಿಂದಲೇ ಆರಂಭಿಸಿ ಸಮಕಾಲೀನ ಆಚರಣೆಯ ನೆಲೆಯಲ್ಲಿ ಅದನ್ನು ವಿವರಿಸಿಕೊಳ್ಳುತ್ತಾರೆ. ಆದ್ದರಿಂದ ಅವರು ಅದನ್ನು ಮೂರು ಅಂಶಗಳಿಂದ ಪ್ರಧಾನವಾಗಿ ಗುರುತಿಸಿಕೊಂಡರು. ಅವುಗಳೆಂದರೆ ಒಂದು ವಿಭಜನೆ, ಎರಡು ಪ್ರತ್ಯೇಕತೆ, ಮೂರು ಶ್ರೇಣೀಕರಣ. ಭಾರತೀಯ ಸಮುದಾಯವನ್ನು ಕೆಲವು ನಿರ್ದಿಷ್ಟ ಹಿನ್ನಲೆಯಲ್ಲಿ ವಿವಾಹ, ಆಹಾರ ಕ್ರಮ, ಕಸುಬು ಇತ್ಯಾದಿಯಾಗಿ ವಿಭಜಿಸುವ ಪ್ರತ್ಯೇಕಿಸುವ ಹಾಗೂ ಒಂದರ ಕೆಳಗೆ ಒಂದರಂತೆ ಜೋಡಿಸುವ ಸಾಮಾಜಿಕ ರಚನೆಯಾಗಿ ಇದನ್ನು ಗುರುತಿಸಿದರು." (ಉಷಾ ಎಂ: 2005: ಪು. 17) ಇವು ಭಾರತೀಯ ಸಮಾಜದ ವಿಭಜನೆ ಅಸ್ಪಷ್ಟವಾದ

ಸಂಗತಿಯಾಗಿತ್ತು ಎಂಬುದನ್ನು ತೋರಿಸುತ್ತದೆ. ಆದರೆ ಮಹಿಳೆಯ ಸಂಬಂಧದಲ್ಲಿ ಲಿಂಗ ಆಧಾರಿತ ಶ್ರಮ ವಿಭಜನೆ ಬಗೆಗೆ ಪಾಶ್ಚಾತ್ಯರಿಗೆ ಒಂದು ಪರಿಚಿತವಾದ ತಿಳುವಳಿಕೆ ಇತ್ತು. ಏಕೆಂದರೆ ಪಿತೃಪ್ರಧಾನತೆಯು ಭಾರತಕ್ಕೆ ಸೀಮಿತಗೊಂಡದ್ದಾಗಿರಲಿಲ್ಲ, ಅದಕ್ಕೆ ಜಾಗತಿಕ ಗುಣವಿತ್ತು. ಜೊತೆಗೆ ಪಾಶ್ಚಾತ್ಯದಲ್ಲಿ ನಡೆಯುತ್ತಿದ್ದ ಮಹಿಳಾ ಚಳುವಳಿಗಳ ಪರಿಸರದಿಂದ ಬಂದಿದ್ದ ಬ್ರಿಟಿಷರು ಭಾರತದಲ್ಲಿ ಮಹಿಳೆಯರ ಸ್ಥಿತಿಯನ್ನು ಗ್ರಹಿಸಲು ಪ್ರಯತ್ನಿಸಿದರು. ಆಗ ಜಾತಿಪದ್ಧತಿಯು ಬಹುದೊಡ್ಡ ತೊಡಕಾಯಿತು. ಹಾಗಾಗಿ ಬ್ರಿಟಿಷರು ಜಾತಿ ಸಮಸ್ಯೆಯನ್ನು ಸಂಕುಚಿತಗೊಳಿಸಿ ಮಹಿಳಾ ಪ್ರಶ್ನೆಯನ್ನು ಮಹಿಳಾ ಸಮಸ್ಯೆಯಾಗಿ ಗ್ರಹಿಸಿಕೊಂಡರು. ಆದ್ದರಿಂದಲೇ ಬಾಲ್ಯವಿವಾಹ, ಸತಿಪದ್ದತಿ ವಿಶೇಷವಾಗಿ ಪ್ರಸ್ತುತ ಪಡೆದವು. ಈ ಮೂಲಕ ಅವರು ತಮ್ಮ ವಸಾಹತಿನ ಪ್ರಜೆಗಳನ್ನು ಆಳುವ ಸೂಕ್ತ ವಿಧಾನಗಳಾವುವು? ಎಂದು ಆಲೋಚಿಸುತ್ತಿದ್ದರು. ಆ ಸಂದರ್ಭದಲ್ಲಿ ತಮ್ಮಲ್ಲಿಯೇ ನಡೆಸುತ್ತಿದ್ದ ಚರ್ಚೆಗಳಲ್ಲಿ ಭಾರತೀಯರಲ್ಲಿ ಸ್ತ್ರೀ-ಪುರುಷ ನಡುವೆ ಆದರ್ಶ ಸಂಬಂಧಗಳನ್ನು ಸಾಧಿಸಬೇಕೆಂಬ ಮಾತು ಪ್ರಧಾನವಾಗುತ್ತಿತ್ತು. ಅಂದಿನ ಅತ್ಯಂತ ಪ್ರಭಾವಶಾಲಿ ಗ್ರಂಥವೆನಿಸಿದ ಬ್ರಿಟಿಷ್ ಇಂಡಿಯಾ ಚರಿತ್ರೆ (Hisitory of British India 1826) ಯನ್ನು ಬರೆದ ಜೇಮ್ಸ್‌ಮಿಲ್ "ಭಾರತೀಯರನ್ನು ಅನಾಗರಿಕರು ಎಂದು ದೃಢಪಡಿಸಲು ಪ್ರಯತ್ನಿಸುತ್ತಾನೆ. ಹಾಗಾಗಿ ಮಿಲ್ ಒಂದು ಸಮಾಜದ ಅಭಿವೃದ್ಧಿಯನ್ನು ಅಲ್ಲಿನ ಮಹಿಳೆಯರ ಸ್ಥಿತಿಗಳನ್ನು ಲಕ್ಷಿಸಿ ಗುರುತಿಸಬಹುದು ಎಂದು ಹೇಳಿದ. ಇದರ ಉದ್ದೇಶವೆಂದರೆ ಅನಾಗರಿಕ ಜನರು ಹೆಂಗಸರನ್ನು ಕೀಳಾಗಿ ಕಾಣುತ್ತಾರೆ. ನಾಗರಿಕರಾದರೆ ಅವರನ್ನು ಪೂಜಿಸುತ್ತಾರೆ. ಮುಂದುವರೆದ ಸಮಾಜಗಳನ್ನು ವರ್ಣಿಸುತ್ತಾ ಮಿಲ್ 'ದುರ್ಬಲ' ಲಿಂಗದವರ (ಹೆಂಗಸರ) ಪರಿಸ್ಥಿತಿ ದಿನದಿನಕ್ಕೆ ಉತ್ತಮಗೊಳ್ಳುತ್ತಾ ಕೊನೆಗೊಮ್ಮೆ ಅವರು ಪುರುಷರಿಗೆ ಸಮಾನರೇ ಎನಿಸುವಂತಾಗಿ ತಮ್ಮ ಇಚ್ಛೆ ಹಾಗೂ ಅನುಕೂಲಗಳಿಗೆ ತಕ್ಕ ಸ್ಥಾನಗಳನ್ನು ಗಳಿಸುವಂತಾಗುತ್ತಾರೆ ಎಂದು ಹೇಳುತ್ತಾನೆ." (ಜೇಮ್ಸಾಮಿಲ್, ಉದ್ಧೃತ: ಜೆರಾಲ್ಡಿನಾಪೋರ್ಬ್ಸ್: 2001; ಪು.20) ಹಾಗೆಯೇ ಇದನ್ನು ಹಿಂದು ಧರ್ಮದೊಂದಿಗೆ ತಳುಕು ಹಾಕುವ ಮನುಸ್ಮೃತಿಯ ಅನುವಾದಕರಾದ ಹಾಲ್‌ಹೆಡವ್ ಕೋಡ್ ಆಫ್ ಜೆಂಟೊ ಲಾಸ್ (Code of Gentto Laws) ಇತ್ಯಾದಿ. ಹಲವು ಧಾರ್ಮಿಕ ಕೃತಿಗಳನ್ನು ಓದಿದ್ದ ಮಿಲ್‌ರವರು "ಹಿಂದೂಗಳ ಹೆಂಗಸರ ಸ್ಥಿತಿ ತೀರಾ ಶೋಚನಿವಾದುದಾಗಿದೆ ಎಂದು ಹೇಳುತ್ತಾರೆ." (ಜೇಮ್ಸಾಮಿಲ್, ಉದ್ಧೃತ: ಜೆರಾಲ್ಡಿನಾಪೋರ್ಬ್ಸ್: 2001; ಪು.21) ಈ ಮೂಲಕ ಬ್ರಿಟಿಷ್‌ರು ಮಿಷನರಿಗಳ ತನ್ನ ಪ್ರಭುತ್ವ ಸ್ಥಾಪನೆಗೆ ತೊಡಗಿದರು. 1848ರಲ್ಲಿ ಇಂಡಿಯಾಕ್ಕೆ ಬಂದ ರೆವರೆಂಡ್ ಇ.ಸ್ಟೋರೋ "ಇಲ್ಲಿನ ಮಹಿಳೆಯರು ಹೀನಾಯ ಸ್ಥಿತಿಗತಿಗಳು ಇಂಡಿಯಾದಲ್ಲಿ ಒಗ್ಗಟ್ಟಿಲ್ಲದಿರುವುದೇ ಮುಖ್ಯ ಕಾರಣ ಎಂದು ಹೇಳಿದರು... ಇಸ್ರೇಲ್,

ರೋಮ್ ಮತ್ತು ಪಶ್ಚಿಮ ಯೂರೋಪುಗಳನ್ನು ಶಕ್ತಿ ರಾಷ್ಟ್ರಗಳೆಂದು ಪಟ್ಟಿ ಮಾಡಿ ಸ್ಟೋರೋ ಈ ರಾಷ್ಟ್ರಗಳು ತಮ್ಮ ಮಹಿಳೆಯರಿಗೆ ನೀಡಿರುವ ಉನ್ನತ ಸ್ಥಾನಮಾನಗಳಿಂದಾಗಿ ಅವು ನೈತಿಕ ಸ್ಥೈರ್ಯ ಮತ್ತು ಮೌಲ್ಯಗಳಿಸಿವೆ ಎಂದು ವಿವರಿಸುತ್ತಾನೆ." (ಅದೇ, ಪು, 21) ತಾವು ಮಿಲಿಟರಿ ಶಕ್ತಿಯನ್ನು ಬಳಸುವುದಕ್ಕೂ ಇಲ್ಲಿನ ಮಹಿಳೆಯರ ಹೀನಾಯ ಸ್ಥಿತಿಗತಿಗಳಿಗೂ ಸಂಬಂಧ ಕಲ್ಪಿಸಿದ ಬ್ರಿಟಿಷರು ಇಂಡಿಯಾದ ಮೇಲೆ ತಮ್ಮ ಪ್ರಭುತ್ವ ಹೇರಬೇಕಾದದ್ದು ತೀರಾ ಸಹಜ ಮತ್ತು ಅನಿವಾರ್ಯ ಎಂದು ತೀರ್ಮಾನಿಸಿದರು.

ಶತಮಾನದ ಮುಂದಿನ ದಿನಗಳಲ್ಲಿ ಬ್ರಿಟಿಷ್ ಆಡಳಿತವನ್ನು ಕಾಯ್ದೆ ಬದ್ಧಗೊಳಿಸುವ ನಿರಂತರ ಪ್ರಕ್ರಿಯೆ ಭಾಗವಾಗಿ ಸರ್ ರಾಬರ್ಟ್‌ರಿಸ್ಲೆಯು "ಇಂಡಿಯಾದ ಬುದ್ಧಿಜೀವಿಗಳಿಗೆ ಬೌದ್ಧಿಕ ಹಾಗೂ ರಾಜಕೀಯ ವಿಷಯಗಳಲ್ಲಿ ಆಸಕ್ತಿ ಇದೆಯೇ ಹೊರತು ಸಮಾಜ ಸುಧಾರಣೆಯ ಬಗ್ಗೆ ಲಕ್ಷ್ಯವೇ ಇಲ್ಲ ಎಂಬ ಪ್ರಸಾರಕ್ಕೆ ತೊಡಗಿದರು." (ಅದೇ, ಪು,20) ಜೊತೆಗೆ ಬ್ರಿಟಿಷರು ಆಡಳಿತ ಆರಂಭಿಸಿದ ಮೇಲೆ ಕಂಪನಿಯ ಕೆಲಸಗಾರರ ಕೊರತೆಯನ್ನು ನೀಗಿಸಲು ಭಾರತೀಯ ಯುವಕರಿಗೆ ಇಂಗ್ಲಿಷ್ ಶಿಕ್ಷಣ ನೀಡಲು ಆರಂಭಿಸಿದರು. ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯ ವಿದ್ಯಾವಂತ ಯುವಕರಿಗೆ. ಅವರ ದೇಹ ಬುದ್ಧಿ, ಮನಸ್ಸುಗಳು ಅಸ್ತಿತ್ವದ ಹುಡಕಾಟಕ್ಕೆ ಹಚ್ಚಿದವು. ಈ ಹಿನ್ನಲೆಯಲ್ಲಿ ಪಾರ್ಥಚಟರ್ಜಿ ಹೀಗೆ ಹೇಳುತ್ತಾರೆ. "ಭಾರತೀಯ ವಿಜ್ಞಾನ, ತಂತ್ರಜ್ಞಾನ, ಕ್ರಾಂತಿಕಾರಿ ಅರ್ಥಶಾಸ್ತ್ರ, ಪಾಶ್ಚಾತ್ಯ ರೀತಿಯ ರಾಜಕೀಯ ರಚನೆಗಳನ್ನು ಎಲ್ಲಾರು ಬೆನ್ನು ಹತ್ತಿದರು ಎಂದಿದ್ದಾರೆ." (ಉ:ಅದೇ, ಪು,16)

ಹೀಗೆ ಬ್ರಿಟಿಷ್ ಶಿಕ್ಷಣದಿಂದ ಬಂದ ಆದರ್ಶಗಳು, ಕಲ್ಪನೆಗಳು ಭಾರತದ ಲಿಂಗವ್ಯವಸ್ಥೆಯ ಆಯಾಮದ ಸಂಬಂಧಗಳನ್ನು ಪುನರ್ ಪರಿಶೀಲಿಸುವಲ್ಲಿ ಆಸಕ್ತವಾದವು. ಹಾಗಾಗಿಯೇ 19ನೇ ಶತಮಾನ ಕೊನೆಯ ದಶಕದ ವೇಳೆಗೆ ಸುಧಾರಣಾವಾದಿ ಆದರ್ಶ ಸ್ಪಷ್ಟವಾಗಿ ಗೋಚರವಾಯಿತು. "1820ರ ಸುಮಾರಿಗೆ ರಾಜಾರಾಮ್ ಮೋಹನರಾಯ್ ಸತಿನಿಷೇಧ ಹೋರಾಟವನ್ನು ಕೈಗೆತ್ತಿಕೊಂಡರು, ಈಶ್ವರಚಂದ್ರ ವಿದ್ಯಾಸಾಗರ ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಹೀಗೆ ಈ ಚಟುವಟಿಕೆಗಳು ರಾಷ್ಟ್ರ ವ್ಯಾಪ್ತಿಯಾಗಿ ಆವರಿಸತೊಡಗಿದವು." (ಅದೇ, ಪು,27-33) ಈ ಎಲ್ಲ ಚಟುವಟಿಕೆಗಳನ್ನು "ಮಹಿಳೆಯರನ್ನು ಆಧುನೀಕರಿಸುವ ಪ್ರಯತ್ನಗಳು ಎನ್ನುತ್ತಾರೆ." (ಅದೇ, ಪು, 19) ನಂತರ ಮಹಿಳೆಯರ ಸ್ಥಾನಮಾನ ಸುಧಾರಣೆಗಾಗಿ ಮಹಿಳೆಯರ ನೇತೃತ್ವದಲ್ಲಿಯೇ ಹಲವಾರು ಸಂಘಟನೆಗಳು ಅಖಿಲಭಾರತ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಇವು ರಾಷ್ಟ್ರೀಯ ಚಳುವಳಿಯೊಂದಿಗೆ ತಳುಕು ಹಾಕಿಕೊಂಡವು. ಆದ್ದರಿಂದ ಮತದಾನ ಹಕ್ಕಿನಂತಹ ರಾಜಕೀಯ ಪ್ರಶ್ನೆಗಳೊಂದಿಗೆ, ರಾಷ್ಟ್ರೀಯ ಕಾಂಗ್ರೆಸ್ಸಿನ ಚಟುವಟಿಕೆಗಳಲ್ಲಿ ಕೂಡ ಮಹಿಳೆ

ತೊಡಗಿಸಿಕೊಂಡಿದ್ದಳು. ಈ ಎಲ್ಲದರ ಫಲವಾಗಿ ಮಹಿಳಾ ಸಂಬಂಧಿ ಕಾನೂನುಗಳು ಕೆಲವು ಜಾರಿಗೊಂಡಿದ್ದವು. ಉದಾ: ಸತಿನಿಷೇಧ ಕಾನೂನು, ವಿಧವಾ ಪುನರ್ ವಿವಾಹವನ್ನು ಹೆಸರಿಸಬಹುದು.

ಅಷ್ಟೊತ್ತಿಗೆ ಬ್ರಿಟಿಷ್ ವಿರುದ್ಧ ರಾಷ್ಟ್ರೀಯ ಚಳುವಳಿ ತೀವ್ರಗೊಂಡಿತು. ಅದರಲ್ಲಿ ಅಸ್ಪೃಶ್ಯತೆ ನಿವಾರಣೆ, ಮಹಿಳಾ ಸುಧಾರಣೆ ಕುರಿತು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಆಗ ಪ್ರಸ್ತುತಗೊಳ್ಳುತ್ತಿದ್ದ ಮಹಿಳೆ ಮತ್ತು ಜಾತಿ ವಿಷಯಗಳ ಆದ್ಯತಾ ಪ್ರಶ್ನೆಗಳನ್ನು ಎರಡು ನೆಲೆಯಲ್ಲಿ ಗ್ರಹಿಸಬಹುದು. ಒಂದು ಈ ವರ್ಗದಲ್ಲಿ ಬರುವ ಗಾಂಧೀಜಿ ಪಾಶ್ಚಾತ್ಯರಿಂದ ಭಾರತವನ್ನು ಮುಕ್ತಿಗೊಳಿಸುವುದಕ್ಕೆ ಮೊದಲ ಆದ್ಯತೆ ನೀಡಿದರು. ನಂತರದಲ್ಲಿ ಮಹಿಳೆ, ಜಾತಿ, ಪ್ರಶ್ನೆಗಳನ್ನು ಸ್ವೀಕರಿಸಿದರು. ಎರಡನೆಯ ವರ್ಗದಲ್ಲಿ ಬರುವ ಅಂಬೇಡ್ಕರ್ ಭಾರತೀಯ ಸಮಾಜದ ಅಸಮಾನತೆಗೆ ಕಾರಣವಾಗಿರುವ ದಲಿತರ ಪ್ರಶ್ನೆಗಳಿಗೆ ಪ್ರಥಮ ಆದ್ಯತೆ ನೀಡಿದರು. ಈ ಮೂಲಕ ಸ್ವಾತಂತ್ರ್ಯದ ಚಳುವಳಿಯನ್ನು ಸ್ವೀಕರಿಸಿದರು.

ಇದಿಷ್ಟು ಅಂಬೇಡ್ಕರ್ ಪೂರ್ವದ ಸಾಮಾಜಿಕ ಪರಿಸ್ಥಿತಿಯಾಗಿದೆ. ಇನ್ನು ಮುಂದೆ ಅಂಬೇಡ್ಕರ ಅವರ ಚಿಂತನಾಕ್ರಮ ರೂಪಿಸಿದ ನೆಲೆಗಳನ್ನು ಮತ್ತು ಆತನ ಸಮಕಾಲೀನ ಚಿಂತಕರನ್ನು ಪರಿಶೀಲಿಸಲಾಗುವುದು.

**೨.೩. ಅಂಬೇಡ್ಕರ್ ; ಸಮಕಾಲೀನ ಚಿಂತಕರು**

ಆಧುನಿಕ ಭಾರತದ ಪ್ರಮುಖ ಚಿಂತಕರಲ್ಲಿ ಅಂಬೇಡ್ಕರ್ ಒಬ್ಬರು. ಭಾರತದ ಜನರ ಸಾಮಾಜಿಕ, ರಾಜಕೀಯ, ಧಾರ್ಮಿಕ ಬದುಕಿನ ಮೇಲೆ ಅವರ ಪ್ರಭಾವ ಕುರಿತು "Ambedkar's image is grow day by day into magnitude prophetic personality" (Kancha Illaiah; 2005; April-14) ಎಂದು ಕೌಂಚಐಲಯ್ಯ ಅವರು ಅಂಬೇಡ್ಕರ್ ಚಿಂತನೆಗಳ ಪ್ರಸ್ತುತತೆಯನ್ನು ಒತ್ತಿ ಹೇಳುತ್ತಾರೆ. "It would have been a different India without him and in all probability a much more inequalitable and un justo on" (Valerian Rod Rigues; 2005, p -1) ಎಂದು ಅಂಬೇಡ್ಕರ್ ಚಿಂತನೆ ಮಹತ್ವವನ್ನು ಡಾ॥ ವೆಲರಿಯನ್ ರೌಡ್ರಿಗಾಸ್ ಹೇಳುತ್ತಾರೆ. ಅದ್ದರಿಂದ ಅಂಬೇಡ್ಕರ್ ಜೀವನದಲ್ಲಿ ಸಿಗುವ ನಿದರ್ಶನಗಳಿಂದ ಅಂದರೆ ಅವರ ಅಧ್ಯಯನ, ಒಡನಾಟದಿಂದಲೇ ಆಲೋಚನೆಗಳನ್ನೊಳಗೊಂಡ ಸಂಗತಿಗಳನ್ನು ಪ್ರತಿಬಿಂಬಿಸುತ್ತವೆ. ಅಲ್ಲದೆ, ಅವುಗಳ ಹಿಂದಿನ ಪ್ರಭಾವ, ಪ್ರೇರಣೆ, ಒತ್ತಾಸೆಗಳು ಸಹ ಗೊತ್ತಾಗುತ್ತವೆ. ಇದರಿಂದ ಭಾರತದಲ್ಲಿ ಜಾತಿಪದ್ಧತಿ, ಮಹಿಳೆ ಪರಿಸ್ಥಿತಿ ನಿರೂಪಿತಗೊಳ್ಳತ್ತವೆ.

ಅಂಬೇಡ್ಕರ್ ಜೀವನ ಮತ್ತು ಮಹಿಳೆಯರ ಕುರಿತ ಅವರ ಚಟುವಟಿಕೆಗಳ ಸಂಕ್ಷಿಪ್ತನೋಟ ಇಂತಿದೆ. ಅಂಬೇಡ್ಕರ್ 14, ಏಪ್ರಿಲ್ 1891 ರಂದು ಮಧ್ಯಪ್ರದೇಶದ ಮೌನ್ಹದಲ್ಲಿ

ಜನಿಸಿದರು. ಆದರೆ ಅವರ ಮೂಲಸ್ಥಳ ಮಹಾರಾಷ್ಟ್ರದ ರತ್ನಾಗಿರಿ ಜಿಲ್ಲೆಯ ಅಂಬಾವಾಡೆ. ತಂದೆ ರಾಮ್‌ಜಿ ಸಕ್ಪಾಲ್, ತಾಯಿ ಭೀಮಾಬಾಯಿ. 'ಮಹರ್' ಎಂಬ ಅಸ್ಪೃಶ್ಯ ಜನಾಂಗಕ್ಕೆ ಸೇರಿದ್ದರು. ರಾಮಾಜಿ ಸಕ್ಪಾಲ್ ಬ್ರಿಟಿಷ್‌ರ ಸೇನೆಯಲ್ಲಿ ಸುಬೇದಾರ್ ಮೇಜರ್ ಆಗಿ ಮತ್ತು ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಇವರ ಶಿಸ್ತುಬದ್ಧ ಜೀವನ ಮಗನ ಮೇಲೆ ಗಾಢವಾದ ಪ್ರಭಾವ ಬೀರಿತ್ತು. ತಾಯಿ ಭೀಮಾಬಾಯಿಯ ಕೌಟುಂಬಿಕ ಹಿನ್ನಲೆಯೂ ಸಹ ಸಾಕಷ್ಟು ಉತ್ತಮವಾಗಿತ್ತು. ರಾಮ್‌ಜಿ ಸಕ್ಪಾಲ್ ಮತ್ತು ಭೀಮಾಬಾಯಿ ಇಬ್ಬರದು ಕಬೀರಪಂಥ, ಪ್ರತಿದಿನ ಮುಂಜಾನೆ ಮತ್ತು ಸಂಜೆ 6 ರಿಂದ 7ರ ವರೆಗೆ ಮಕ್ಕಳೊಂದಿಗೆ ಕುಳಿತು ಕಬೀರನ ದೋಹೆ, ತುಕಾರಾಮರ ಮುಕ್ತಾಹಾರ, ಅಭಂಗ, ಚೋಕ ಮೇಳರ ಅಭಂಗ ಮತ್ತು ಭಗವತ್‌ಗೀತದ ಶ್ಲೋಕಗಳನ್ನು ಹಾಡುತ್ತಿದ್ದರು. ಮತ್ತು ಮಕ್ಕಳಿಗೆ ಹಾಡಿಸುತ್ತಿದ್ದರು. ಈ ದಂಪತಿಗಳಿಗೆ ಹದಿನಾಲ್ಕು ಜನ ಮಕ್ಕಳು ಹುಟ್ಟಿದರೂ ಉಳಿದಿದ್ದು ಐದು ಜನ ಮಾತ್ರ, ಇಬ್ಬರು ಗಂಡು ಮಕ್ಕಳು, ಇಬ್ಬರು ಹೆಣ್ಣುಮಕ್ಕಳು. ನಂತರ ಜನಸಿದ ಕೊನೆಯ ಮಗುವೇ ಅಂಬೇಡ್ಕರ್. ಅಂಬೇಡ್ಕರ್ ಹುಟ್ಟಿದ ಕೆಲವು ವರ್ಷಗಳಲ್ಲೇ ರಾಮ್‌ಜಿಗೆ ನಿವೃತ್ತಿಯಾಗಿತ್ತು. ಆಗ ಭೀಮನಿಗೆ ಐದು ವರ್ಷ. ಬದುಕಿನುದ್ದಕ್ಕೂ ಸಂಸಾರಕ್ಕೆ ಜೀವ ಮುಡುಪಾಗಿಟ್ಟ ಭೀಮಾಬಾಯಿ ಸತಾರಾಗೆ ಬಂದ ಸ್ವಲ್ಪ ದಿನಗಳಲ್ಲೇ ನಿಧನಳಾದಳು. ಈ ಘಟನೆ ರಾಮ್‌ಜಿ ಕುಟುಂಬದ ಮೇಲೆರಗಿದ ಒಂದು ದೊಡ್ಡ ಆಘಾತ. ಆಗ ರಾಮ್‌ಜೀಯ ಸೋದರಿ ಮೀರಾಬಾಯಿ ಕುಟುಂಬದ ಹೊಣೆಯನ್ನು ಹೊತ್ತು ತಬ್ಬಲಿ ಮಕ್ಕಳಿಗೆ ತಾಯಾದಳು. ಭೀಮನು ಸಾತಾರದಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿ, ಪ್ರೌಢ ಶಿಕ್ಷಣಕ್ಕೆ ಪ್ರವೇಶ ಪಡೆದಾಗ ಅಸ್ಪೃಶ್ಯತೆಯ ಅನಿಷ್ಟ ಅನುಭವಗಳನ್ನುಣ್ಣಬೇಕಾಯಿತು. ಅದರಲ್ಲಿ ಒಂದನೆಯ ಘಟನೆ ಅವನ ಕೂದಲು ಕತ್ತರಿಸಲು ಹಡಪಿಗ ಸಿಗದಂತಾಗಿ ಅವನ ಅಕ್ಕನೇ ಆ ಕೆಲಸ ಮಾಡಬೇಕಾಯಿತು. ಇನ್ನೊಂದು ಘಟನೆ ಸಾತಾರ ಜಿಲ್ಲೆಯೊಳಗಿನ ಗೋರಗಾಂವದಲ್ಲಿ ಬರಗಾಲ ಸ್ಥಿತಿಯ ಕಾಮಗಾರಿಯಲ್ಲಿ ರಾಮ್‌ಜಿ ಸುಬೇದಾರರು ತೊಡಗಿದ್ದಾಗ ತಂದೆಯನ್ನು ನೋಡಲು ಭೀಮ ತನ್ನ ಅಣ್ಣ ಮತ್ತು ಅಕ್ಕರೊಡನೆ ರೈಲಿನಲ್ಲಿ ಗೋರಗಾಂವಕ್ಕೆ ಪ್ರಯಾಣ ಮಾಡಿದರು. ಆ ದಿನ ಇವರು ಅಸ್ಪೃಶ್ಯರೆಂಬ ಕಾರಣದಿಂದ ಯಾರೂ ತಮ್ಮ ಚಕ್ಕಡಿಯಲ್ಲಿ ಕುಳ್ಳಿರಿಸಿ ಸ್ಟೇಶನ್ನಿನಿಂದ ಊರಿಗೆ ಕರೆದೊಯ್ಯಲು ಒಪ್ಪಲಿಲ್ಲ. ಕೊನೆಗೊಂದು ಚಕ್ಕಡಿಯೇನೋ ಸಿಕ್ಕಿತು. ಆದರೆ ಭೀಮನೇ ಸ್ವತಃ ಆ ಚಕ್ಕಡಿಯನ್ನು ನಡೆಸಬೇಕಾಯಿತು. ಆಗ ಇವರಿಗೆ ಸುಮಾರು ಒಂದೂವರೆ ದಿವಸ ಕುಡಿಯಲು ನೀರು ಸಹ ಸಿಗಲಿಲ್ಲ. ಅವರು ಅಸ್ಪೃಶ್ಯರೆಂದು ಬಾವಿಯೊಳಗೆ ಹೋಗಲು ಬಿಡಲಿಲ್ಲ. ಮರುದಿನ ಮಧ್ಯಾಹ್ನ ಅರೇ ಜೀವ ಸ್ಥಿತಿಯಲ್ಲಿ ಭೀಮ ಮತ್ತು ಆತನ ಒಡಹುಟ್ಟಿದವರು ಗೋರಗಾಂವ ತಲುಪಿದರು. ಕೆಲವು ದಿನಗಳ ನಂತರ ಇಂಥದೇ

ಇನ್ನೊಂದು ಘಟನೆ ಜರುಗಿತು. ಶಾಲೆಯಿಂದ ಬರುತ್ತಿದ್ದಾಗ, ಭೀಮನಿಗೆ ಬಹಳ ಬಾಯಾರಿಕೆಯಾಯಿತು. ಬಾಯಾರಿಕೆ ತಡೆಯಲಾರದೆ ಸಾರ್ವಜನಿಕ ನಲ್ಲಿಯೊಂದರಿಂದ ನೀರು ಕುಡಿದು ಬಿಟ್ಟನು. ಅದನ್ನು ತಿಳಿದ ಸವರ್ಣೀಯರು ಭೀಮನನ್ನು ಚೆನ್ನಾಗಿ ಥಳಿಸಿದರು. ಬಾಲಕ ಭೀಮನಿಗೆ ಈ ಘಟನೆಗಳು ಅಧಿಕ ಪರಿಣಾಮ ಬೀರಿದವು. ಇವು ಅಂದಿನ ಸಮಾಜದಲ್ಲಿರುವ ಜಾತಿಪದ್ಧತಿಯನ್ನು ತೋರಿಸುತ್ತವೆ.

ನಂತರ ಅಂಬೇಡ್ಕರ್ ಮುಂಬೈನಲ್ಲಿ ಬಹಳ ಪ್ರಸಿದ್ಧವಾಗಿದ್ದ ಎಲ್ಫಿನಾ ಸ್ಟೋನ್ ಪ್ರೌಢಶಾಲೆಯಲ್ಲಿ ಓದುತ್ತಿದ್ದರು. ಆಗ ಅವರು ಲೋಹಾರ್ ವಕೀಲನ ದಬಕ್ ಚಾಳಾ ಪ್ರದೇಶದಲ್ಲಿ ವಾಸವಾಗಿದ್ದರು. ಇದು ಕಾರ್ಮಿಕರು ವಾಸವಾಗಿರುವ ಪ್ರದೇಶವಾಗಿತ್ತು. ಆಗ ಇವರ ಕುಟುಂಬ ಪರಿಸ್ಥಿತಿಯನ್ನು ಅವಲೋಕಿಸಿದ ಅಂಬೇಡ್ಕರ್ ಬಡಕುಟುಂಬದ ಮಹಿಳೆಯರ ಪರಿಸ್ಥಿತಿಯನ್ನು ಅರಿತರು.

ನಂತರ 1907 ರಲ್ಲಿ ಅಂಬೇಡ್ಕರ್ ಮೆಟ್ರಿಕ್ ಪರೀಕ್ಷೆಯನ್ನು ಪಾಸು ಮಾಡಿದರಲ್ಲದೆ ಈ ಅವಧಿಗಾಗಲೇ ಅಂಬೇಡ್ಕರ್‌ಗೆ ಒಂಭತ್ತು ವರ್ಷದ ರಮಾಬಾಯಿಯ ಜೊತೆಗೆ ಮದುವೆ ಆಯಿತು. ಇದು ಒಂದು ಬಾಲ್ಯವಿವಾಹವಾಗಿತ್ತು. ನಂತರ ಬಿ.ಎ. ಮುಗಿಸಿ ರಾಜರ ವಿದ್ಯಾರ್ಥಿ ವೇತನದ ಸಹಾಯದಿಂದ ಉನ್ನತ ಅಧ್ಯಯನಕ್ಕಾಗಿ ವಿದೇಶಕ್ಕೆ ತೆರಳಿದರು.

ಆಗ ಅವರು ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಮಾಜಶಾಸ್ತ್ರ, ಮಾನವಶಾಸ್ತ್ರ, ಗಣಿತ ವಿಷಯಗಳನ್ನು ಅಧ್ಯಯನಕ್ಕೆ ಹೆಚ್ಚು ಒತ್ತು ನೀಡಿದರು. ಆಗ ಕೊಲಂಬಿಯ ವಿಶ್ವವಿದ್ಯಾಲಯದಲ್ಲಿ ಜಾನಾಡೂಯಿ, ಜೇಮಾಶಾಟಾಮಾ, ಎಡ್ವಿನಾ ಸೆಲಿಗ್ಮನಾ ಇತ್ಯಾದಿ ವಿದ್ವಾಂಸರ ಒಂದು ದೊಡ್ಡ ಬೌದ್ಧಿಕ ವಲಯವೇ ಇತ್ತು. ಅಂಬೇಡ್ಕರ್ ಮೇಲೆ ಈ ಎಲ್ಲರ ಪ್ರಭಾವ ಸಾಕಷ್ಟು ಆಯಿತು.

ಆಗ ಅಂಬೇಡ್ಕರ್ ತಮ್ಮ ತಂದೆಯ ಮಿತ್ರರಿಗೊಂದು ಪತ್ರ ಬರೆದರು. ಅದರಲ್ಲಿ ಅವರು ಈ ರೀತಿಯಾಗಿ ಹೇಳುತ್ತಾರೆ "ದುರ್ಬಲ ವರ್ಗದ ಯುವಜನರಿಗೆ ಹೆಚ್ಚಿನ ವಿದ್ಯಾಭ್ಯಾಸ ಮಾಡುವ ಅವಕಾಶಗಳು ಹೆಚ್ಚಾಗಿ ಸಿಗಬೇಕು. ದುರ್ಬಲ ಸಮುದಾಯಗಳನ್ನು ಕಾಡುತ್ತಿರುವ ಸಮಸ್ಯೆಗಳೇನು ಎಂಬ ಬಗ್ಗೆ ಬರೆಯುವ ಅಂಬೇಡ್ಕರ್ 'ಜನ್ಮ ಕೊಡುವುದಷ್ಟೇ ತಂದೆತಾಯಿಗಳ ಕೆಲಸ, ಭವಿಷ್ಯವನ್ನು ರೂಪಿಸುವುದಲ್ಲ' ಎಂಬ ಮಾತನ್ನು ಇನ್ನು ಮುಂದೆ ನಮ್ಮ ತಂದೆ ತಾಯಿಗಳು ಬಿಟ್ಟು ಹುಡುಗರಿಗೆ ವಿದ್ಯೆ ಕೊಡಿಸುವಂತೆ ಹುಡುಗಿಯರಿಗೂ ವಿದ್ಯೆಯನ್ನು ಕೊಡಿಸಬೇಕು' ಎಂದು ಬರೆದರು 'ನಿಮಗೆ ಗೊತ್ತಿರುವ ದುರ್ಬಲ ವರ್ಗಗಳ ಹುಡುಗ ಮತ್ತು ಹುಡಿಗಿಯರಿಗೆ ಓದುವ ಅವಕಾಶಗಳನ್ನು ದಯವಿಟ್ಟು ಒದಗಿಸಿ' ಎಂದು ಕೋರುತ್ತಾರೆ."
(K.Dhananjay; ಉದ್ಧೃತ: ವಿದ್ಯಾಸಾಗರ ಐ.ಎಸ್: 2006; ಪು-107)

ನಂತರ ಅವರು "Administration and Finance of East India Company" ಎಂಬ ಪ್ರಬಂಧ ಮಂಡಿಸಿ ಎಂ.ಎ. ಪದವಿ ಪಡೆದರು. ಹಾಗೆಯೇ "National Divided; A Historical and Analytical Study" ಎಂಬ ಮಹಾಪ್ರಬಂಧ ಮಂಡಿಸಿ ಡಾಕ್ಟರೇಟ್ ಪದವಿ ಪಡೆದರು.

ಆಗ ಜಾನ್‌ಡ್ಯೂಯಿಯವರು ಸೇವೆಯ ಸಿದ್ಧಾಂತದಲ್ಲಿ "ಮಾನವೀಯತೆ ಎದುರಿಸುತ್ತಿರುವ ಸವಾಲುಗಳ ಬಗ್ಗೆ ಮಾತನಾಡುತ್ತಿರುವ ವಿಮರ್ಶಾತ್ಮಕ ವಿಶ್ಲೇಷಣೆ ಅಂಬೇಡ್ಕರ್‌ಗೆ ತುಂಬಾ ಹಿಡಿಸಿತು. ಈ ಮಾದರಿಯನ್ನು ತೆಗೆದುಕೊಂಡ ಅಂಬೇಡ್ಕರ್ ಭಾರತದ ಪ್ರಾಚೀನ ತತ್ವಶಾಸ್ತ್ರ ಗ್ರಂಥಗಳಾದ ಬ್ರಾಹ್ಮಣಕ ಉಪನಿಷತ್ತುಗಳನ್ನು ವಿಮರ್ಶಿಸಿದರು ಈ ಹಿನ್ನಲೆಯಲ್ಲಿ ಅಂಬೇಡ್ಕರ್ ಜಾನ್‌ಡ್ಯೂಯಿ ಬಗ್ಗೆ 'ತನ್ನ ಜಾತಿ ಸಂಸ್ಥೆಯ ಉಚ್ಚಾಟನೆ' ಎಂಬ ಲೇಖನದಲ್ಲಿ ಹೀಗೆ ಹೇಳುತ್ತಾರೆ " ನನ್ನ ಜಾನ್‌ಡ್ಯೂಯಿ ಇವರಿಂದ ನಾನು ಬಹಳ ಕಲಿತಿದ್ದೇನೆ" (ಡಾ.ಬಾ.ಅಂ.ಬ.ಭಾ, ಸ-1, ಪು,96) ಎಂದಿದ್ದಾರೆ. ಈ ಲೇಖನವನ್ನು ಆಗ ಅಂಬೇಡ್ಕರ್ ಮಾನವ ಶಾಸ್ತ್ರ ವಿಚಾರ ಸಂಕಿರಣದಲ್ಲಿ "Castes in India; Their mechanism gensis and development" ಎಂಬ ಶೀರ್ಷಿಕೆಯಲ್ಲಿ ಮಂಡಿಸಿದರು. ಇದು ನಂತರ 'ಭಾರತದಲ್ಲಿ ಜಾತಿಗಳು' ಎಂಬ ಹೆಸರಿನಲ್ಲಿ ಪುಸ್ತಕ ರೂಪದ ಒಂದು ಆಕೃತಿ ಪಡೆಯಿತು. ಈ ಅಧ್ಯಯನದಲ್ಲಿ ಅಂಬೇಡ್ಕರ್ ಭಾರತೀಯ ವಿವಾಹ ಪ್ರಕಾರಗಳಿಗೆ ಹೊಸದೊಂದು ವಿವಾಹ ಪ್ರಕಾರವನ್ನು ಸೇರಿಸುತ್ತಾರೆ. ಅಂದರೆ ಸ್ವಜಾತಿ ವಿವಾಹದ ಮೂಲಕವೇ ಮಹಿಳೆಯ ಲೈಂಗಿಕ ಹಕ್ಕುಗಳನ್ನು ಜಾತಿಗಳಿಗೆ ವಹಿಸಿಕೊಡಲಾಯಿತು ಎನ್ನುವುದನ್ನು ಪತ್ತೆ ಹಚ್ಚುತ್ತಾರೆ. ಅಲ್ಲದೆ ರಾಷ್ಟ್ರೀಯ ಚಳುವಳಿ ಸಂದರ್ಭದಲ್ಲಿ ಚರ್ಚೆಗೊಳ್ಳುತ್ತಿದ್ದ ಮಹಿಳೆಯ ವಿವಾಹ ಸಂಬಂಧಿ ಸಮಸ್ಯೆಗಳಿಗೆ ಮಾನವಶಾಸ್ತ್ರದ ಅಧ್ಯಯನ ವಿಧಾನ ಬಳಸಿ ಹೊಸದೊಂದು ದೃಷ್ಟಿಕೋನ ನೀಡುತ್ತಾರೆ. ಇದು ಈ ಅಧ್ಯಯನಕ್ಕೆ ಹೆಚ್ಚು ಪ್ರಸ್ತುತವಾಗುತ್ತದೆ.

ನಂತರ ಅಂಬೇಡ್ಕರ್ ಅಸ್ಪೃಶ್ಯ ಸಮುದಾಯದ ಕಾರಣ ಮತ್ತು ಪರಿಣಾಮ ಕುರಿತು ಅನೇಕ ಹಂತಗಳಲ್ಲಿ ಅಧ್ಯಯನ ಕೈಗೊಂಡರಲ್ಲದೆ, ಅದರ ವಿರುದ್ಧ ಅನೇಕ ಹೋರಾಟಗಳನ್ನು ರೂಪಿಸಿದರು. ಅದರಲ್ಲಿ ಚಾಡರ್‌ಕೆರೆ ನೀರು ಮುಟ್ಟುವುದು, ಮಹಾಡ್ ಸತ್ಯಾಗ್ರಹ, ಅಸ್ಪೃಶ್ಯರ ನಾಗಪುರ ಸಮಾವೇಶ, ನಾಸಿಕ್ ಕಾಳಾರಾಮ ದೇವಾಲಯ ಪ್ರವೇಶ, ಇತ್ಯಾದಿಗಳು. ಮಹಿಳೆಯ ನೆಲೆಯಿಂದ ಗಮನಿಸಲೇಬೇಕಾದ ಸಂಗತಿಗಳನ್ನು ಪರಿಶೀಲಿಸುವುದಾದರೆ "1927ರಲ್ಲಿ ಅಸ್ಪೃಶ್ಯರ ಮತ್ತು ಮಹಿಳೆಯರ ಈ ಸ್ಥಿತಿಗೆ ಮನಸ್ಮೃತಿ ಕಾರಣ" ಎಂದುಕೊಂಡ ಅಂಬೇಡ್ಕರ್ ಮನಸ್ಮೃತಿಯನ್ನು ಬಹಿರಂಗವಾಗಿಯೇ ಸುಟ್ಟರು. ಅವರ ಪ್ರಕಾರ "ಉಚ್ಚಜಾತಿಗಳಲ್ಲಿ ಧರ್ಮವು ಮಹಿಳೆಯ ಶೋಷಣೆಗೆ ಅಧಿಕೃತ ಸಮ್ಮತಿ ನೀಡಿತ್ತು. ಸ್ತ್ರೀಯು

ಪುರುಷರಿಗೆ ಗುಲಾಮರನ್ನಾಗಿ ಮಾಡಿತ್ತು, ಆಕೆಯ ಸಾಮಾಜಿಕ ವಿಮೋಚನೆಗೆ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ವಾತಂತ್ರ್ಯದ ಸಂಪಾದನೆಗೆ ಆಕೆಯ ಮೇಲೆ ಇನ್ನಿಲ್ಲದಷ್ಟು ನಿಯಂತ್ರಣಗಳನ್ನು ಹೇರಿದ್ದ 'ಕ್ರೂರ ಪ್ರಣಾಳಿಕೆ'ಯೇ ಮನುಸ್ಮೃತಿ" (Alttekar A.S; ಉದೃತ: ಅರವಿಂದ ಮಾಲಗತ್ತಿ: 1991; ಪು–146) ಎನ್ನುತ್ತಾರೆ.

ನಂತರ 1936 ರಲ್ಲಿ ಶೋಷಣೆಗೊಳಪಟ್ಟ ದೇವದಾಸಿ, ಜೋಗತಿ, ಪತ್ರಿಜೆ ಆರಾಧನೆ ಮುಂತಾದ ವರ್ಗಗಳ ಮಹಿಳೆಯರ ಸಮಾವೇಶವು ಮುಂಬಯಿಯ ದಾಮೋದರ್ ಧಾಕರ್ಸಿ ಅಂಗಣದಲ್ಲಿ ನಡೆಯಿತು. ಆ ಸಂದರ್ಭದ ಅಂಬೇಡ್ಕರ್ ಮಾತುಗಳು ಮಹತ್ವವಾದುದು. "ನಮ್ಮೊಂದಿಗೆ ನೀವು ನಿಮ್ಮ ಧರ್ಮವನ್ನು ಬದಲಾಯಿಸಿಕೊಳ್ಳತ್ತಿರೋ, ಇಲ್ಲವೋ ಎಂಬ ಅಂಶ ನನಗೆ ಮುಖ್ಯವಲ್ಲ. ಆದರೆ ನೀವೂ ನಮ್ಮೊಂದಿಗೆ ಬಾಳಬೇಕಾದರೆ ನಿಮ್ಮ ಅವಮರ್ಯಾದೆಯ ಜೀವನವನ್ನು ಬಿಟ್ಟುಬಿಡಬೇಕು. ಪಾಶ್ಚಾತ್ಯಪದ್ಧತಿಗೆ ಎಳೆಯುವಂತಹ ಯಾವುದೇ ಪರಿಸರ ವಿಲ್ಲದೆ ನೀವು ಇತರ ವರ್ಗದ ಮಹಿಳೆಯರಂತೆ ವಿವಾಹವಾಗಿ ಗೃಹಕೃತ್ಯಗಳಲ್ಲಿ ತೊಡಗಬೇಕು ಎಂದು ನಾನು ನಿಮ್ಮನ್ನು ಒತ್ತಾಯಿಸುತ್ತೇನೆ... ಇದು ಮಹಿಳೆಯರ ಸಂಘಟನೆಯಿಂದ ಸಾಧ್ಯ. ಈ ಸಂಘಟನೆಯ ಮೂಲಕ ಹೋರಾಟ ನಡೆಸಿ ರಾಷ್ಟ್ರವನ್ನು ಅಭಿವೃದ್ಧಿಗೊಳಿಸಬಹುದು." (ಅದೇ, ಪು, 146) ಎನ್ನುವ ಅಭಿಪ್ರಾಯ ಹೊಂದಿದ್ದರು.

ಜುಲೈ 1942 ರಲ್ಲಿ ಅಖಿಲ ಭಾರತ ಪರಿಶಿಷ್ಟ ಜಾತಿಯ ಫೆಡರೇಷನ್‌ದ ಮಹಿಳಾ ಸಮ್ಮೇಳನದಲ್ಲಿ ಅಂಬೇಡ್ಕರ್ ಮಹಿಳೆ ಸಮಸ್ಯೆ ಮತ್ತು ಪಾತ್ರ ಕುರಿತು ಹೀಗೆ ಮಾತನಾಡುತ್ತಾರೈ "ಮಹಿಳೆಯರಿಗೆ ಪ್ರತ್ಯೇಕವಾದ ಸಮಸ್ಯೆಗಳಿರುವುದರಿಂದ ಅವುಗಳ ಚರ್ಚೆ ಮತ್ತು ನಿವಾರಣೆಗಾಗಿ ಮಹಿಳಾ ಸಂಘಟನೆ ಅತ್ಯಗತ್ಯ. ಹುಡುಗ ಮತ್ತು ಹುಡುಗಿಯಲ್ಲಿ ತಾರತಮ್ಯ ಮಾಡುವುದು ಸರಿಯಲ್ಲ. ಅವರಿರ್ವರಿಗೂ ಶಿಕ್ಷಣ ಅವಶ್ಯಕತೆ ಇದೆ... ಹುಡುಗಿಯರಿಗೆ ಮದುವೆಯನ್ನು ಬಹುಬೇಗ ಮಾಡುವುದು ತರವಲ್ಲ. ಏಕೆಂದರೆ ಅವರು ದೇಶದ ನಾಗರೀಕರನ್ನಾಗಿ ರೂಪಸಿಬೇಕು. ಮನೆಯ, ಸಂಘಟನೆ, ಪಕ್ಷದ ಹಾಗೂ ದೇಶದ ಆಗುಹೋಗುಗಳಲ್ಲಿ ಮಹಿಳೆ ಸಮರ್ಪಕವಾಗಿ ಪ್ರಾತಿನಿದ್ಯ ಅತ್ಯವಶ್ಯಕ ಎಂದು ಹೇಳುತ್ತಾ, ಕೊನೆಯಲ್ಲಿ ಬಹುಪತ್ನಿತ್ವನ್ನು ನಿಷೇಧಿಸಬೇಕು" (ವಿದ್ಯಾಸಾಗರ ಐ.ಎಸ್: 2006: ಪು. 109) ಎನ್ನುತ್ತಾರೆ.

ಅಂಬೇಡ್ಕರ್ ಭಾರತೀಯ ಧಾರ್ಮಿಕ, ಸಾಮಾಜಿಕ, ರಾಜಕೀಯ, ಅಧ್ಯಾತ್ಮಿಕ ವಿಷಯಗಳ ಕುರಿತು ಅಧ್ಯಯನದಲ್ಲಿ ಅಸ್ಪೃಶ್ಯರ, ಶೂದ್ರರಸ್ಥಿತಿ ಅದರ ಮೂಲ, ಅದರ ಪ್ರಸ್ತುತ ಸ್ವರೂಪ, ಪರಿಣಾಮಗಳನ್ನು ಶೋಧಿಸಿದರು. ಅವು ಭಾರತದ ಜನರ ಬದುಕಿನ ಸ್ಥಿತಿಯನ್ನು

ಅರಿಯುವಲ್ಲಿ ಮಹತ್ವವಾದವು. ಹಾಗೆಯೇ ಭಾರತೀಯ ಮಹಿಳೆಯರ ಕುರಿತು ಅನೇಕ ಅಧ್ಯಯನ ಮಾಡಿದ್ದಾರೆ. ಅದರಲ್ಲಿ "ಹಿಂದೂ ಮಹಿಳೆಯ ಏಳು-ಬೀಳು", "ಸ್ತ್ರೀ ಮತ್ತು ಪ್ರತಿಕ್ರಾಂತಿ" ಬ್ರಾಹ್ಮಣರು ದೇವರನ್ನು ಪದಚ್ಯುತಿಗೊಳಿಸಿ ದೇವಿಯರನ್ನೇಕೆ ಮೇಲೇರಿಸಿದರು?" "ಪಿತೃತ್ವದಿಂದ ಮಾತೃತ್ವಕ್ಕೆ ಬದಲಾವಣೆ ಇದರಿಂದ ಬ್ರಾಹ್ಮಣರು ಗಳಿಸಲು ಬಯಸಿದ್ದೇನು?" ಇತ್ಯಾದಿಗಳು ಪ್ರಮುಖವಾದವು.

ಇದರಲ್ಲಿ ವೇದ, ಯಜ್ಞದಲ್ಲಿ ಪಾಲ್ಗೊಳ್ಳುವಿಕೆಗಳನ್ನು ಮಹಿಳೆಯರ ಪಾಲಿಗೆ ಇಲ್ಲವಾಗಿಸಿದ ಮನು, ಇದನ್ನು ಮಾಡಿದರೆ ಮಹಿಳೆಯರು ಶೂದ್ರರಂತೆ ಮರಣದಂಡನೆಗೆ ಅರ್ಹರು ಎಂಬ ಶಿಕ್ಷೆ ವಿಧಿಸಿದ್ದ ಸಂಗತಿಗಳನ್ನು 'ಸ್ತ್ರೀ ಮತ್ತು ಪ್ರತಿಕ್ರಾಂತಿ' ಲೇಖನದಲ್ಲಿ ಅಂಬೇಡ್ಕರ್ ಈ ವಿಷಯವನ್ನು ಪ್ರಸ್ತಾಪಿಸುತ್ತಾರೆ.

ಒಟ್ಟಿನಲ್ಲಿ ಅಂದಿನ ಮಹಿಳೆಯರನ್ನು ಕುಟುಂಬದಲ್ಲಿ, ಸಮಾಜದಲ್ಲಿ ಹೇಗೆ ನಡೆಸಿಕೊಳ್ಳಲಾಗುತಿತ್ತು ಎಂದು ವಿವರಿಸುವ ಅಂಬೇಡ್ಕರ್ ಜಾತಿಪದ್ಧತಿ ಉಳಿಸಿಕೊಂಡಿರುವುದರಿಂದಲೇ ಮಹಿಳೆ ಶೋಷಣೆಗೆ ಒಳಗಾಗಿದ್ದಾಳೆ ಎನ್ನುತ್ತಾರೆ. ಅಂದರೆ ಪಿತೃಪ್ರಧಾನ ಪ್ರಶ್ನೆಜಾತಿ ಉಳಿವಿಕೆಯ ಪ್ರಶ್ನೆ ಎಂಬುದು ಅವರ ವಾದವಾಗಿತ್ತು. ಮಹಿಳೆಯ ಜಾತಿಪದ್ಧತಿಯಲ್ಲಿರುವ ಮಹಿಳೆಯನ್ನ ಅಂಬೇಡ್ಕರ್ ಅವರು ಯಾವ ನೆಲೆಯಿಂದ ಚರ್ಚಿಸುತ್ತಾರೆ ಎಂಬುದನ್ನು ಮುಂದಿನ ಅಧ್ಯಯನದಲ್ಲಿ ಚರ್ಚಿಸಲಾಗುವುದು.

ಅಂಬೇಡ್ಕರ್ ದಲಿತರ, ಅವರ ಮಕ್ಕಳ ಏಳಿಗೆಗಾಗಿ ಅನೇಕ ಸಂಘ ಸಂಸ್ಥೆಗಳನ್ನು ಸ್ಥಾಪಿಸಿದರು. ಜೊತೆಗೆ ದಲಿತ ಸ್ಥಿತಿ, ಮತ್ತು ರಾಜಕೀಯ ನಡೆ ಕುರಿತು ಜಾಗೃತಿ ಮೂಡಿಸಲು, "ಮೂಕನಾಯಕ", "ಜನತಾ", "ಬಹಿಷ್ಕೃತ ಭಾರತ" ಮುಂತಾದ ಪತ್ರಿಕೆಗಳನ್ನು ಆರಂಭಿಸಿದರು.

ಅಂಬೇಡ್ಕರ್ 1927 ರಲ್ಲಿ ಮುಂಬೈ ಪ್ರಾಂತೀಯ ಶಾಸನಸಭೆಯ ಸದಸ್ಯರಾಗಿದ್ದಾಗ ಅಸ್ಪೃಶ್ಯರ ವಿಷಯಗಳಿಗೆ ಹಲವು ಕ್ರಮಕೈಗೊಂಡರಲ್ಲದೆ ಶಾಸನಸಭೆಯಲ್ಲಿ ಹಣಕಾಸಿನ ವಿಷಯ, ಶಿಕ್ಷಣ, ಪಂಚಾಯತಿ, ಸ್ಥಳೀಯ ಸಂಸ್ಥೆಗಳು, ಖೋರೆ ಪದ್ಧತಿ, ಕೈಗಾರಿಕೆ, ವಿಶ್ವಯುದ್ಧ ಸಂದರ್ಭದಲ್ಲಿ ಇಂತಹ ಹಲವಾರು ವಿಷಯಗಳ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಆದರೆ ದುಡಿಯುವ ವರ್ಗದ ಬಗೆಗಿನ ಅಂಬೇಡ್ಕರ್ ಧೋರಣೆ ಕಾರ್ಲ್‌ಮಾರ್ಕ್ಸ್‌ಗಿಂತ ಭಿನ್ನವಾಗಿತ್ತು. ಅಂದರೆ "ಜಗತ್ತಿನ ದುಡಿಯುವ ವರ್ಗದ ಮೇಲೆ ಶ್ರೀಮಂತಶಾಹಿ, ಬಂಡವಾಳಶಾಹಿ ಶೋಷಣೆ ಮಾಡುತ್ತಿದೆ. ಹಾಗಾಗಿ ಕಾರ್ಮಿಕರ ದುಡಿತದ ಫಲ ಪಡೆದ ಬಂಡವಾಳಶಾಹಿ ವರ್ಗ ಕಾರ್ಮಿಕರನ್ನು ಶೋಷಣೆ ಮಾಡಿ ಹೆಚ್ಚಿನ ಸಂಪತ್ತನ್ನು ಸಂಗ್ರಹಿಸಿಕೊಂಡು ಸುಖದ ಸುಪತ್ತಿಗೆಯಲ್ಲಿ ಜೀವಿಸುತ್ತದೆ." (ವಸಂತ್ ಮೂನ: 2002: ಪು.98) ಎಂಬುವ ಮಾರ್ಕ್ಸ್‌ರ ತತ್ವಗಳನ್ನು ಅಂಬೇಡ್ಕರ್ ಒಪ್ಪುತ್ತಾರೆ. ಆದರೆ ಒಂದು ವಿಚಾರದಲ್ಲಿ ಅವರು ಭಿನ್ನವಾಗಿದ್ದರು.

"ದುಡಿಯುವ ವರ್ಗದ ಮೇಲೆ ಆರ್ಥಿಕ ಶೋಷಣೆ ಮಾತ್ರ ಆಗದೇ ಸಾಮಾಜಿಕ ಶೋಷಣೆಯೂ ಕೂಡ ಆಗುತ್ತದೆ. ಈ ದೇಶದ ಅಸ್ಪೃಶ್ಯರ ವರ್ಗ ಕೇವಲ ಆರ್ಥಿಕ ತೊಂದರೆಯಲ್ಲಿ ಬದುಕದೇ ಸಾಮಾಜಿಕ ಆಧಾರದ ಮೇಲೆ ಇದರಿಂದ ಆಗುವ ಶೋಷಣೆಯ ಬಗ್ಗೆ ಮಾರ್ಕ್ಸವಾದದ ಬಗ್ಗೆ ವಿಚಾರವಿಲ್ಲ ಎನ್ನುತ್ತಾರೆ." (ವಸಂತ್ ಮೂನ್: 2002: ಪು.109) ಆದ್ದರಿಂದ ಅಂಬೇಡ್ಕರ್ ಪ್ರಕಾರ "ದುಡಿಯುವ ಅಸ್ಪೃಶ್ಯ ವರ್ಗದವರು ಶೋಷಣೆಯಿಂದ ಮುಕ್ತರಾಗಲು ಸರಕಾರ ಭೂಮಿಯನ್ನು, ಕೈಗಾರಿಕೆಗಳನ್ನು ಮತ್ತು ಜೀವ ವಿಮಾ ಕಂಪನಿಗಳನ್ನು ರಾಷ್ಟ್ರೀಕರಣ ಮಾಡಬೇಕು. ಪ್ರಜಾಸತ್ತಾತ್ಮಕ ಮೌಲ್ಯಗಳ ಮೇಲೆ ಕಾನೂನಿನ ಮೂಲಕ ತಳಸಮುದಾಯದಲ್ಲಿನ ದುಡಿಯುವ ವರ್ಗದ ಹಿತ ಕಾಪಾಡಬೇಕೆಂದು ಹೇಳುತ್ತಾರೆ." (ಅದೇ, ಪು.110)

ಆದ್ದರಿಂದಲೇ ಅವರು ದುಡಿಯುವ ಮಹಿಳಾ ಕಾರ್ಮಿಕ ಹೆರಿಗೆ ಭತ್ಯ ಕುರಿತಂತೆ "ಶ್ರಮಜೀವಿ ಮಹಿಳೆಯರನ್ನು ಮನೆಗೆಲಸ ಮತ್ತು ಹೊರಗಿನ ಕೆಲಸಗಳಲ್ಲಿ ಕುಬ್ಜಗೊಂಡಿದ್ದಾರೆ. ಅವರು ಗರ್ಭಿಣಿಯಾಗಿದ್ದಾಗ ಹಾಗೂ ಬಾಣಂತಿಯಾಗಿದ್ದಾಗ ಮಹಿಳೆಯರಿಗೆ ವೇತನ ಸಹಿತ ಹೆರಿಗೆ ಸೌಲಭ್ಯ ನೀಡುವುದರಿಂದ "ದುರ್ಬಲ"ರಿಗೆ ಅಗತ್ಯವಿದ್ದಾಗ ಸಹಾಯ ಒದುಗುವಂತಾಗಬೇಕೆಂಬ ತತ್ವದ ಮೇಲೆ ಈ ಮಸೂದೆಯನ್ನು ಪಾಸು ಮಾಡಬೇಕಾಗಿದೆ" ಎಂದರು. (ವಿದ್ಯಾಸಾಗರ ಐ.ಎಸ್: 2006: ಪು.111)

ನಂತರ ಇಂಗ್ಲೆಂಡಿನಲ್ಲಿ ನಡೆದ ಭಾರತ ಸ್ವಾತಂತ್ರ್ಯದ ಕುರಿತು ದುಂಡು ಮೇಜಿನ ಮೂರು ಸಭೆಯಲ್ಲಿ ಭಾಗವಹಿಸಿದ್ದರು. ಆಗ ನಿಮ್ನ ವರ್ಗದ ಹಕ್ಕುಗಳನ್ನು ಪ್ರಸ್ತುತಪಡಿಸಿದರಲ್ಲದೆ "ಭಾರತಕ್ಕೆ ಸ್ವಾತಂತ್ರ್ಯ ದೊರೆತರೆ, ಪ್ರಾಂತ್ಯಗಳ ಒಕ್ಕೂಟ ಸಭೆಗೆ ನಾಮಕರಣದ ಮೂಲಕ ಜನಪ್ರತಿನಿಧಿಗಳನ್ನು ಆಯ್ಕೆ ಮಾಡುವ ಬದಲು ಚುನಾವಣೆಯ ಮೂಲಕ ಆಯ್ಕೆ ಮಾಡುವ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂದು ಒತ್ತಾಯಿಸಿದರು." (ಬಿ.ಯು.ಸುಮಾ: 2008: ಪು.19) ಆದರೆ ಇದರಿಂದ ಗಾಂಧೀಜಿ ಮತ್ತು ಅಂಬೇಡ್ಕರ್‌ರೊಂದಿಗೆ ಭಿನ್ನಾಭಿಪ್ರಾಯ ಉಂಟಾಯಿತು. ಗಾಂಧೀಜಿ ಅಂಬೇಡ್ಕರ್‌ರೊಂದಿಗೆ ಉಪವಾಸದ ಸಂಘರ್ಷಕ್ಕಿಳಿದರು. ಇದು 'ಪೂನಾ ಒಪ್ಪಂದ'ದಲ್ಲಿ ಪರ್ಯಾವಸನಗೊಂಡಿತು.

ಹೀಗೆ ಹಲವು ಚಳುವಳಿ ಮತ್ತು ಭಿನ್ನಾಭಿಪ್ರಾಯದ ನಡುವೆ ಭಾರತ ಸ್ವಾತಂತ್ರ್ಯ ಪಡೆಯಿತು. ಆಗ ಇದರ ಸಂಪಿಧಾನ ರಚನೆ ಜವಾಬ್ದಾರಿಯನ್ನು ಸ್ವೀಕರಿಸಿದ ಅಂಬೇಡ್ಕರ್ ಸಮಾನತೆ, ಸಾಮಾಜಿಕ ನ್ಯಾಯತತ್ವದ ಹಿನ್ನಲೆಯಲ್ಲಿ ಎಲ್ಲರಿಗೂ ಮೂಲಭೂತ ಹಕ್ಕುಗಳನ್ನು ಕಲ್ಪಿಸಿದರು. ಅದರಲ್ಲೂ ವಿಶೇಷ ಸವಲತ್ತುಗಳನ್ನು ಸಮಾಜದ ತಳಸಮುದಾಯಗಳ ಜನತೆಗೆ ಒದಗಿಸಿಕೊಟ್ಟರು.

ನಂತರ ಅವರು ನೆಹರೂ ಸಚಿವ ಸಂಪುಟದಲ್ಲಿ ಕಾನೂನಿನ ಸಚಿವರಾಗಿ ಹಿಂದೂ ಕೋಡ್ ಬಿಲ್‌ನ್ನು ಕೈಗೆತ್ತಿಕೊಂಡು ಸಿದ್ದಪಡಿಸಿದರು. ಈ ಕುರಿತು 1950 ರಲ್ಲಿ ಅಂಬೇಡ್ಕರ್ ಸಿದ್ಧಾರ್ಥ ಕಾಲೇಜಿನಲ್ಲಿ ಮಾತನಾಡುತ್ತಿದ್ದರು. ಅವರ ಪ್ರಕಾರ "ಹಿಂದೂ ವಿವಾಹ ಕಾಯ್ದೆಯ ಕೊನೆಯ ಬದಲಾವಣೆ ಮಹಿಳೆಯ ಆಸ್ತಿಹಕ್ಕಿಗೆ ಸಂಬಂಧಿಸಿದೆ. 1937ಕ್ಕೆ ಮುನ್ನ ಆಕೆ ಒಂದು ಕುಟುಂಬದ ಸೊಸೆಯಾಗಲಿ, ಅಥವಾ ವಿಧವೆ ಸೊಸೆಯಾಗಲಿ ಆ ಕುಟುಂಬದ ಆಸ್ತಿಯ ಪಾಲನ್ನು ಕೇಳುವಂತಿರಲಿಲ್ಲ. ಆದರೆ 1937 ರ ಕಾಯ್ದೆಯಲ್ಲಿ ವಿಧವೆಗೆ ತನ್ನ ಮೃತ ಪತಿಯ ಆಸ್ತಿಯನ್ನು ಪಡೆಯುವ ಹಕ್ಕನ್ನು ನೀಡಿದರು. ಆದರೂ ಮಹಿಳೆಯ ಆಸ್ತಿಯ ಹಕ್ಕು ಅಪೂರ್ಣವಾಗಿತ್ತು. ಆದರೆ ಈಗ ಹಿಂದೂ ವಿವಾಹ ಕಾಯ್ದೆ ಮೂಲಕ ಮನೆ ಮಗಳಿಗೂ ಸಹ ಮಗನಷ್ಟೆ ಆಸ್ತಿ ಮೇಲೆ ಹಕ್ಕನ್ನು ಕಲ್ಪಿಸುವ ಸಂಗತಿಯನ್ನು ಒಳಗೊಂಡಿದೆ" ಎನ್ನುತ್ತಾರೆ. (ಸಂ:ಮಾ.ಭರಣಿ, ಲೇ:ಅಹಲಾ ರಂಗ್ಣೇಕರ್: 1991: ಪು.241)

ಅನಂತರದಲ್ಲಿ ಅಂಬೇಡ್ಕರ್ ಲಕ್ಷಾಂತರ ಜನರೊಂದಿಗೆ ಬೌದ್ಧಧರ್ಮಕ್ಕೆ ಮತಾಂತರ ಗೊಂಡರು. ಸ್ವಲ್ಪದಿನಗಳಲ್ಲಿ ಅಂಬೇಡ್ಕರ್ ಅರೆನಿದ್ರೆ ಅವಸ್ಥೆಯಲ್ಲಿ ಜೀವಬಿಟ್ಟರು.

ಇದಿಷ್ಟು ಅಂಬೇಡ್ಕರ್‌ಗೆ ಸಂಬಂಧಿಸಿದ್ದು. ಇನ್ನೂ ಆ ಸಂದರ್ಭದಲ್ಲಿನ ಅಂಬೇಡ್ಕರ ಸಮಕಾಲೀನ ಚಿಂತಕರನ್ನು ಪರಿಶೀಲಿಸುವುದು ಉಪಯುಕ್ತ. ಏಕೆಂದರೆ ಅಂಬೇಡ್ಕರ್ ಆ ಸಂದರ್ಭದಲ್ಲಿ ರೂಪಗೊಂಡವರೆ ವಿನಹ, ಅದರ ಹೊರತಾದವರಲ್ಲ. ಹಾಗಾಗಿ ಆ ಸಂದರ್ಭವನ್ನು ಅಧ್ಯಯನಿಸಲಾಗುವುದು. ಈ ಕುರಿತು ಕೆ.ವಿ.ನಾರಾಯಣ ಹೇಳಿಕೆಗೆ ಮಹತ್ವವಾದುದು. "ನಿರ್ಧಿಷ್ಟ ಸಾಮಾಜಿಕ ಸಂದರ್ಭವೊಂದರ ಅಧ್ಯಯನದಲ್ಲಿ ತೊಡಗುವವರು ಆ ಸಂದರ್ಭದ ಪ್ರಚಲಿತ ಸಿದ್ಧಾಂತಗಳ ಮೂಲಕ ಪ್ರಭಾವಿತರಾಗಿರುವುರಿಂದ ಅವರ ಅಧ್ಯಯನದ ಮೊದಲ ಎರಡು ಹಂತಗಳೂ ಒಂದಿಲ್ಲೊಂದು ಬಗೆಯಲ್ಲಿ ಪ್ರಭಾವಿತವಾಗುತ್ತವೆ. ಹೀಗಾಗಿ ಆ ಅಧ್ಯಯನದ ನಿಲುಮೆಯನ್ನು ಒಂದು ರೂಪಿಕೆ ಎಂದು ತಿಳಿಯಬೇಕು ಹಾಗೂ ಈ ರೂಪಿಕೆಯನ್ನು ಆ ಸಾಮಾಜಿಕ ಸಂದರ್ಭದ ಹಿನ್ನೆಲೆಯಲ್ಲೇ ಅರಿಯಲು ಯತ್ನಿಸಬೇಕು" ಎನ್ನುತ್ತಾರೆ. (ಕೆ.ವಿ.ನಾರಾಯಣ: 2008: ಪು.12)

ಆದ್ದರಿಂದ ಅಂಬೇಡ್ಕರ್‌ರನ್ನು ಸಹ ಆ ಸಂದರ್ಭದ ನೆಲೆಯಿಂದ ಅಧ್ಯಯನ ಮಾಡಲು ಪ್ರಯತ್ನಿಸುತ್ತಿದ್ದು, ಆ ಸಂದರ್ಭದಲ್ಲಿ ಭಾರತದ ರಾಷ್ಟ್ರೀಯ ಚಳುವಳಿ ಮತ್ತು ದಲಿತರ, ಮಹಿಳೆಯರನ್ನು ಕುರಿತು ಚಿಂತಿಸುತ್ತಿರುವವರು ಅನೇಕರಿದ್ದಾರೆ. ಆದರೆ ಆ ಸಂದರ್ಭದಲ್ಲಿ ಹೆಚ್ಚು ಜಾತಿಪದ್ಧತಿ ಮತ್ತು ಮಹಿಳೆ ಕುರಿತು ಚಿಂತಿಸುವ ಭಾರತೀಯರಾದ ಜ್ಯೋತಿ ಬಾ ಪುಲೆ, ಗಾಂಧೀಜಿ, ಪೆರಿಯಾರ್ ರಾಮಸ್ವಾಮಿ ನಾಯ್ಕರ್, ಲೋಹಿಯಾ ಅವರನ್ನು ಮತ್ತು ಅವರ ಚಿಂತನೆಗಳನ್ನು ಇಲ್ಲಿ ಸ್ಥೂಲವಾಗಿ ಪರಿಚಯಿಸಲಾಗಿದೆ.

**ಜ್ಯೋತಿಬಾ ಪುಲೆ :**

ಭಾರತದ ಸಾಮಾಜಿಕ ಚಳುವಳಿಯ ರಂಗದಲ್ಲಿ ನೆನೆಯಲೇಬೇಕಾದವರು ಜ್ಯೋತಿ ಬಾ ಪುಲೆ. ಇವರು ಮಾಲಿ ಎಂಬ ಹೂಗಾರ ಜಾತಿಯ ಗೋವಿಂದರಾವ್ ಮತ್ತು ಚಿಮಣಾಬಾಯಿಯವರ ಎರಡನೆ ಮಗನಾಗಿ ಜನಿಸಿದರು. ಜ್ಯೋತಿ ಬಾ ಹುಟ್ಟಿದ ಕೆಲವೇ ತಿಂಗಳುಗಳಲ್ಲಿ ತಾಯಿ ಚಿಮಣಾಬಾಯಿ ತೀರಿಕೊಂಡರು. ಅವರನ್ನು ಪೋಷಿಸಿ ಬೆಳಸಿದ್ದು ವಿಧವೆಯಾಗಿದ್ದ ಚಿಕ್ಕಮ್ಮ ಸುಗುಣಬಾಯಿ ಕ್ಷೀರಸಾಗರ. ನಂತರ ಈತನನ್ನು ಮರಾಠಿ ಶಾಲೆಗೆ ಸೇರಿಸಲಾಯಿತು. ಜ್ಯೋತಿ ಬಾ ನಾಲ್ಕನೇಯ ತರಗತಿಯಲ್ಲಿ ಓದುತ್ತಿದ್ದ ಸಂದರ್ಭದಲ್ಲಿ ತಮ್ಮ ಮನೆಯಲ್ಲಿ ಗುಮಾಸ್ತನಾಗಿ ದುಡಿಯುತ್ತಿದ್ದ ಬ್ರಾಹ್ಮಣ ಗುಮಾಸ್ತನ ಮಾತುಕೇಳಿದ ಗೋವಿಂದರಾವ ಮಗನನ್ನು ಶಾಲೆಬಿಡಿಸಿ, ತಮ್ಮ ಕುಲಕಸುಬು ಮಾಡಲು ಹಚ್ಚುತ್ತಾರೆ. ಜ್ಯೋತಿ ಬಾಗೆ ಹದಿಮೂರನೇ ವಯಸ್ಸಿನಲ್ಲಿಯೇ ತಂದೆ ಸಾತಾರಾ ಜಿಲ್ಲೆಯ ನಾಯಗಾಂವ ಶ್ರೀ ಸೇವಸೆ ಪಾಟೀಲನ ಮಗಳು ಸಾವಿತ್ರಿಬಾಯಿಯೊಂದಿಗೆ ಮದುವೆ ಮಾಡುತ್ತಾರೆ. ಮರು ವರ್ಷವೇ ಶ್ರೀ ಗಫ್ಫಾರಬೇಗಂ ಮುಂಶಿ ಹಾಗು ಶ್ರೀ ಲಜಿಟ್ ಸಾಹೇಬರ ಸಂಪರ್ಕದಿಂದ ಅವರನ್ನು ಪುಣೆಯ ಸ್ಕಾಟಿಷ್ ಮಶಿನ್ ಶಾಲೆಗೆ ಸೇರಿಸಲಾಯಿತು. ಇಲ್ಲಿನ ಇಂಗ್ಲಿಷ್ ವಿದ್ಯಾಭ್ಯಾಸದ ಪರಿಣಾಮವಾಗಿ ಜ್ಯೋತಿ ಬಾನ ಜ್ಞಾನಾರ್ಜನಗೆ ವಿಪುಲ ಅವಕಾಶ ದೊರೆಯಿತು. ಇಲ್ಲಿ ಕ್ರೈಸ್ತ ಧರ್ಮದ ಪ್ರಭಾವ ಅವರ ಮೇಲಾಯಿತು. ಜೊತೆಗೆ ಸಾಕುತಾಯಿ ಸುಗುಣಾಬಾಯಿ ಕ್ರೈಸ್ತಪಾದ್ರಿಗಳ ಸಾಕುಮಕ್ಕಳ ಮೇಲ್ವಿಚಾರಣೆಯ ಜವಾಬ್ದಾರಿ ಹೊತ್ತು ದುಡಿಯುತ್ತಿದ್ದ ಸಂದರ್ಭ ಜ್ಯೋತಿಬಾ ಅವರನ್ನು ಆರ್ಕಷಿಸಿತು. ತಾನು ಕೂಡ ಇಂತಹ ನಿಸ್ವಾರ್ಥ ಸೇವೆಯಲ್ಲಿ ತೊಡಗಬೇಕೆಂಬ ತುಡಿತ ಆ ಅವಧಿಯಲ್ಲೆ ಅವರಿಗೆ ಬೆಳೆಯಿತು. ಆಗ ತಮ್ಮ ಇಂಗ್ಲಿಷ್ ಶಾಲೆಯ ಶಿಕ್ಷಣ ಮುಗಿಸಿದರು. ಆತ್ತ ಕಡೆ ಅಮೇರಿಕೆಯ ಖ್ಯಾತ ಬಂಡಾಯ ಲೇಖಕ ಥಾಮಸ್ ಪೇನ್‌ರ ಬರಹಗಳಿಂದ ಪ್ರೇರಿತರಾದರು.

ಇನ್ನೊಂದು ಸಂದರ್ಭದಲ್ಲಿ ತಮ್ಮ ಒಬ್ಬ ಆಪ್ತ ಬ್ರಾಹ್ಮಣ ಮಿತ್ರನ ಮದುವೆಗೆ ಹೋದಾಗ ಅಲ್ಲಿ ಬ್ರಾಹಣರೆಲ್ಲ ಜ್ಯೋತಿಬಾರನ್ನು ಶೂದ್ರರೆಂದು ಬೈದು ಬ್ರಾಹ್ಮಣರ ಸರಿಸಮ ಶೂದ್ರ ಬರಕೂಡದೆಂದು ಅವಮಾನ ಮಾಡಿ ಕಳಿಸಿದರು. ಈ ಅವಮಾನ ಅವರ ಜೀವನದ ಗತಿಯನ್ನು ಬದಲಿಸಿತು. ನನ್ನಂಥ ಶೂದ್ರನ ಗತಿಯೇ ಹೀಗಾದರೆ ಅಸ್ಪೃಶ್ಯರ ಗತಿಯೇನು? ಎಂದು ಚಿಂತಿಸಿ, ಸಿಗಬಹುದಾದ ಸರಕಾರಿ ನೌಕರಿಗಳನ್ನು ತಿರಸ್ಕರಿಸಿ, ಸಾಮಾಜಿಕ ಸುಧಾರಣೆಗೆ ದುಡಿಯಲು, ಬ್ರಾಹ್ಮಣರ ವಿರುದ್ಧ ಹೋರಾಡಲು ಪಣತೊಟ್ಟರು. ಈ ಹಿನ್ನಲೆಯಲ್ಲಿ ಅವರು ಅಸ್ಪೃಶ್ಯರ ಮತು ಸ್ತ್ರೀಶಿಕ್ಷಣಕ್ಕೆ ಮಹತ್ವಕೊಟ್ಟರು.

"1848 ರಲ್ಲಿ ಜ್ಯೋತಿ ಬಾ ಪುಲೆಯು ಪುಣೆಯ ಬುಧವಾರ ಪೇಟೆಯಲ್ಲಿ ಶ್ರೀಭಿಡೆಯವರ ಭವನದಲ್ಲಿ ಮೊತ್ತಮೊದಲ ಕನ್ಯಾಶಾಲೆ ಪ್ರಾರಂಭಿಸುವುದರೊಂದಿಗೆ ತಮ್ಮ ಸಾಮಾಜಿಕ ಸುಧಾರಣಾ ಚಳುವಳಿಯನ್ನು ಆರಂಭಿಸಿದರು. ಅವರ ಒಟ್ಟು ಚಳುವಳಿಯನ್ನು ಸಂಕ್ಷಿಪ್ತವಾಗಿ ಹೀಗೆ ಪ್ರಸ್ತುತಪಡಿಸಬಹುದು. 1851 ನೆಯ ಇಸವಿಯಲ್ಲಿ ದಲಿತರಿಗಾಗಿ ಮೊಟ್ಟಮೊದಲು ಶಾಲೆ ಪ್ರಾರಂಭಿಸಿದರು. 1848 ರಿಂದ 1852 ರ ಅವಧಿಯಲ್ಲಿ ಪುಲೆ ದಂಪತಿಗಳು ಇಂಥ ಒಟ್ಟು ಹದಿನೆಂಟು ಶಾಲೆಗಳನ್ನು ತೆರೆದರು." (Deshpande (ed): 2002: ಪು,70)ಸಾವಿತ್ರಿಬಾಯಿಯವರು ಶಿಕ್ಷಕಿಯಾಗಿ ಅನೇಕ ಅಡಚಣೆ ಮತ್ತು ಅವಮಾನ, ಆತಂಕಗಳ ಮಧ್ಯೆ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಿದರು.

ಹಿಂದೂಗಳಲ್ಲಿನ ಶೂದ್ರ ಹಾಗೂ ಅತಿಶೂದ್ರರನ್ನು ಸಂಘಟಿಸಿದರು. ಈ ಮೂಲಕ ಅಸ್ಪೃಶ್ಯರಿಗೆ ತಮ್ಮ ಬಾವಿಯಿಂದ ನೀರು ದೊರೆಕಿಸಿಕೊಟ್ಟರು. "1864 ರಲ್ಲಿ ವಿಧವಾ ವಿವಾಹ ಮಾಡಿದರು. ಹಾಗೂ ಅದನ್ನು ಸಮರ್ಥಿಸಿದರು. ವಿಧವೆಯರು ಹೆತ್ತಮಕ್ಕಳನ್ನು ಪೋಷಿಸಲು ಅನಾಥಾಲಯ ತೆರೆದರು ಮತ್ತು ವಿಧವೆಯರು ಬಸಿರಾಗುವುದು ಸಾಮಾಜಿಕ ಅಪರಾಧವೆನಿಸಿತು. ಅದರಿಂದ ಅವರಿಗಾಗಿ ಒಂದು ಬಾಲಹತ್ಯಾನಿಷೇಧಕ ಪ್ರಸೂತಿ ಗೃಹವನ್ನು ಆರಂಭಿಸಿದರು." (ಮುರುಳಿಧರ ಜಗತಾಪ: 2001: ಪು,66) ಇಂಥ ಪ್ರಸೂತಿ ಗೃಹದಲ್ಲಿ ಕಾಶೀಬಾಯಿ ಎಂಬ ಬ್ರಾಹ್ಮಣ ವಿಧವೆಯ ಕೂಸನ್ನು ಪುಲೆ ದಂಪತಿಗಳು ದತ್ತು ಪಡೆದು ಬೆಳೆಸಿದರು.

ಬ್ರಾಹ್ಮಣರಲ್ಲಿ ವಿಧವೆಯರ ಕೇಶಕರ್ತನವನ್ನು ತಡೆಯಲು ಹಜಾಮರನ್ನು ಸಂಘಟಿಸಿದರು. ಈ ಮೂಲಕ ಬ್ರಾಹ್ಮಣ ವಿಧವೆಯರ ತಲೆ ಬೋಳಿಸುವುದನ್ನು ತಡೆಗಟ್ಟಲು ಪ್ರಯತ್ನಿಸಿದರು. ಅಷ್ಟೇ ಅಲ್ಲ ಬ್ರಾಹ್ಮಣರಿಗೆ ಕ್ಷೌರಮಾಡುವುದನ್ನು ನಿಲ್ಲಿಸಿದರು. ಅಗಸರು ಬ್ರಾಹ್ಮಣರ ಬಟ್ಟೆಗಳನ್ನು ತೊಳೆಯುವುದನ್ನು ನಿಲ್ಲಿಸಿದರು. ಈ ಪರಂಪರೆಯಿಂದಾಗಿ ಕೊಲ್ಲಾಪುರದಲ್ಲಿ ಕ್ಷೌರ ಮಾಡುವ ಬ್ರಾಹ್ಮಣ ವರ್ಗ ಈಗಲೂ ಇದೆ.

ಬಾಲ್ಯವಿವಾಹವನ್ನು ವಿರೋಧಿಸಿ ಈ ಕುರಿತು ಸಮಾಜದಲ್ಲಿ ಜಾಗೃತಿ ಮೂಡಿಸಿದರು. ಧರ್ಮದ ಹೆಸರಿನಲ್ಲಿ ವೈಷಮ್ಯವಾಗದಿರಲೆಂದು 1873 ರಲ್ಲಿ 'ಸತ್ಯಶೋಧಕ ಸಮಾಜ'ವನ್ನು ಸ್ಥಾಪಿಸಿದರು. ಈ "ವೇದಿಕೆಯ ಮುಖಾಂತರ ಅನೇಕ ಬಾಲ್ಯವಿವಾಹ, ಸತಿ ವಿರುದ್ಧ ಸಾಮಾಜಿಕ ಚಳುವಳಿಯನ್ನು ಮಾಡಿದರು. ಹಾಗೆಯೇ ಶೂದ್ರಾತಿಶೂದ್ರರಿಗೆ ನೈತಿಕ ಬೆಂಬಲಕೊಟ್ಟು ಅವರನ್ನು ಹೋರಾಟಕ್ಕೆ ಅಣಿಗೊಳಿಸಿದರು. ಬ್ರಾಹ್ಮಣ ಪೂಜ್ಯ ಗ್ರಂಥಗಳ ಬಣ್ಣ ಬಯಲು ಮಾಡಿದರಲ್ಲದೆ ಅವರ ಪೌರೋಹಿತ್ಯವನ್ನು ಧಿಕ್ಕರಿಸಿ ಶೂದ್ರಾತಿಶೂದ್ರರು ತಮ್ಮ ಎಲ್ಲ ಕಾರ್ಯಕ್ರಮಗಳಿಗೆ ತಾವೇ ಪೌರೋಹಿತ್ಯ ವಹಿಸುವಂತೆ ಮಾಡಿ, ಇದು ಸಮಾಜದಲ್ಲಿನ ಅಸಮಾನತೆಯನ್ನು ಹೋಗಲಾಡಿಸುವ ಮತ್ತೊಂದು ಮಾರ್ಗವಾಗಿದೆ ಎಂದು

ಭಾವಿಸಿದರು." (ಮುರುಳಿಧರ ಜಗತಾಪ: 2001: ಪು,80) ಇದಕ್ಕಾಗಿ ಅವರು ಮುಂಜಿವೆ, ವಿವಾಹ ಮೊದಲಾದ ಮಂಗಳ ಸಮಾರಂಭಗಳಲ್ಲಿ ಯಾರಿಗೂ ತಿಳಿಯದ ಸಂಸ್ಕೃತ ಮಂತ್ರಗಳನ್ನು ಎಲ್ಲರಿಗೂ ತಿಳಿಯುವಂತೆ ಮರಾಠಿಭಾಷೆಗೆ ಅನುವಾದಿಸಿ ಪ್ರಕಟಿಸಿದರು.

1879 ರಲ್ಲಿ ಮುಂಬೈಯಲ್ಲಿ ಹತ್ತಿ ಗಿರಣಿ ಕೆಲಸಗಾರರ ಸಂಘವನ್ನು ಸ್ಥಾಪಿಸಿದರು. ತನ್ನ ಗೆಳೆಯರಾದ ಶ್ರೀ ನಾರಾಯಣ ಮೇಘಾಜಿ ಲೋಖಂಡೆಯವರ ನೇತೃತ್ವದ ಈ ಸಂಘದ ಆಂದೋಲನಕ್ಕೆ ಎಲ್ಲ ಸಹಾಯವನ್ನು ನೀಡಿದರು. ಮತ್ತೊಂದು ಕಡೆ ಜಮೀನ್ದಾರರ ಸುಲಿಗೆಯಿಂದ ಬೇಸತ್ತ ರೈತರಿಗೆ ಬೆಂಬಲವಾಗಿ ನಿಂತರು. ಅಂದರೆ ರೈತರಿಗೆ ಜಮೀನ್ದಾರ್ ಬ್ರಾಹ್ಮಣರ ಭೂಮಿಯನ್ನು ಉಳುಮೆ ಮಾಡಕೂಡದೆಂದು ಅವರನ್ನು ಸಂಘಟಿಸಿ ಉಳುವವನಿಗೆ ಭೂಮಿ ದೊರಕುವಂತೆ ಮಾಡಿದರು.

ಫುಲೆ ಅವರು ಬ್ರಾಹ್ಮಣ ಸಾಹಿತ್ಯ ಕುರಿತು ವೈಚಾರಿಕ ಪುಸ್ತಕಗಳನ್ನು ಬರೆದು ಶೂದ್ರರಲ್ಲಿಯೂ, ಅಸ್ಪೃಶ್ಯರಲ್ಲಿಯೂ ಜಾಗೃತಿಯನ್ನುಂಟು ಮಾಡಿದರು. ಮೇಲು ವರ್ಗದವರಿಂದ ಅವರಿಗೆ ಆಗುತ್ತಿದ್ದ ಮಾನಸಿಕ ದಾಸ್ಯದಿಂದ ಬಿಡುಗಡೆಯಾಗುವಂತೆ ಪ್ರೇರೇಪಿಸಿದರು. ಫುಲೆಯವರ ಕೃತಿಗಳೆಂದರೆ: ತೃತೀಯ ರತ್ನ ನಾಟಕ (1885), ಜಾತಿಭೇದ ವಿವೇಕಸಾರದ ಪ್ರಸ್ತಾವನೆ (1885), ಛತ್ರಪತಿ ಶಿವಾಜಿ ಅವರ ಪವಾಡ (1869), ಬ್ರಾಹ್ಮಣ ಕುಯುಕ್ತಿ (1869), ಗುಲಾಮಗಿರಿ (1873), ರೈತನ ಚಾಟಿ (1883), ಸತಾಸಾರ 1 ಮತ್ತು 2 ನೇ ಸಂಚಿಕೆಗಳು (1885), ಸತ್ಯಶೋಧಕ ಸಮಾಜ ರೀತ್ಯಾಮಂತ್ರಾದಿ ಸರ್ವ ಪ್ರಜಾವಿಧಿ (1982), ಸಾರ್ವಜನಿಕ ಸತ್ಯ ಧರ್ಮ (1891), ಹಾಗೂ ಮುಂತಾದ ಬಿಡಿಲೇಖನಗಳು.

ಫುಲೆಯವರ ಈ ಎಲ್ಲ ಚಟುವಟಿಕೆಗಳನ್ನು, ಹೋರಾಟವನ್ನು ಮಹಿಳೆಯರು, ಶೂದ್ರ ಮತ್ತು ಅಸ್ಪೃಶ್ಯ, ಜನಾಂಗ ಸದಾ ನೆನೆಪಿಸುತ್ತದೆ. ಮುಂದಿನ ದಲಿತ ಚಿಂತಕರು ಇವರಿಂದ ಮತ್ತು ಆಲೋಚನೆಯಿಂದ ಪ್ರಭಾವಿತರಾಗಿದ್ದಾರೆ ಈ ಮಾತು ಅಂಬೇಡ್ಕರ್‌ರನ್ನ ಒಳಗೊಂಡ ಎಲ್ಲಾ ಭಾರತೀಯ ಚಿಂತಕರಿಗೂ ಅನ್ವಯಿಸುತ್ತದೆ ಎಂದು ಹೇಳಬಹುದು.

**ಮಹಾತ್ಮಾ ಗಾಂಧೀಜಿ :**

ಭಾರತದ ರಾಷ್ಟ್ರೀಯ ಚಳುವಳಿಯಲ್ಲಿ ಅತಿ ಹೆಚ್ಚು ವ್ಯಾಪ್ತಿ ಪಡೆದುಕೊಂಡು, ಅಧ್ಯಯನಗಳಲ್ಲಿ ಮತ್ತೆ ಮತ್ತೆ ಹೆಚ್ಚು ಚರ್ಚೆಗೊಳ್ಳುತ್ತಿರುವವರು ಗಾಂಧೀಯವರು. ಅವರು ಭಾರತೀಯ ಸಾಮಾಜಿಕ, ರಾಜಕೀಯ ಚಳುವಳಿಗಳಲ್ಲಿ ಭಾಗವಹಿಸುವುದಕ್ಕಿಂತ ಮುಂಚೆ ಹಲವು ಸುಧಾರಣಾವಾದಿಗಳ ಜೊತೆಗೆ ಸಾಮಾಜಿಕ ವ್ಯವಸ್ಥೆಯಲ್ಲಿನ ಬದಲಾವಣೆಗೆ ಹಲವು ರೀತಿಯಲ್ಲಿ ಪ್ರಯತ್ನಿಸಿದರು. ಇಂಥ ಮೋಹನದಾಸ್ ಕರಮಚಂದಗಾಂಧಿ ಹುಟ್ಟಿದ್ದು ಅಕ್ಟೋಬರ್ 2 1869 ರಲ್ಲಿ ಬನಿಯಾ ಎಂಬ ಜಾತಿಯಲ್ಲಿ. ಅವರ ತಂದೆ ಕರಮಚಂದಗಾಂಧಿ

ತಾಯಿ ಪುತಳಿಬಾಯಿ. ಇವರು ಪೋರಬಂದರಿನ ದಿವಾನರು. ರಾಜಕೋಟೆ ಮತ್ತು ಕಾಥೇವಾಡ ಮುಂತಾದ ರಾಜ್ಯಗಳು ಇದಕ್ಕೆ ಸೇರಿದ್ದವು. ದೇಶ ಮತ್ತು ವಿದೇಶಗಳಲ್ಲಿ ಅಧ್ಯಯನ ಮುಗಿಸಿದ ಗಾಂಧೀಜಿಯವರು ನಂತರ ಮಂಬೈಯ ಹೈಕೋರ್ಟ್‌ನ ವಕೀಲರಾಗಿ ಸೇವೆ ಸಲ್ಲಿಸಿದರು. ಮುಂದೆ 1894 ರಲ್ಲಿ ನಟೆಲ್ ಇಂಡಿಯಾನ್ ಕಾಂಗ್ರೆಸ್ ಸ್ಥಾಪನೆ. 1895ರಲ್ಲಿ ಮತ್ತೆ ಭಾರತಕ್ಕೆ ವಾಪಸಾದರು. ಅಲ್ಲದೆ, ಭಾರತಕ್ಕೆ ಬಂದ ನಂತರ ನಟೆಲ್ ಮತ್ತು ಟ್ರಾನ್ಸಾವಾಲಾ ಭಾರತೀಯರ ಪರವಾಗಿ ಆಂದೋಲನ ಆರಂಭಿಸಿದರು. ಆಗ ದಕ್ಷಿಣ ಆಫ್ರಿಕಾದಲ್ಲಿದ್ದ ಭಾರತೀಯರ ಸಮಸ್ಯೆಗಳನ್ನು ಚೇಂಬರ್ಲಿನಾರವರಿಗೆ ತಿಳಿಸಿದರು. ಅಲ್ಲಿ ಅನೇಕ ಹುದ್ದೆಯಲ್ಲಿ ಹಲವು ಜವಾಬ್ದಾರಿಯನ್ನು ನಿಭಾಯಿಸಿದರಲ್ಲದೆ, ಭಾರತೀಯರ ಸಮಾನತೆಗಾಗಿ ಅನೇಕ ಚಳುವಳಿಗಳನ್ನು ಮಾಡಿದರು. 1915 ರಲ್ಲಿ ಭಾರತಕ್ಕೆ ಬಂದ ನಂತರ ಭಾರತದ ಸ್ವಾತಂತ್ರ್ಯ ಚಳುವಳಿ ಮತ್ತು ಮಹಿಳೆಯರ ಸಮಸ್ಯೆ ಹಾಗೂ ದಲಿತರ ಜೀವನ ಸ್ಥಿತಿ ಕುರಿತು ಅನೇಕ ಚಟುವಟಿಕೆಗಳನ್ನು ರೂಪಿಸಿದರು. ಹಿನ್ನಲೆಯಲ್ಲಿ ಗಾಂಧೀಜಿ ಸ್ವಾತಂತ್ರ್ಯ ಚಳುವಳಿಯನ್ನ ಪ್ರಥಮ ಆದ್ಯತೆ ಸ್ವೀಕರಿಸುವ ಮುಖಾಂತರ ಮಹಿಳೆ, ಜಾತಿಪದ್ಧತಿಯನ್ನು ನಂತರ ಆದ್ಯತೆಯಾಗಿ ಸ್ವೀಕರಿಸಿ ಅದರೊಂದಿಗೆ ತಳುಕು ಹಾಕಿದರು. ಅಂದರೆ ಭಾರತ ಸ್ವಾತಂತ್ರ್ಯಕ್ಕಾಗಿ ಅನೇಕ ಚಳುವಳಿ ಮಾಡಿದ ಗಾಂಧೀ ಜಿ, ಅದರ ಜೊತೆಗೆ ಭಾರತೀಯ ಸಾಮಾಜಿಕ ಕ್ಷೇತ್ರದ ಸುಧಾರಣೆಗೆ ಹಲವು ಹತ್ತು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಅವುಗಳು ಅವರ ದ್ವಂದ್ವ ಮುಖವನ್ನು ಬಿಚ್ಚಿ ತೋರಿಸುತ್ತವೆ.

ಅಂದರೆ ಹಿಂದೂ ಧಾರ್ಮಿಕ ವ್ಯವಸ್ಥೆಯಲ್ಲಿ ಅಚಲ ನಂಬಿಕೆ ಇಟ್ಟು ಚಾತುರ್ವರ್ಣವನ್ನು ಸಮರ್ಥಿಸುವ ಮಟ್ಟಿಗೆ ಅವರ ಮನೋಭೂಮಿಕೆ ಕಾರ್ಯ ಮಾಡಿದೆ. ಈ ಕ್ಷೇತ್ರದಲ್ಲಿ ಅಂಬೇಡ್ಕರ್‌ರ ಹೋರಾಟದಿಂದಾಗಿ ಗಾಂಧೀಜಿಯವರನ್ನು ಗುರುತಿಸಲಾರದೆ ಹೋದರೆ ಅವರ ಧ್ಯೇಯೋದ್ದೇಶಗಳು ಅರ್ಥವಾಗುವುದಿಲ್ಲ. ಗಾಂಧೀಜಿಯವರ ಧೋರಣೆ ಮಹತ್ವ ಪಡೆಯುವುದಿಲ್ಲ. ಕಾಂಗ್ರೆಸ್ ಮತ್ತು ಗಾಂಧೀಜಿ ಸ್ವಾತಂತ್ರ್ಯ ಹೋರಾಟದ ಉತ್ತುಂಗದಲ್ಲಿದ್ದಾಗ, ಅಂಬೇಡ್ಕರ್ ಅಸ್ಪೃಶ್ಯರ, ಮಹಿಳೆಯರ ಸ್ವಾತಂತ್ರ್ಯಕ್ಕಾಗಿ ಭಾರತೀಯ ಸವರ್ಣೀಯರ ಅದರಲ್ಲೂ ಕಾಂಗ್ರೆಸ್ ಮತ್ತು ಗಾಂಧೀಜಿಯವರ ವಿರುದ್ಧವಾಗಿ ಹೋರಾಟಕ್ಕಿಳಿದರು. ಅಸ್ಪೃಶ್ಯರ ಸ್ಥಿತಿ ಒಂದೇ ರೀತಿಯಾದುದ್ದನ್ನು ಮನಗಂಡ ಅಂಬೇಡ್ಕರ್‌ರು ತಮ್ಮದೇ ಆದ ಕಹಿ ಅನುಭವಗಳು ತಮ್ಮ ಜನರ ಶೋಚನೀಯ ಸ್ಥಿತಿಯೂ ಸೇರಿ, ಅವರ ಸಹನೆ ಕಟ್ಟೆಯೊಡೆದಾಗ ಅವರು ಬಂಡೆದ್ದರು. ರಾಜಕೀಯ ಮಹತ್ವಾಕಾಂಕ್ಷಿಗಳ ತೌರಾಗಿದ್ದ ಕಾಂಗ್ರೆಸ್ಸನ್ನು ತರಾಟೆಗೆ ತೆಗೆದುಕೊಂಡರು. "ಅಸ್ಪೃಶ್ಯರ ಏಳ್ಗೆಯಾಗದೆ ನಿಮ್ಮ ಸ್ವರಾಜ್ಯ ಕೇವಲ ದೂರದ ಕನಸಿನ ಮಾತು" ಎಂದು ಕಾಂಗ್ರೆಸ್ಸಿಗರ ವಿರುದ್ಧ ಗುಡುಗಿದರು. (ಡಾ.ಬಾ.ಅಂ.ಬ.ಭಾ: ಸ-9, ಪು.340)

ಬ್ರಿಟಿಷ್ ವಿರೋಧಿ ಶಕ್ತಿಗಳನ್ನು ಸಂಘಟಿಸಲು ವಿಶೇಷವಾಗಿ ಕಾರಣರಾಗಿದ್ದ ಗಾಂಧೀಜಿ ಇಲ್ಲಿಯ ಅಸಮತೆಯನ್ನು ಅಸ್ಪೃಶ್ಯತೆ ಮತ್ತು ಹಿಂದುಳಿದ ವರ್ಗಗಳ ಬಗೆಗಿನ ಕಾಂಗ್ರೆಸ್ ವಿರೋಧಿ ಧೋರಣೆಗಳನ್ನು ಮನಗಂಡರು. ಆ ವರ್ಗಗಳ ಹಿತಕ್ಕಾಗಿ ಹೋರಾಡಲು ಹೆಚ್ಚು ಹೆಚ್ಚು ಜಾಗೃತರಾದರು. ಆ ಬಳಿಕ 1922ರ ಬಾರ್ಡೋಲಿ ಕಾರ್ಯಕ್ರಮದಲ್ಲಿ ಅಸ್ಪೃಶ್ಯತೆಯ ಸಮಸ್ಯೆಯನ್ನು ಗಾಂಧೀಜಿ ಕಾಂಗ್ರೆಸ್ಸಿನ ಪ್ರಣಾಳಿಕೆಯಲ್ಲಿ ಸೇರಿಸಿದರು. ಗಾಂಧೀಜಿಯವರ ಈ ನಿಲುವಿನ ಬದಲಾವಣೆಯಲ್ಲಿ ಅಂಬೇಡ್ಕರ್‌ರ ಪಾತ್ರ ಹಿರಿದಾದದ್ದು. ಅಂಬೇಡ್ಕರ್‌ರ ಚಳುವಳಿ ತೀವ್ರಗೊಂಡಂತೆ ಅವರ ಟೀಕೆಗಳು ಹೆಚ್ಚು ಹರಿತವಾದಂತೆ ಗಾಂಧೀಜಿಯವರ ಹಿಂದೂ ಧರ್ಮದ ಬಗೆಗಿನ ಚಿಂತನೆಯಲ್ಲೂ ಪ್ರಗತಿಪರ ಬದಲಾವಣೆಯಾದದ್ದನ್ನು ಕಾಣಬಹುದು. ಉದಾಹರಣೆಗೆ 1921 ರಲ್ಲಿ ಹಿಂದೂ ಧರ್ಮಶಾಸ್ತ್ರಗಳು ಅಸ್ಪೃಶ್ಯತೆಯ ಬಗ್ಗೆ ಏನು ಹೇಳುತ್ತವೆಯೆಂಬ ವಿವಾದದಲ್ಲಿ ತಲೆಹಾಕಲು ನಿರಾಕರಿಸಿದ ಗಾಂಧೀಜಿಯವರು. 1933ರ ಹೊತ್ತಿಗೆ "ಅಸ್ಪೃಶ್ಯತೆಯನ್ನು ಸಮರ್ಥಿಸುವ ಹಿಂದೂ ಶಾಸ್ತ್ರಗಳನ್ನು ಇಡಿಯಾಗಿ ತಿರಸ್ಕರಿಸಬೇಕು" ಎನ್ನುವ ಮಟ್ಟಕ್ಕೆ ಬಂದಿದ್ದರು. (ಬಿ.ಯು.ಸುಮಾ: 2008: ಪು.40)

"ಅದೇ ರೀತಿ ವರ್ಣಾಶ್ರಮ ಧರ್ಮ, ಜಾತಿಗಳನ್ನು ಬಲವಾಗಿ ಆದರ್ಶೀಕರಿಸಿ ಸಮರ್ಥಿಸಿಕೊಳ್ಳುತ್ತಿದ್ದ ಗಾಂಧಿ. (ಯಂಗ್ ಇಂಡಿಯಾ, 22-2-1925) ಅಸ್ಪೃಶ್ಯತೆಯ ನಿವಾರಣೆಗೆ ಜಾತಿಗಳ ಮಧ್ಯದ ಅಂತರ ಹೋಗಲಾಡಿಸಲು, ಅಂತರ್‌ಜಾತಿ ವಿವಾಹ, ಭೋಜನಗಳು, ಅನಿವಾರ್ಯವೆನ್ನುತ್ತಿದ್ದ ಗಾಂಧಿ ನಂತರ "ಈಗ ನಿಜವಾದ ವರ್ಣಯಾವುದೂ ಇಲ್ಲ. ನನ್ನಲ್ಲಿ ಆ ಶಕ್ತಿ ಇದ್ದರೆ, ಎಲ್ಲ ವರ್ಣಗಳನ್ನು ಧಿಕ್ಕರಿಸಿ ನಾವೆಲ್ಲ ಒಂದೇ ವರ್ಣದವರು, ಹಿಂದುಗಳೆಂದು ಘೋಷಿಸಿ ಬಿಡುತ್ತಿದ್ದೆ" ಎನ್ನುವಲ್ಲಿಗೆ ತಲುಪಿದರು. (ಹರಿಜನ, 7, 8 ಜುಲೈ 1946). ಮದುವೆ ಊಟಗಳ ಬಗ್ಗೆಯೂ ಅವರ ಬದಲಾದ ನಿಲುವು ಗಮನಾರ್ಹ. ಅಂತರ್‌ಜಾತಿ ವಿವಾಹ ಭೋಜನಗಳನ್ನು ಸಂಪೂರ್ಣ ಒಪ್ಪಿದ್ದಲ್ಲದೆ ಅದಕ್ಕೂ ಮುಂದೆ ಹೋಗಿ ಅವರ ಪ್ರಭಾವಕ್ಕೆ ಒಳಗಾಗುವ ಎಲ್ಲಾ ಸವರ್ಣ ಹಿಂದು ಹುಡುಗಿಯರನ್ನು ಹರಿಜನ ಹುಡುಗರನ್ನು ಮದುವೆಯಾಗುವಂತೆ ಮನವೊಲಿಸುತ್ತೇನೆ ಎನ್ನುವ ಹೊತ್ತಿಗೆ ಗಾಂಧೀಜಿಯವರು ಅಂತರ್‌ಜಾತಿ ವಿವಾಹಗಳ ಜೊತೆಗೆ ಅಂತರ್‌ವರ್ಣ ವಿವಾಹಗಳನ್ನು ಒಪ್ಪಿಕೊಂಡರು. (ಹರಿಜನ 7-7-1946).

1930-32ರಲ್ಲಿ "ಲಂಡನ್‌ನಲ್ಲಿ ನಡೆದ ಚಕ್ರಾಧಿವೇಶನದಲ್ಲಿನ ಗಾಂಧೀಜಿಯವರ ಮಾತುಗಳು ಮಹಿಳೆ ಮತ್ತು ಅಸ್ಪೃಶ್ಯತೆ ಬಗೆಗಿನ ಧೋರಣೆಯನ್ನು ತೋರಿಸುತ್ತವೆ. ಅಧಿವೇಶನದಲ್ಲಿ ಮುಸಲ್ಮಾನರು, ಹಿಂದೂಗಳು, ಕ್ರಿಶ್ಚಿಯನ್ನರು, ಸಿಖ್ಖರು ಮತ್ತು ದಲಿತರು ಅಥವಾ ಅಸ್ಪೃಶ್ಯರು ಎಲ್ಲರನ್ನೂ ತಾವೇ ಪ್ರತಿನಿಧಿಸುತ್ತಿರುವುದಾಗಿ ಹೇಳಿಕೊಂಡು ಗಾಂಧೀಜಿ

ಓಡಾಡುತ್ತಿದರು. ಆದರೆ ಅವರಲ್ಲಿ ಯಾವ ವರ್ಗದ ಪ್ರತಿನಿಧಿಗಳು ಗಾಂಧೀಜಿಯವರ ಈ ಹೇಳಿಕೆಯನ್ನು ಒಪ್ಪಲಿಲ್ಲ. ಹಾಗೆಯೇ ಗಾಂಧೀಜಿಯವರು ಸಹ ಮುಸಲ್ಮಾನರು, ಕ್ರಿಶ್ಚಿಯನ್ನರು ಅಥವಾ ಸಿಖ್ಖರು ಯಾವ ಬೇಡಿಕೆಗಳನ್ನು ವಿರೋಧಿಸಲಿಲ್ಲ. ಆದರೆ ಭಾರತೀಯ ಸಮಾಜದಲ್ಲಿ ಅತ್ಯಂತ ದುರ್ಬಲರೆನಿಸಿದ ಅಸ್ಪೃಶ್ಯರ ಬೇಡಿಕೆಗಳನ್ನು ಮಾತ್ರ ನಿರ್ದಾಕ್ಷಿಣ್ಯವಾಗಿ ವಿರೋಧಿಸಿದರು. ಅವರ ಈ ವಿರೋಧ ಅಸ್ಪೃಶ್ಯವರ್ಗದ ಉದ್ಧಾರಕ್ಕಲ್ಲ, ಬದಲಾಗಿ ಅವರ ಹಿಂದೂ ಧರ್ಮದ ಪ್ರಾಬಲ್ಯಕ್ಕಾಗಿ. ಇದನ್ನವರು ರಾಜಾರೋಷವಾಗಿ ಲಂಡನ್‌ನ ರಾಜಮಹಲ್‌ನಲ್ಲಿ ಘೋಷಿಸಿದರು. ಮಾನವ ಸಂಘಟನೆಗೆ ಮಾರಕವಾದ ಅವರ ಹಿಂದೂ ಧರ್ಮಕ್ಕಾಗಿ ಅವರ ಈ ಘೋಷಣೆ ಲಂಡನ್‌ನ ಬರ್ಕಿಂಗ್‌ಹ್ಯಾಂ ಪ್ಯಾಲೆಸ್‌ನಲ್ಲಿ ಮೊಳಗಿತು. "ಯಾವಧರ್ಮ-ನ್ಯಾಯ ಸಮಾನತೆಯನ್ನೇ ಅಲ್ಲಗಳೆಯುವುದೋ ಯಾವಧರ್ಮ ಪ್ರಜಾತಂತ್ರದ ಅಡಿಗಲ್ಲಾದ ಸಮಾನತೆ, ಸ್ವಾತಂತ್ರ್ಯ, ಸಹೋದರತ್ವ ಉದಾತ್ತ ತತ್ವಗಳನ್ನು ಅಲ್ಲಗಳೆಯುವುದೋ ಆ ಧರ್ಮಕ್ಕಾಗಿ ಅವರ ಈ ಘೋಷಣೆ; ಯಾವ ಧರ್ಮ ತನ್ನ ಅಸ್ಪೃಶ್ಯತೆ ಮತ್ತು ಜಾತಿ ಪದ್ಧತಿಗಳಿಂದ ಮಾನವೀಯತೆಯನ್ನು ಪತನದ ಪಾತಾಳಕ್ಕೆ ತಳ್ಳುತ್ತಿದೆಯೋ ಆ ಧರ್ಮದ ಸಲುವಾಗಿ ಗಾಂಧೀಜಿ ಅಸ್ಪೃಶ್ಯರ ಜೀವನಾವಕಾಶದ ಮೂಲಭೂತ ನೀತಿಯಾದ ಮೀಸಲಾತಿಯನ್ನು ವಿರೋಧಿಸಿದರು." (ಬಿ.ಯು.ಸುಮಾ: 2008: ಪು,15–19)

ಆ ಕಾರಣಕ್ಕಾಗಿ ತಮ್ಮನ್ನು ಬಂಧಿಸಲ್ಪಟ್ಟ ಯರವಾಡ ಜೈಲಿನಲ್ಲಿ ಅಮರಣಾಂತ ಉಪವಾಸ ಕೂಡುತ್ತಾರೆ. ಗಾಂಧೀಜಿಯವರ ಪ್ರಾಣ ಉಳಿಸುವ ಜವಾಬ್ದಾರಿ ತನ್ನ ಮೇಲೆ ಬಿದ್ದ ಅಂಬೇಡ್ಕರ್ ದಲಿತರಿಗೆ ಪ್ರತ್ಯೇಕ ಚುನಾಯಿತ ಕ್ಷೇತ್ರಗಳ ಬದಲಿಗೆ ಜಂಟಿ ಮತದಾನ ಪದ್ಧತಿಯ ಒಪ್ಪಂದಕ್ಕೆ ಒಲ್ಲದ ಮನಸ್ಸಿನಿಂದ ಸಹಿ ಹಾಕುತ್ತಾರೆ. ಇದುವೇ 'ಪೂನಾ ಒಪ್ಪಂದ' (Poon Pact)ವೆಂದು ಪ್ರಸಿದ್ಧಿಯಾಗಿದೆ.

"ಗಾಂಧೀಜಿಯವರು ತಮ್ಮ ಜೀವಿತ ಕಾಲಾವಧಿಯಲ್ಲಿ ಸುಮಾರು 21 ಬಾರಿ ಸತ್ಯಾಗ್ರಹ ಮಾಡಿದಂತೆ ಇತಿಹಾಸದ ಅಧಿಕೃತ ದಾಖಲೆಗಳಿಂದ ತಿಳಿದುಬರುತ್ತದೆ. ಆದರೆ ತಮಗೆ ಪ್ರಿಯವಾದ ಅಸ್ಪೃಶ್ಯತಾ ನಿವಾರಣಾ ಚಳುವಳಿಯ ಯಾವ ಸಂದರ್ಭದಲ್ಲೂ ಈ ಸತ್ಯಾಗ್ರಹದಂತ ಅಸ್ತ್ರವನ್ನು ಒಂದೇ ಒಂದು ಬಾರಿಯು ಅವರು ಬಳಸಲಿಲ್ಲ ಎಂಬುದನ್ನು ಅಂಬೇಡ್ಕರ್ ಆಕ್ಷೇಪ." (ಮಧುಕೀಶ್ವರ್: 1993: ಪು,I-VI)

ಈ ಒಪ್ಪಂದದ ನಂತರವೇ ಗಾಂಧೀಜಿಯವರು ಅಸ್ಪೃಶ್ಯರ ಏಳಿಗೆಯ ವಿಷಯದಲ್ಲಿ ಅತೀವ ಆಸಕ್ತಿ ತಳೆಯುವುದು. 'ಹರಿಜನ ಪತ್ರಿಕೆ'ಯನ್ನು, ಹರಿಜನ ಸೇವಕ ಸಂಘವನ್ನು "ಹರಿಜನ" ಹೆಸರನ್ನು ಅಸ್ಪೃಶ್ಯತಾ ವಿರೋಧಿ ಸಂಘ ಮುಂತಾದವನ್ನೂ ಹುಟ್ಟು ಹಾಕಿರುವುದನ್ನು ಈ ಹಿನ್ನಲೆಯಲ್ಲಿ ನೋಡಬಹುದಾಗಿದೆ. ಅವರ ಆಧುನಿಕ ನಿಲುವುಗಳು

ಹೆಚ್ಚು ಹೆಚ್ಚು ಪ್ರಗತಿಪರವಾಗಿ ಬದಲಾಗುತ್ತಿತ್ತು. ಈ ಬದಲಾವಣೆಗಳ ಹಿಂದೆ ಅಂಬೇಡ್ಕರ್‌ರ ಕಾರ್ಯಚಟುವಟಿಕೆಗಳು ಮತ್ತು ಹಿಂದೂ ಧರ್ಮದ ಬಗೆಗಿನ ಸಂಶೋಧನಾತ್ಮಕ, ತೀವ್ರ ವಿಮರ್ಶೆಗಳು ಇದ್ದವೆಂಬುದನ್ನು ಮರೆಯುವಂತಿಲ್ಲ ನಿಜ. ಗಾಂಧೀಜಿಗೆ ಅಸ್ಪೃಶ್ಯರ ಬಗೆಗಿನ ಕಾಳಜಿ ಮೊದಲಿನಿಂದಲೂ ಇತ್ತು. ಆದರೆ ಅದು ಕಾರ್ಯರೂಪಕ್ಕೆ ಬಂದದ್ದು ಅಂಬೇಡ್ಕರ್ ವಿಮರ್ಶೆ ಚಟುವಟಿಕೆಗಳು ಹೆಚ್ಚಿದ ನಂತರವೇ ಎಂಬುವುದು ಗಮನಾರ್ಹ. ಈ ಎಲ್ಲಾ ಭಿನ್ನತೆ, ಗೊಂದಲಗಳ ನಡುವೆಯೂ ಗಾಂಧೀಜಿಯವರು ಕಾಂಗ್ರೆಸ್ ಸಂಸ್ಥೆಗೆ ಅಸ್ಪೃಶ್ಯತೆಯ ಹೋರಾಟದ ಮೂಲಕ ಒಂದು ಗೌರವ ತಂದುಕೊಟ್ಟರು. ರಾಷ್ಟ್ರಮಟ್ಟದಲ್ಲಿ ಅಸ್ಪೃಶ್ಯತೆಯ ಚರ್ಚೆ, ಸುಧಾರಣೆಗೆ ಗ್ರಾಸ ಒದಗಿಸಿದರು.

**ಪೆರಿಯಾರರಾಮಸ್ವಾಮಿನಾಯ್ಕರ್ :**

ಅಂಬೇಡ್ಕರ್ ಸಮಕಾಲೀನರಲ್ಲಿ ಪೆರಿಯಾರ ಸಹ ಪ್ರಮುಖರು. ಇವರು ಕರ್ನಾಟಕದ ಚಿತ್ರದುರ್ಗ ಮೂಲದವರು. ತಮಿಳುನಾಡಿನ ಈರೋಡಿನಲ್ಲಿ ನೆಲೆಸಿದ್ದ ಬಲಜ ನಾಯ್ಕರ್ ಮನೆತನಕ್ಕೆ ಸೇರಿದ ವೆಂಕಟಪ್ಪ ಹಾಗು ಚಿನ್ನತಾಯಮ್ಮ ದಂಪತಿಗಳಿಗೆ 1879 ನೆಯ ಸೆಪ್ಟಂಬರ್ 17 ರಂದು ರಾಮಸ್ವಾಮಿನಾಯ್ಕರ್ ಜನಿಸಿದರು. ರಾಮಸ್ವಾಮಿಯವರಿಗೆ ಒಬ್ಬ ಅಣ್ಣ – ಇಬ್ಬರು ತಂಗಿಯರಿದ್ದರು. ದೈವಭಕ್ತಿ-ಧರ್ಮಶ್ರದ್ದೆಗಳಲ್ಲಿ ಅವರಿಗೆ ಅಪಾರ ನಂಬಿಕೆಯಿದೆ. ವೆಂಕಟಪ್ಪನಾಯ್ಕರವರಿಗೆ ಸಂಪ್ರದಾಯವನ್ನು ತಿರಸ್ಕರಿಸುವ ವೈಚಾರಿಕ ಕ್ರಾಂತಿಕಾರಿ ಮಗ ರಾಮಸ್ವಾಮಿ ತುಂಬಾ ಸೂಕ್ಷ್ಮಮತಿಯಾಗಿದ್ದು ಇವರಿಗೆ ಪ್ರಕೃತಿಯೇ ಶಾಲೆಯಾಗಿತ್ತು. ಮುಂದೆ ಐದಾರನೇ ವರ್ಷಕ್ಕೆ ಶಾಲೆಗೆ ಸೇರಿದರು. ಅನೇಕ ಕಾರಣಗಳಿಂದಾಗಿ ಹತ್ತನೇ ವರ್ಷಕ್ಕೆ ರಾಮಸ್ವಾಮಿಯನ್ನು ಶಾಲೆ ಬಿಡಿಸಿದರು. ಆನಂತರ ಅಂಗಡಿ ವ್ಯಾಪಾರಕ್ಕೆ ಹಚ್ಚಿದರು. ಆ ಹೊತ್ತಿಗೆ ರಾಮಸ್ವಾಮಿಗೆ ಅಸ್ಪೃಶ್ಯರನ್ನು ದೂರವಿಡುವ ಮೇಲ್ಜಾತಿ ವ್ಯವಸ್ಥೆಯ ಅರಿವಾಯಿತು. ಇಂಥ ಸಂದರ್ಭದಲ್ಲೇ ರಾಮಸ್ವಾಮಿ ಪೌರಾಣಿಕ ಮತ್ತು ಮತೀಯಗ್ರಂಥಗಳನ್ನು ಅಧ್ಯಯನದ ಮೂಲಕ ಪರಿಶೀಲಿಸತೊಡಗಿದರು. ಅವರು ತಮ್ಮದೇ ಮಾನದಂಡದಿಂದ ವಿಮರ್ಶಿಸತೊಡಗಿದರು. ಆಗ ರಾಮಸ್ವಾಮಿಗೆ 19 ವರ್ಷ ವಯಸ್ಸು. ಅದ್ದರಿಂದ ಆತನ ತಂದೆ ತಾಯಿ 13 ವರ್ಷ ನಾಗಮ್ಮಳ ಜೊತೆ ಮದುವೆ ಮಾಡಿದರು. ಮದುವೆಯ ನಂತರ ದೇವರ ಮತ್ತು ಅಸ್ಪೃಶ್ಯರ ಒಡನಾಟ ವಿಷಯದಲ್ಲಿ ತಂದೆ ಮತ್ತು ಮಕ್ಕಳ ಜೊತೆ ವಾದವಿವಾದಗಳಾಗುತ್ತಿದ್ದವು. ಒಂದು ಸಲ ಹೆಣ್ಣಿಗೆ ಕಟ್ಟುವ ತಾಳಿ ಗುಲಾಮ ಸಂಕೇತ ಎಂದು ರಾಮಸ್ವಾಮಿ ತನ್ನ ಹೆಂಡತಿಯ ಕೊರಳಿನಲ್ಲಿದ್ದ ತಾಳಿ ಕಿತ್ತೆಸೆಯುವ ಸಂದರ್ಭದಲ್ಲಿ ತಂದೆಯೊಡನೆ ಕಲಹ ಉಂಟಾಗಿ ಮನೆ ಬಿಟ್ಟುಹೋಗುತ್ತಾರೆ. ಹಾಗೆಯೇ ನಂತರದಲ್ಲಿ ತಮ್ಮ ಬಂಧುಗಳ ವಿಧವೆಯೊಬ್ಬಳಿಗೆ ಮರುಮದುವೆ ಮಾಡಿಸಿ ಸಮಾಜದ ಕೆಂಗಣ್ಣಿಗೆ ಗುರಿಯಾಗುತ್ತಾರೆ.

1911ರ ನಂತರ ರಾಮಸ್ವಾಮಿ ಸ್ಥಳೀಯ ಸಂಸ್ಥೆಯ ರಾಜಕೀಯದಲ್ಲಿ ಒಬ್ಬ ಗಮನಾರ್ಹ ವ್ಯಕ್ತಿಯಾಗುತ್ತಾರೆ. ಇದೇ ಸಂದರ್ಭಕ್ಕೆ ಕಾಂಗ್ರೆಸ್‌ನ ನಾಯಕರು ಕಾಂಗ್ರೆಸ್ ಸೇರಲು ಒತ್ತಾಯಿಸುತ್ತಾರೆ. ಕಾಂಗ್ರೆಸ್ಸಿನ ಅಸ್ಪೃಶ್ಯತಾ ನಿರ್ಮೂಲನ, ಪಾನವಿರೋಧಿ ಆರ್ಥಿಕ ಸುಧಾರಣೆ ಈ ಮುಂತಾದ ಕಾರ್ಯಕ್ರಮಗಳನ್ನು ಮೆಚ್ಚಿಕೊಂಡ ರಾಮಸ್ವಾಮಿಯವರು 1921ರಲ್ಲಿ ಆ ಪಕ್ಷವನ್ನು ಸೇರಿ ರಾಜ್ಯಮಟ್ಟದ ನಾಯಕರಾಗುತ್ತಾರೆ. ತಮಿಳುನಾಡಿನ ಪ್ರಾಂತೀಯ ಅಧ್ಯಕ್ಷರಾಗಿ ಪಾನ ನಿರೋಧ ಚಳುವಳಿಯ ಮುಂದಾಳತ್ವವಹಿಸಿ, ತಮ್ಮ ತೋಟದಲ್ಲಿದ್ದ ತುಂಬು ಆದಾಯವನ್ನು ತರುತ್ತಿದ್ದ ಸಾವಿರಕ್ಕೂ ಹೆಚ್ಚಿನ ಈಚಲು ಮರಗಳನ್ನು ಕಡಿಸಿಹಾಕುತ್ತಾರೆ. ತಮ್ಮಲ್ಲಿ ಸಾಲ ತೆಗೆದುಕೊಂಡು ಹೋಗಿದ್ದ ಐವತ್ತು ಸಾವಿರ ರೂಪಾಯಿಗಳ ಅಡವು ಪತ್ರಗಳನ್ನು ಸುಟ್ಟುಹಾಕುತ್ತಾರೆ.

1924ರಲ್ಲಿ ರಾಮಸ್ವಾಮಿಯವರಿಗೆ ನಲವತ್ತೈದು ವರುಷ. ಆ ವರುಷ ಇಂಡಿಯಾ ದೇಶದಲ್ಲೇ ರಾಜಕೀಯ ಹಾಗೂ ಸಾಮಾಜಿಕ ಇತಿಹಾಸದಲ್ಲಿ ಅವರು ಮಾಡಿದ ಕೇರಳದ 'ವೈಕಂ' ದೇವಸ್ಥಾನ ಪ್ರವೇಶದ ಹೋರಾಟ ಅವರ ಬದುಕಿನ ಪ್ರಮುಖ ಮೈಲಿಗಲ್ಲು. ಅಸ್ಪೃಶ್ಯತಾ ಆಂದೋಲನದ ಇತಿಹಾಸದಲ್ಲಿ ಅತೀ ಮಹತ್ವಪೂರ್ಣವಾದದು.

ತಿರುವಾಂಕೂರು ಸಂಸ್ಥಾನದಲ್ಲಿ 'ವೈಕಂ' ಒಂದು ಚಿಕ್ಕ ಪಟ್ಟಣ. ವೈಕತ್ತಪ್ಪ ಆ ಊರಿನ ಅದಿದೈವ. ಆ ದೇವಸ್ಥಾನಕ್ಕೆ ಶೂದ್ರರು ಮತ್ತು ಅಸ್ಪೃಶ್ಯರು ಪ್ರವೇಶಿಸುವಂತಿರಲಿಲ್ಲ. ಅಷ್ಟೇ ಅಲ್ಲದೆ ಆ ದೇವಸ್ಥಾನದ ಬೀದಿಯಲ್ಲಿ ನಡೆದಾಡುವಂತೆಯೂ ಇರಲಿಲ್ಲ. ವೈಕಂ ದೇವಾಲಯ ಇದನ್ನು ಪ್ರವೇಶಿಸಲು ರೂಪಿಸಿದ್ದ ಚಳುವಳಿಯ ತಮಿಳುನಾಡಿನ ಕಾಂಗ್ರೆಸ್ ಕಾರ್ಯಕರ್ತರಾದ ಜಾರ್ಜ್‌ಜೋಸೆಫ್ ನೇತೃತ್ವ ವಹಿಸಿದ್ದರು. ಅವರು ಈ ಸಂದರ್ಭದಲ್ಲಿ ಸೆರೆಯಾದ ಬಳಿಕ ಜೈಲಿನಿಂದ ರಾಮಸ್ವಾಮಿಯವರು ಇದರ ನೇತೃತ್ವವಹಿಸುವಂತೆ ಕೇಳಿ ಗುಪ್ತವಾಗಿ ಒಂದು ಪತ್ರ ಕಳಿಸಿಕೊಡುತ್ತಾರೆ. ಕಾಂಗ್ರೆಸ್ ಪಕ್ಷದ ವಿರೋಧವಿದ್ದಾಗ್ಯೂ ಅದರ ಅಧ್ಯಕ್ಷ ರಾಯವರಿಗೆ ಸತ್ಯಾಗ್ರಹಕ್ಕೆ ಹೋಗುತ್ತಿರುವುದಾಗಿ ಪತ್ರ ಬರೆದರು. ರಾಮಸ್ವಾಮಿಯವರು ಅಲ್ಲಿಗೆ ಹೋಗುತ್ತಾರೆ. ಅವರನ್ನು ಸಂಘಟಿಸಿ ತಾವು ತಮ್ಮ ಪತ್ನಿ ನಾಗಮ್ಮ ಜೊತೆ ಸೇರಿ ಚಳುವಳಿ ಹೂಡುತ್ತಾರೆ. ಇದರಿಂದ ಗಾಬರಿಗೊಂಡ ಸರಕಾರ ಅವರಿಬ್ಬರನ್ನೂ ಬಂಧಿಸಿ ಒಂದು ತಿಂಗಳ ಕಾಲ ಜೈಲಿನಲ್ಲಿಟ್ಟಿತು. ಮುಂದೆ ಗಾಂಧೀಜಿ ಮತ್ತು ಅಲ್ಲಿಯ ಮಹಾರಾಣಿಯವರ ಮಧ್ಯ ಪ್ರವೇಶದಿಂದಾಗಿ ದೇವಾಲಯದ ಬೀದಿಯಲ್ಲಿ ಸಂಚರಿಸುವ ಅವಕಾಶ ಅಸ್ಪೃಶ್ಯರಿಗೆ ಕೊಡಲಾಗುತ್ತದೆಂದು ಸಾರಿದಾಗ ಕೆರಳಿದ ರಾಮಸ್ವಾಮಿ ಅವರು "ಬೀದಿಯಲ್ಲಿ ತಿರುಗಾಡಲು ಪ್ರವೇಶಾನುಮತಿ ನೀಡುವುದರಿಂದ ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡಿದಂತಾಗುವುದಿಲ್ಲ. ಇಷ್ಟಕ್ಕಾಗಿ ಸತ್ಯಾಗ್ರಹ ಮಾಡಬೇಕಾಗಿರಲಿಲ್ಲ. ಜೈಲುವಾಸ ಅನುಭವಿಸಬೇಕಾಗಿರಲಿಲ್ಲ"

(ಸಂ:ವಿರೂಪಾಕ್ಷಿ ಪೂಜಾರಹಳ್ಳಿ: 2007: ಪು.12) ಎಂದು ಹೇಳಿದರು. ಕಾಂಗ್ರೆಸ್ ಮಾಡಬೇಕಾದ ಮೊದಲ ಕೆಲಸವೆಂದರೆ ಅಸ್ಪೃಶ್ಯತಾ ನಿರ್ಮೂಲನೆ, ದೀನ-ದಲಿತರ ಸೇವೆ ಎಂದು ಪಟ್ಟು ಹಿಡಿದರು.

ಅದಕ್ಕಾಗಿ ಆ ಆಂದೋಲನದ ಮುಖವಾಣಿಯಾಗಿ "ಕುಡಿಯರಸು" ಎಂಬ ಪತ್ರಿಕೆಯನ್ನು ಪ್ರಾರಂಭಿಸಿ ಅದರಲ್ಲಿ ತೊಡಗಿಕೊಳ್ಳುತ್ತಾರೆ. ಸ್ವಾಭಿಮಾನಿ ಚಳುವಳಿಯ ಮೊದಲನೆಯ ಸಮ್ಮೇಳನ 1929 ರಲ್ಲಿ ಫೆಬ್ರವರಿ ತಿಂಗಳ 17 ಮತ್ತು 18ನೇಯ ದಿನಗಳಂದು ಚಂಗಲ್‌ಪೇಟೆಯಲ್ಲಿ ನಡೆಯುವುದರೊಂದಿಗೆ ಬ್ರಾಹ್ಮಣೇತರ ಚಳುವಳಿಗೆ ಒಂದು ಸ್ಪಷ್ಟ ರೂಪ ಬರುತ್ತದೆ. ಅಣ್ಣಾದೊರೈ ಮೂಲಕ ಅಮೇರಿಕೆಯ ತತ್ವಜ್ಞಾನಿ ಇಂಗರ್‌ಸಾಲನ ತತ್ವಜ್ಞಾನದ ಪರಿಚಯವಾಗುತ್ತದೆ. ಜೊತೆಗೆ ರಸೆಲ್, ಸಾರ್ತ್ರೆ, ಬರ್ನಾಡ್ ಷಾ, ಲೂಥರ್ ಮೊದಲಾದವರ ವಿಚಾರಧಾರೆಯನ್ನು ಬೇರೆಯವರ ಮೂಲಕ ಇಂಗ್ಲಿಷ್‌ನಿಂದ ಅನುವಾದಿಸಿ ಅಧ್ಯಯನ ಮಾಡುವುದರ ಮೂಲಕ ಅವರ ವೈಚಾರಿಕತೆಗೆ ಪರಿಪಕ್ವತೆ ಒದಗುತ್ತದೆ. ಇದರಿಂದಾಗಿ ರಾಮಸ್ವಾಮಿ ನಾಯ್ಕರ್ ಅವರು ಕುಡಿಯರಸು, ವಿಡುತ್ತಲೈ, ಉಣ್ಣೀ ಪತ್ರಿಕೆಗಳ ಮೂಲಕ ತಮ್ಮ ವಿಚಾರಗಳನ್ನು, ಬ್ರಾಹ್ಮಣೇತರ ಚಳುವಳಿ ಸಂಗತಿಗಳನ್ನು ಧಾರೆಯೆರೆದು ಬ್ರಾಹ್ಮಣೇತರ ಚಳುವಳಿಯನ್ನು ಗಟ್ಟಿಗೊಳಿಸುತ್ತಾರೆ.

ಅವರ ಪ್ರಮುಖ ಬರಹಗಳೆಂದರೆ: "ಪಂಚಪತಿವೃತೆಯರು; ಪವಿತ್ರಸ್ಥಳಗಳ ಒಗಟು; ಹಳಸಾಚಾರ್ರದೇವರು; ಆಯುಧಪೂಜೆ; ಅರಿವಿಗೆ ಒಪ್ಪುವ ಪೂಜೆಯೇ?; ದಶಾವತಾರಗಳ ತಪಾಸಣೆ; ರಾಮಾಯಣದಲ್ಲಿನ ಪಾತ್ರಗಳು; ಹಳಸಾಚಾರ್ರ ವರಮಾನತಂತ್ರ; ಸಮಾಜವಾದ; ಮುಂಬರಲಿರುವ ಜಗತ್ತು; ಹಾದರ ಎಂದರೇನು?; ವಿಭೂತಿಯನ್ನು ಧರಿಸುವುದೇಕೆ?; ಅಲ್ಲದೇ ಮಹಿಳೆಯರ ಬಗ್ಗೆ ಬರೆದ ಅಸಂಖ್ಯಾತ ಪ್ರಬಂಧಗಳು, ದೇವರು-ಮತ, ಪುರಾಣಗಳ ಕುರಿತು ಅವುಗಳ ಪೊಳ್ಳುನಂಬಿಕೆಗಳನ್ನು ಕುರಿತು ಸಂವಾದ ರೂಪದ ಅನೇಕ ಚಿಕ್ಕ ನಾಟಕಗಳಾಗಿವೆ." (ಅದೇ, ಪು.235)

ಪೆರಿಯಾರ ಎತ್ತುವ ಪ್ರಶ್ನೆಗಳಿಗೆ ಅಂದು ಯಾವ ಬ್ರಾಹ್ಮಣ ಜಾಣನಿಗೂ ನಿಖರವಾಗಿ ಉತ್ತರಿಸಲು ಆಗಲಿಲ್ಲ. ಬ್ರಾಹ್ಮಣ ಪರ ಸಾಹಿತ್ಯ ದೇವರುಗಳನ್ನು ಅವಮಾನಕ್ಕೀಡಾಗುವಂತೆ ಮಾಡಿದ ರಾಮಸ್ವಾಮಿ ನಾಯ್ಕರ್ ಅವರ ದ್ರಾವಿಡ ಸಂಸ್ಕೃತಿಯ ಪರಿಕಲ್ಪನೆಗಳನ್ನು ಎತ್ತಿಹಿಡಿದರು. ಅದಕ್ಕಾಗಿಯೇ ಇಂದು ದಕ್ಷಿಣ ಭಾರತದಲ್ಲಿ ರಾವಣನ ಉತ್ಸವದಲ್ಲಿ ರಾಮನ ಮೂರ್ತಿಯನ್ನು ದಹಿಸಲಾಗುತ್ತದೆ. ಶೂದ್ರ ಮತ್ತು ಅಸ್ಪೃಶ್ಯರ ಸಂಸ್ಕೃತಿಯೇ ಉತ್ತಮವಾದುದು ಎಂಬುದನ್ನೂ ಬ್ರಾಹ್ಮಣೇತರರಿಗೆ ತಮ್ಮ ಕುರಿತು ಸ್ವಾಭಿಮಾನ ಮೂಡಬೇಕೆಂಬುವುದೇ ಅವರ ವಾದವಾಗಿತ್ತು. ಮುಂದೆ 1952 ರಲ್ಲಿ ನೋಂದಾವಣೆಗೊಂಡ ಈ ಚಳುವಳಿ ತನ್ನ ಧ್ಯೇಯೋ

ದ್ದೇಶಗಳನ್ನು ಸ್ಪಷ್ಟವಾಗಿ ವಿವರಿಸಿತು. ಅವು ಹೀಗಿವೆ : ೧. ರಾಜಕೀಯ ಶಿಕ್ಷಣ ವ್ಯವಸ್ಥೆ. ೨. ದಾಸ್ಯ ವಿಮುಕ್ತಿ ಸ್ವತಂತ್ರ ವಾತಾವರಣ ನಿರ್ಮಾಣ. ೩. ಅನವಶ್ಯ ಸಂಪ್ರದಾಯಗಳ, ಅರ್ಥಹೀನ ಆಚರಣೆಗಳ ಮತ್ತು ಮೂಢನಂಬಿಕೆಗಳ ನಿರಾಕರಣೆ. ೪. ಜಾತಿ ಮತ್ತು ವೃತ್ತಿಗಳನ್ನಾಧರಿಸಿದ ಹಾಗೂ ಅಸಮಾನತೆಯನ್ನು ಪುರಸ್ಕರಿಸುವ ಸಾಮಾಜಿಕ ವ್ಯವಸ್ಥೆಯ ಮೂಲೋಚ್ಚಾಟನೆ. ೫. ಅಸ್ಪೃಶ್ಯತೆಯ ನಿರ್ಮೂಲನೆ ಹಾಗು ಭ್ರಾತೃತ್ವದ ತಳಹದಿಯ ಮೇಲೆ ಸುಭದ್ರ ಸಮಾಜದ ಸ್ಥಾಪನೆ. ೬. ಸ್ತ್ರೀಯರ ಸಮಾನ ಹಕ್ಕುಗಳ ನೀಡಿಕೆ. ೭. ಸಿವಿಲ್ ಕಾನೂನಿನ ಮೇರೆಗೆ ನೋಂದಾಯಿಸಿಕೊಂಡು ಅಂತರ್‌ಜಾತಿಯ, ಅಂತರ್ ಹಾಗೂ ವಿಧವಾ ವಿವಾಹಗಳಿಗೆ ಪ್ರೋತ್ಸಾಹ. ೮. ಅನಾಥ ಮತ್ತು ವಿಧವಾ ಮಂದಿರಗಳ, ಶಿಕ್ಷಣ ಸಂಸ್ಥೆಗಳ ಸ್ಥಾಪನೆ, ಇಂತಹ ಮಹೋನ್ನತ ಗುರಿಗಳಿಗಾಗಿ ಹೋರಾಡಿದ. ದಕ್ಷಿಣ ಭಾರತದ ಕ್ರಾಂತಿಕಾರಿ, ವಿಚಾರವಾದಿ ಪೆರಿಯಾರ ರಾಮಸ್ವಾಮಿ ನಾಯ್ಕರ್‌ರವರು. ಬ್ರಾಹ್ಮಣರ ಬೌದ್ಧಿಕ, ಆರ್ಥಿಕ, ರಾಜಕೀಯ ದಬ್ಬಾಳಿಕೆಯ ವಿರುದ್ಧ ಹೋರಾಡಿದರು. ಇದಕ್ಕಾಗಿ ಜಸ್ಟಿಸ್ ಪಾರ್ಟಿಯ ಎ.ರಾಮಸ್ವಾಮಿ ಮೊದಲಿಯರ್ ಅವರು ಪೆರಿಯಾರ ಅವರನ್ನು "ಈ ಶತಮಾನದ ರುಸೋ" ಎಂದು ಕರೆದರು.

ಸಾಮಾಜಿಕ, ರಾಜಕೀಯ ಚಳುವಳಿಯ ನಾಯಕರುಗಳಾದ ಅಂಬೇಡ್ಕರ್, ಡಾ॥ರಾಮಮನೋಹರ್ ಲೋಹಿಯಾ ಮುಂತಾದವರೊಂದಿಗೆ ಸಹಮತವಿದ್ದು, ಅವರೊಂದಿಗೆ ಸಹಕರಿಸಿದ ಪೆರಿಯಾರ ರಾಮಸ್ವಾಮಿನಾಯ್ಕರ್ 24.02.1973 ರಂದು ಅಸ್ತಂಗತರಾದರು.

**ಡಾ॥ ರಾಮಮನೋಹರ್ ಲೋಹಿಯಾ:**

ಆಧುನಿಕ ಭಾರತದಲ್ಲಿ ಸಮಾಜವನ್ನು ಪ್ರತಿಪಾದಿಸಿದ ಸಾಮಾಜಿಕ ಹೋರಾಟಗಾರರಲ್ಲಿ ಲೋಹಿಯಾ ಕೂಡ ಪ್ರಮುಖರು. ಮೂರನೆಯ ಜಗತ್ತಿನ ಸಮಾಜವಾದಿಗಳ ಪೈಕಿ ಒಂಟಿಯಾಗಿ ನಿಂತು ಸಮಾಜವಾದಿ ತತ್ವದರ್ಶನಕ್ಕೆ ಹೊಸದಿಕ್ಕು ನೀಡಿದವರು. ಇವರು ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ವೈಚಾರಿಕ ತಳಹದಿಯಲ್ಲಿ ಹೋರಾಟ ಮಾಡಿದವರಲ್ಲಿ ಲೋಹಿಯಾ ಪ್ರಮುಖರಾಗುತ್ತಾರೆ. ಅವರು ಭಾರತೀಯ ಪರಿಸ್ಥಿತಿಗೆ ಮಾರ್ಕ್ಸ್‌ವಾದ ಅಸಂಗತವೆಂದೇ ಭಾವಿಸಿದ್ದರು. ವರ್ಗ ಹೋರಾಟವು ಜಾತಿಯ ಪಾತಳಿಯ ಮೇಲೆ ನಿಂತ ಭಾರತಕ್ಕೆ ಸಮರ್ಥ ಚಿಕಿತ್ಸೆಯಾಗಲಾರದೆಂದು ಭಾವಿಸಿದ್ದರು. ದೇಶದ ರಾಜಕೀಯದಲ್ಲಿ ಅಂಬೇಡ್ಕರ್ ನಂತರ ತನ್ನದೇ ಆದ ವಿಚಾರಧಾರೆಗೆ ಹೆಸರಾದವರಲ್ಲಿ ಲೋಹಿಯಾ ಪ್ರಮುಖರು.

ಇಂಥ ಸಾಮಾಜಿಕ ಹೋರಾಟದ ರಾಜಕಾರಣಿ ಹುಟ್ಟಿದ್ದು ಉತ್ತರಪ್ರದೇಶ ಫೈಜಾಬಾದ್ ಜಿಲ್ಲೆಯ ಅಕ್ಬರ್‌ಪುರದಲ್ಲಿ. 1910 ಮಾರ್ಚ್ 23 ರಂದು ಜನಿಸಿದರು. ಮಾರವಾಡಿ

ಕುಟುಂಬದ ಹೀರಾಲಾಲ ಮತ್ತು ಚಂದಾ ಅವರು ರಾಮಮನೋಹರ್ ತಂದೆತಾಯಿಗಳು. ಪ್ರಾಥಮಿಕ ಶಿಕ್ಷಣವನ್ನು ತಂದೂನ್ ಪಾಠಶಾಲೆ ಹಾಗೂ ಪ್ರೌಢಶಿಕ್ಷಣವನ್ನು ಅಕ್ಬರ್‌ಪುರದ್ ವಿಶ್ವೇಶ್ವರನಾಥ ಪ್ರೌಢಶಾಲೆಯಲ್ಲಿ ಮುಗಿಸಿದ ಅವರು 1925ರಲ್ಲಿ ಮುಂಬೈ ವಿಶ್ವವಿದ್ಯಾಲಯದ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣರಾದರು. ಎ.ಎಂ.ಯನ್ನು 1927ರಲ್ಲಿ ಬನಾರಸ್ ಹಿಂದೂ ವಿಶ್ವವಿದ್ಯಾಲಯದಿಂದ; ಆನರ್ಸ್ ಪದವಿಯನ್ನು 1929ರಲ್ಲಿ ವಿದ್ಯಾಸಾಗರ ಕಾಲೇಜ್ ಕಲ್ಕತ್ತಾದಿಂದ ಪಡೆದರು. 1932 ರಲ್ಲಿ ಜರ್ಮನಿಯ ಬರ್ಲಿನ್ ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ "ಉಪ್ಪಿನ ಸತ್ಯಾಗ್ರಹ ಮತ್ತು ನಾಗರಿಕ ಕಾನೂನು ಭಂಗ" ಎಂಬ ವಿಷಯದಲ್ಲಿ ಪ್ರೌಢಪ್ರಬಂಧ ಬರೆದು ಪಿ.ಹೆಚ್.ಡಿ. ಪದವಿ ಪಡೆದರು ಜರ್ಮನ್ ಭಾಷೆಯಲ್ಲಿ ಮಾರ್ಕ್ಸ್ ಮತ್ತು ಹೆಗೆಲ್‌ರ ಕೃತಿಗಳನ್ನು ಅಭ್ಯಸಿಸಿದ ಲೋಹಿಯಾ ಅವರಿಬ್ಬರಿಗಿಂತಲೂ ಭಿನ್ನವಾಗಿ ಚರಿತ್ರೆಯನ್ನು ಅರಿಯುವ ಅಗತ್ಯ ಕುರಿತು ಚಿಂತಿಸಿದರು.

ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ 1926 ರಲ್ಲಿ ಗೌಹತಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನದಲ್ಲಿ ಭಾಗವಹಿಸಿದ್ದ ಲೋಹಿಯಾ 1932ರಲ್ಲಿ ವ್ಯಾಸಂಗ ಮುಗಿಸಿ, ಬರ್ಲಿನ್‌ದಿಂದ ವಾಪಾಸ್ಸಾದಾಗ, ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿ ತೀವ್ರತರವಾಗಿತ್ತು. ಇದರ ನಾಯಕತ್ವವನ್ನು ಕಾಂಗ್ರೆಸ್ ಪಕ್ಷ ವಹಿಸಿತ್ತು. ಕಾಂಗ್ರೆಸ್ ನೇತೃತ್ವದ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡ ಲೋಹಿಯಾ ಬರೀ ಬ್ರಿಟಿಷರನ್ನು ಭಾರತದಿಂದ ಓಡಿಸುವುದಕ್ಕಷ್ಟೆ ಸೀಮಿತವಾಗಿದ್ದ ಕಾಂಗ್ರೆಸ್ ಧೋರಣೆಯಿಂದಾಗಿ ಅದರಿಂದ ಹೊರಬಂದರು. ಭಾರತದ ಜಾತಿ ಮತ್ತು ವರ್ಗ ವೈರುಧ್ಯಗಳ ಬಗ್ಗೆ ವೈಚಾರಿಕ ನಿಲುವನ್ನು ತಳೆದಿದ್ದ ಲೋಹಿಯಾ ಮತ್ತು ಅವರ ಸಮಚಿಂತಕರಾದ "ಆಚಾರ್ಯ ನರೇಂದ್ರದೇವ, ಅಶೋಕ ಮೆಹತ್, ಮೀನುಸಾನಿ, ಅರುಣಾ ಅಸಫ್ ಆಲಿ ಮುಂತಾದವರೊಡಗೂಡಿ 1934 ರಲ್ಲಿ ಕಾಂಗ್ರೆಸ್ ಸಮಾಜವಾದಿ (ಸೋಷಲಿಸ್ಟ್) ಗುಂಪನ್ನು ಸ್ಥಾಪನೆ ಮಾಡಿದರು. ಕಾಂಗ್ರೆಸ್ಸಿಗರಲ್ಲಿ ಬ್ರಿಟಿಷರ ವಿರುದ್ಧ ಹೋರಾಡುವ ಉತ್ಸಾಹ ಇತ್ತೆ ವಿನಹಃ ಭಾರತದಲ್ಲಿ ಕಿತ್ತು ತಿನ್ನುತ್ತಿದ್ದ ಬಡತನ, ಅನಕ್ಷರತೆ, ಅಜ್ಞಾನ ಇವುಗಳ ಬಗ್ಗೆ ಯಾವುದೇ ತರಹದ ಚರ್ಚೆಗಳು ಕಾಂಗ್ರೆಸ್ಸಿಗರಿಗೆ ಗೊತ್ತೇ ಇರಲಿಲ್ಲ. ಹಾಗಾಗಿ ಈ ಗುಂಪು ಪ್ರಗತಿಪರವಾಗಿ ಚಿಂತಿಸುವ ತನ್ನ ನೆಲೆಗೆ ಒತ್ತುಕೊಟ್ಟಿತು. ಮುಂದೆ 1936-38ರ ವರೆಗೆ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ವಿದೇಶಾಂಗ ವ್ಯವಹಾರ ವಿಭಾಗದ ಕಾರ್ಯದರ್ಶಿಯಾಗಿ ದುಡಿದರು. 24 ಮೇ 1939ರಲ್ಲಿ ಬ್ರಿಟಿಷ್ ವಿರೋಧಿ ಭಾಷಣಕ್ಕಾಗಿ, 1940 ಮೇ ಮತ್ತು 1942 ರ ಚಲೇಜಾವ್ ಚಳುವಳಿಗೆ ಭೂಗತವಾಗಿ ಹೋರಾಡುತ್ತಿದ್ದ ಕಾರಣಕ್ಕಾಗಿ ಹಾಗೂ 1946 ರ ಜೂನ್ 6 ರಂದು ಗೋವಾ ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟಿಷ್ ಸರಕಾರ ಇವರನ್ನು ಬಂಧಿಸಿತು. ಮುಂದೆ

1946ರಲ್ಲಿ ಕಾಂಗ್ರೆಸ್ ಪಕ್ಷ ತನ್ನ ಪಕ್ಷದ ಕಾರ್ಯದರ್ಶಿಯಾಗುವಂತೆ ನೀಡಿದ ಆಹ್ವಾನವನ್ನು ಕೂಡ ಲೋಹಿಯಾ ತಿರಸ್ಕರಿಸಿದರು. (ಓ.ಎಲ್.ಎನ್: ಪು.543)

ಗಾಂಧೀಜಿಯವರ ಅನುಯಾಯಿಯಾಗಿದ್ದ ಲೋಹಿಯಾ ಗಾಂಧೀಜಿ ಮರಣದ ನಂತರ 1952ರಲ್ಲಿ ಜೆ.ಬಿ.ಕೃಪಲಾನಿಯವರ ಕೃಷಿಕ ಮಜಂದಾರ ಪ್ರಜಾಪಕ್ಷದೊಂದಿಗೆ ವಿಲೀನವಾಗುವುದರ ಮೂಲಕ ಪ್ರಜಾಸೋಷಲಿಸ್ಟ್ ಪಕ್ಷ ಸ್ಥಾಪನೆಗೆ ದುಡಿದು ಅವರ ಕಾರ್ಯದರ್ಶಿಯಾದರು. ಹಲವು ಕಾರಣಗಳಿಗಾಗಿ ಈ ಪಕ್ಷವನ್ನು ತ್ಯಜಿಸಿ ಮುಂದೆ 1955 ರ ಡಿಸೆಂಬರ್‌ನಲ್ಲಿ ಸಮಾಜವಾದಿಗಳೆಲ್ಲ ಒಟ್ಟಾಗಿ ಸಮಾಜವಾದಿ ಪಕ್ಷ ಸ್ಥಾಪಿಸುತ್ತಾರೆ. ಲೋಹಿಯಾ ಅದರ ಅಧ್ಯಕ್ಷರಾಗಿ ಆಯ್ಕೆಯಾಗುತ್ತಾರೆ. 1956 ರಲ್ಲಿ ಇಂಗ್ಲಿಷ್ ಪತ್ರಿಕೆ "ಮ್ಯಾನ ಕೈಂಡ" ಸ್ಥಾಪಿಸಿ ಅದರ ಪ್ರಧಾನ ಸಂಪಾದಕರಾಗಿ ಅಪಾರ ಜನಪರ ವೈಚಾರಿಕ ಲೇಖನಗಳ ಮೂಲಕ ಜನಜಾಗೃತಿಗೆ ತೊಡಗುತ್ತಾರೆ. ಜನವಿರೋಧಿ ಸರಕಾರಗಳನ್ನು ತೀವ್ರ ತರಾಟೆಗೆ ಒಡ್ಡುತ್ತ "ಸಪ್ತಕ್ರಾಂತಿ"ಗಾಗಿ ಸಮಾಜವಾದವನ್ನು ಗಟ್ಟಿಗೊಳಿಸುತ್ತಾರೆ. 1962ರಲ್ಲಿ ನೆಹರು ವಿರುದ್ಧ ಲೋಕಸಭೆಗೆ ಸ್ಪರ್ಧಿಸಿ ಸೋತ ಲೋಹಿಯಾ 1963 ರಲ್ಲಿ ಫರೂಕಾಬಾದ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾಗುತ್ತಾರೆ. ಮತ್ತೆ 1967 ರಲ್ಲಿ ಕನೌಜ ಕ್ಷೇತ್ರದಲ್ಲಿ ಮತ್ತೇ ಲೋಕಸಭೆಗೆ ಆಯ್ಕೆಯಾಗಿ ಅಧಿವೇಶನದಲ್ಲಿ ಆಡಳಿತಪಕ್ಷದ ಲೋಪದೋಷಗಳ ಕುರಿತ ಮುಕ್ತ ಚಿಂತನೆಗೆವಾದಿಸುತ್ತಾರೆ.

ದೇಶಸೇವೆಗಾಗಿ ದಲಿತ ಶೂದ್ರ, ಸ್ತ್ರೀ-ರೈತ ವಿಮೋಚನೆಯ ಹೋರಾಟಕ್ಕಾಗಿ ಅವಿವಾಹಿತರಾಗಿಯೇ ಉಳಿದ ಲೋಹಿಯಾ 1967 ರಲ್ಲಿ ಎಲ್ಲಿಂಗಾಡನ್ ಆಸ್ಪತ್ರೆಯಲ್ಲಿ ನಿಧನ ಹೊಂದಿದರು.

ಉತ್ತಮ ಚಿಂತಕರಾಗಿದ್ದ ಲೋಹಿಯಾ ಉತ್ತಮ ಬರಹಗಾರರೂ ಆಗಿದ್ದರು. "ಮ್ಯಾನ್ ಕೈಂಡ್" (ಇಂಗ್ಲಿಷ್) ಹಾಗೂ "ಚೌಕಂಜಾ" (ಹಿಂದಿ) ನಿಯತಕಾಲಿಕ ಪತ್ರಿಕೆಗಳ ಸಂಪಾದಕರಾಗಿದ್ದ ಅವರು ಅಸಂಖ್ಯಾತ ಬಿಡಿ ಬರಹಗಳನ್ನು ಬರೆದಿದ್ದಾರೆ. ಅವರ ಕೃತಿಗಳು ಅವರ ಎಂಥ ವೈಚಾರಿಕ ಬರಹಗಾರರೆಂಬುದನ್ನು ಅರಹುತ್ತವೆ. ಇಂಗ್ಲಿಷ್ ಮತ್ತು ಹಿಂದಿ ಭಾಷೆಯಲ್ಲಿರುವ ಅವರ ಪ್ರಮುಖ ಕೃತಿ ಹೀಗಿವೆ.

An Interval During Politics; Fragments of a world mind; Quality man of India's Partition; India; China and Northern Frontiers; Language; Marx, Gandhi and Socilism; Rupee 25,000/- A day; The Caste System; The Mystery of Sir Stafford Cripss; Wheel of History; Will to Power; Note and comment Vol I and II: Fundamentals of a World Mind; Foreign Policy. ಹಾಗೂ ಹಿಂದಿಯಲ್ಲಿ ಸಮಾಜವಾದಿ; ಆಂದೋಲನ ಕಾ ಇತಿಹಾಸ್; ಲೋಕ್‌ಸಭಾ ಮೆ ಲೋಹಿಯಾ (ಸಂಪುಟಗಳು); ಹಿಂದೂ

ಔರ–ಮುಸಲ್ಮಾನ್; ಸುಧಾರೋ ಅಥವಾ ಮಾಜೋಅನ್ನ ಸಮಸ್ಯೆ; ಉತ್ತರಪ್ರದೇಶ ಜಾರಾ ಬಿಹಾರಕೆ ದೌರೋಂಕೆ ಕುಚ್ ಅನುಭವ್; ಅಜಾದ್ ಹಿಂದೂಸ್ತಾನ ಕೀ ನಯೀ ರುದಾ ಹಾನ್; ಜರ್ಮನ್ ಸೋಷಲಿಸ್ಟ್ ಪಾರ್ಟಿ; ನರಮಾ ಔರ್ ಗರಮ್ ಪಂಥ; ಮಟ್ಟಿ ಔರ್ ರುಜಾತ್ ಗಾಂಧೀವಾದ.

"ಅವರ ಬರಹಗಳು ಅವರ ವ್ಯಕ್ತಿತ್ವ ಮತ್ತು ಸಿದ್ಧಾಂತವನ್ನು ಪ್ರತಿಬಿಂಬಿಸುತ್ತದೆ. ಅವರ ಬರಹಕ್ಕೆ ಮಾತ್ರ ಸೀಮಿತವಾಗಿದರೆ ಪ್ರಾಯೋಗಿಕ ರಾಜಕಾರಣಿಯಾಗಿದ್ದರು. ಇಂಡಿಯಾದ ವರ್ಗ, ಜಾತಿ, ವರ್ಣ, ಲಿಂಗಭೇದ ನೀತಿಯ ಸೂಕ್ಷ್ಮಗಳ ಬಗ್ಗೆ ಅಸ್ಪೃಶ್ಯತೆ, ಮೌಢ್ಯ ಕೀಳರಿಮೆಗಳು ಯಾವುದೇ ರಾಷ್ಟ್ರವನ್ನು ಇನ್ನಿಲ್ಲದಂತಹ ವಿಕಾರ ತುಂಬಿತ ಅವನತಿಗೆ ತಳ್ಳಬಹುದಾದ ಭಯಂಕರ ಸ್ಥಿತಿಯ ಬಗ್ಗೆ ಚೆನ್ನಾಗಿ ಅರಿತುಕೊಂಡಿದ್ದ ಅವರು ಪ್ರಜಾಪ್ರಭುತ್ವ ವಿಕೇಂದ್ರೀಕರಣ ಮತ್ತು ಅಹಿಂಸೆಯ ಹಾದಿಯನ್ನು ಆಯ್ಕೆಮಾಡಿಕೊಂಡು ಮಾನವೀಯ ಮೌಲ್ಯಗಳಿಗಾಗಿ ಕೆಚ್ಚಿನಿಂದ ಹೋರಾಡುತ್ತಲೇ ಬಂದವರು. ಜನಸಮುದಾಯದ ಒಟ್ಟು ಬಗೆಯ ತೀವ್ರಾನುರಾಗದ ಬಗ್ಗೆ ಲೋಹಿಯಾಗೆ ಇದ್ದ ಅರಿವು ಹಾಗೂ ಸೂಕ್ಷ್ಮತೆ ನಿಜಕ್ಕೂ ದಂಗುಬಡಿಸುವಂಥದ್ದು." (ಡಾ.ರಾಮಮನೋಹರಲೋಹಿಯಾ, ಸ–1,2,3)

ಅಂಬೇಡ್ಕರ್ ಅವರ ವಿಚಾರಧಾರೆಗೆ ಸಹಮತವಿದ್ದ ಲೋಹಿಯಾ ದಲಿತ, ಶೂದ್ರ ಮತ್ತು ಸ್ತ್ರೀಯರ ವಿಮೋಚನೆಗಾಗಿ ಕಂಕಣ ಬದ್ಧರಾದವರು. ಬ್ರಾಹ್ಮಣ ಸಿದ್ಧಾಂತವನ್ನು ವಿರೋಧಿಸುವ ಅವರು ಎಲ್ಲ ಕ್ಷೇತ್ರಗಳಲ್ಲೂ ಬವಿಯಾ, ಬ್ರಾಹ್ಮಣ ಪ್ರಾಬಲ್ಯ ಆಕ್ರಮಿಸಿದ್ದು ದೇಶದ ಬಹುಸಂಖ್ಯಾತರ ಹಿತದೃಷ್ಟಿಯಿಂದ ಅದನ್ನು ತಗ್ಗಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. "ಈ ಬನಿಯಾ, ಬ್ರಾಹ್ಮಣ ಒಕ್ಕೂಟ ಭಾರತದ ಇತಿಹಾಸದ ಚಾಲಕ ಶಕ್ತಿಗಳಲ್ಲಿ ಒಂದಾಗಿದೆ. ಬನಿಯಾ ದೇಶದ ಹೊಟ್ಟೆಯ ಯಜಮಾನನಾದರೆ. ಬ್ರಾಹ್ಮಣ ದೇಶದ ಮನಸ್ಸಿನ ಯಜಮಾನನಾಗಿದ್ದಾನೆ. ಇವರಿಬ್ಬರೂ ದೇಶದ ಯಾವ ಸ್ಥಿರತೆ ಆದೆಷ್ಟು ಹೆಚ್ಚಳ ಹಾಗೂ ಪ್ರಯೋಜನಗಳನ್ನು ಮಾಡಿದ್ದರೆನ್ನುವುದರ ಮೌಲ್ಯಮಾಪನ ಇಲ್ಲಿ ಮಾಡಬಯಸುತ್ತಿಲ್ಲ. ನಾನು ಹೇಳಬೇಕೆಂದಿರುವುದು ಇಷ್ಟೇ, ಈ ದೇಶ ಅಂದರೆ ಇದನ್ನು ಕಟ್ಟಿರುವ 40 ಕೋಟಿ ಜನ ತಮ್ಮನ್ನು ಬಲಪಡಿಸಿಕೊಳ್ಳಬೇಕಾದರೆ ಹೊಟ್ಟೆ, ಮನಸ್ಸಿನ ಮೇಲಿನ ಈ ಬನಿಯಾ, ಬ್ರಾಹ್ಮಣರ ಏಕಸ್ವಾಮ್ಯವನ್ನು ಮುರಿಯಲೇ ಬೇಕಾಗುತ್ತದೆ" (ಡಾ.ರಾಮಮನೋಹರ ಲೋಹಿಯಾ, ಸ–3,2, ಪು, 6–51) ಎನ್ನುವ ಅವರು ಯಾವ ಪಕ್ಷದಲ್ಲಿ ಸ್ತ್ರೀಯರು, ಶೂದ್ರರು, ಹರಿಜನರು ಹಾಗೂ ಮುಸಲ್ಮಾನರು ಅಗ್ರಪಂಥಿಯಲ್ಲಿದ್ದು ಪ್ರಭಾವಶಾಲಿಗಳಾಗುತ್ತಾರೋ ಅಂತ ಪಕ್ಷ ಮತ್ತು ಭಾರತವನ್ನು ಸುಖಿ, ಬಲಶಾಲಿ ಹಾಗೂ ಸತ್ಯಸಂಧ ರಾಷ್ಟ್ರವನ್ನಾಗಿ ಮಾಡಬಲ್ಲದೆಂದು ನನಗೆ ಖಾತ್ರಿಯಾಗಿದೆ. ಸಾಧ್ಯವಿದ್ದಷ್ಟು ಸ್ತ್ರೀಯರು, ಶೂದ್ರರೂ ಹಾಗು ಮುಸಲ್ಮಾನರೇ ಬೀಜವಾಗತಕ್ಕದ್ದು. ಅವರಿಗೆ ನಾಯಕತ್ವದ ಸ್ಥಾನಗಳನ್ನು ನೀಡಬೇಕು. ದ್ವಿಜರು ಗೊಬ್ಬರವಾಗಿ ಬೀಜ ಬೆಳೆಯಲು

ಅನುಕೂಲವಾಗತಕ್ಕದ್ದು. ಇಂಥ ಪಕ್ಷದ ಸಂಘಟನೆಯಾಗಬೇಕು ಎಂದು ಬಲವಾಗಿ ಪ್ರತಿಪಾದಿಸಿದರು. ಅದಕ್ಕಾಗಿ ಅವರು ತಮ್ಮ ಸಮಾಜವಾದಿ ಪಕ್ಷವನ್ನು "ಸಪ್ತಕ್ರಾಂತಿ" ನೆಲೆಯಲ್ಲಿ ಕಟ್ಟಿದ್ದರು.

ಆ ಸಪ್ತಕ್ರಾಂತಿಯ ತಿರುಳೆಂದರೆ "೧. ಪುರುಷ – ಸ್ತ್ರೀ ಸಮಾನತೆ, ೨. ವರ್ಣಭೇಧ ಆಧಾರಿತ ಅಸಮಾನತೆಯ ಸಮಾಪ್ತಿ, ೩. ಜನ್ಮ ಅಥವಾ ಜಾತಿಯ ಆಧಾರದ ಮೇಲಿನ ಅಸಮಾನತೆಯ ನಿವಾರಣೆ, ೪. ವಿದೇಶಿ ದಬ್ಬಾಳಿಕೆಯ ಅಂತ್ಯ ಹಾಗೂ ವಿಶ್ವ ಸರಕಾರದ ಸ್ಥಾಪನೆ, ೫. ವ್ಯಕ್ತಿಗತ ಸಂಪತ್ತಿನಿಂದ ಉದ್ಭವಿಸುವ ಆರ್ಥಿಕ ಅಸಮಾನತೆಯ ನಾಶ ಹಾಗೂ ಸಮಾನತೆಯ ಸಾಧನೆ ೬. ಶಸ್ತ್ರಸ್ತ್ರಗಳ ಬಳಕೆಯ ಮೇಲೆ ಹತೋಟಿ ಹಾಗೂ ಸಾರ್ವಜನಿಕ ಕಾನೂನು ಭಂಗ ತತ್ವದ ಪ್ರತಿಷ್ಠಾಪನೆ, ೭. ವೈಯಕ್ತಿಕ ಸ್ವಾತಂತ್ರ್ಯದ ಮೇಲಾಗುವ ಅತಿಕ್ರಮಣದ ವಿರುದ್ಧ ಹೋರಾಟ." (ಡಾ.ರಾಮಮನೋಹರಲೋಹಿಯಾ, ಸ–6)

ಇಂಡಿಯಾದ ಜಾತಿ ಪದ್ಧತಿಯ ಕುರಿತಾದ ನಿಲವು ಪ್ರಗತಿ ಪರವಾಗಿತ್ತು. ಹಿಂದೂಧರ್ಮದ ಜಾತಿ ವ್ಯವಸ್ಥೆಯ ಬೇರುಗಳನ್ನು ಅಲುಗಾಡಿಸಿದ ಅಂಬೇಡ್ಕರ್ ಮತ್ತು ಪೆರಿಯಾರ ರಾಮಸ್ವಾಮಿಯವರ ಹೋರಾಟವನ್ನು ಅವರುಗಳ ಮುಂದಾಲೋಚನೆಯನ್ನು ಮೆಚ್ಚಿಕೊಂಡ ಲೋಹಿಯಾ ಅವರನ್ನು ಬೆಂಬಲಿಸುವ ವ್ಯಕ್ತಿಯಾಗಿದ್ದರು; "ಬಾಹ್ಯಜಗತ್ತಿಗೆ ನಿಜವಾದ ಭಾರತದ ಪ್ರತೀಕವೆಂದು ಅವರನ್ನು ಹೆಸರಿಸಬಹುದು. ತೀಕ್ಷ್ಣಮತೀಯರಾದ ಅವರು ಅನನ್ಯವಾಗಿದ್ದರು. ಹರಿಜನೇತರರ ನಾಯಕರಾಗಲು ಅವರು ನಿರಾಕರಿಸಿದರು. 5000 ವರ್ಷಗಳ ನೋವು ಹರಿಜನರ ಮೇಲೆ ಅವರ ನಿರಂತರ ಪರಿಣಾಮವನ್ನು ನಾನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲೆ. ನಿಸ್ಸಂಶವಾಗಿಯೂ ಇಡೀ ಪ್ರಮುಖ ಅಂಶ ಅಂಬೇಡ್ಕರ್‌ರಂಥ ವ್ಯಕ್ತಿ ಒಂದಿಲ್ಲ ಒಂದು ದಿನ ಪರಿಸ್ಥಿತಿಯನ್ನು ಹತೋಟಿಯಲ್ಲಿಟ್ಟುಕೊಳ್ಳಬಲ್ಲನೆಂದು ನಂಬಿದ್ದೆ. ಆದರೆ ಮರಣವೇ ಮೊದಲು ಬಂತು" (ಗಮನಿಸಿ: ಓ.ಎಲ್.ಎನ್ ಬರಹಗಳನ್ನು) ಎಂದು ಬರೆದಿದ್ದಾರೆ. ಅಂಬೇಡ್ಕರ್ ಅವರೊಂದಿಗೆ ಪತ್ರ ವ್ಯವಹಾರ ಕೂಡ ನಡೆಸಿದ ಅವರು ಅಂಬೇಡ್ಕರರು ಸ್ಥಾಪಿಸಬೇಕೆಂದಿದ್ದ ರಿಪಬ್ಲಿಕನ್ ಪಾರ್ಟಿಯ ಕುರಿತು ಅಪಾರ ನಿರೀಕ್ಷೆ ಇಟ್ಟುಕೊಂಡಿದ್ದರು.

ಹಾಗೆಯೇ ಪೆರಿಯಾರ ರಾಮಸ್ವಾಮಿನಾಯ್ಕರ್ ಅವರು ತಮಿಳುನಾಡಿನಲ್ಲಿ ಜಾತಿ ಪದ್ಧತಿಯ ವಿರುದ್ಧ ಬ್ರಾಹ್ಮಣ ವಿರೋಧಿ ಚಳುವಳಿಯನ್ನು ನಡೆಸಿದ್ದರು. ಆಗ ಅವರನ್ನು ಭೇಟಿ ಮಾಡಿದ ಲೋಹಿಯಾ ಅವರಿಗೆ ಜಾತಿ ನಿರ್ಮೂಲನ ಮಾಡಬಯಸುವ ಹೋರಾಟದಲ್ಲಿದ ವಿಷಯದಲ್ಲಿ ನಾನು ನಿಮ್ಮ ಜೊತೆಗಿದ್ದೇನೆ. ನಿಮ್ಮೊಂದಿಗೆ ಜೈಲಿಗೆ ಹೋಗಲು ಸಿದ್ಧನಿದ್ದೇನೆ ಎಂದರು. ಅಂಬೇಡ್ಕರ್, ಪೆರಿಯಾರ ಮತ್ತು ಲೋಹಿಯಾ ನಡುವೆ ಕೆಲವು ವಿಷಯಗಳಲ್ಲಿ ಭಿನ್ನತೆಯಿದ್ದರೂ, ಜಾತಿ ಬಗೆಗೆ ಸಾದೃಶ್ಯತೆಯಿದ್ದು ಮಹಿಳೆಯನ್ನು ನೋಡುವಾಗ ತಮ್ಮ ಈಸಂ ನೆಲೆಯಲ್ಲಿ ಚರ್ಚಿಸಲು ಬಯಸಿದ್ದರು.

## ೧.೫ ಸ್ತ್ರೀವಾದ ಮತ್ತು ಭಾರತೀಯ ಸಂದರ್ಭ; ಅಂಬೇಡ್ಕರ್ ಪ್ರಸ್ತುತತೆ

ಈವರೆಗೆ ಅಂಬೇಡ್ಕರ್ ಐಡಿಯಾಲಜಿ ರೂಪಿತವಾದ ಸಾಮಾಜಿಕ ಸಂದರ್ಭ ಮತ್ತು ಚಿಂತನೆಗಳನ್ನು ಪರಿಶೀಲಿಸಲಾಯಿತು. ಭಾರತೀಯ ಸಮಾಜವು ಏಕರೂಪಿ ಸಾಮಾಜಿಕ, ಸಾಂಸ್ಕೃತಿಕ ಬದುಕನ್ನುಳ್ಳ ಸಮರೂಪಿವರ್ಗ ಅಲ್ಲ. ವಿಭಿನ್ನ ಜಾತಿ, ವರ್ಗ, ವರ್ಣಗಳನ್ನು ಹೊಂದಿದ ದೇಶವಾಗಿದೆ. ಹೀಗಾಗಿ ಭಾರತೀಯ ಮಹಿಳೆಯ ಸಮಸ್ಯೆಗಳನ್ನು ವಿಶ್ವಾತ್ಮಕ ನೆಲೆಯಲ್ಲಾಗಲಿರಾಷ್ಟ್ರೀಯ ನೆಲೆಯಲ್ಲಾಗಲೀ ವಿಶ್ಲೇಷಿಸುವುದು, ಪರಿಹಾರವನ್ನು ಸೂಚಿಸುವುದು ಸರಿಯಾಗಲಾರದು. ಆಯಾ ಕಾಲದ ನಿರ್ದಿಷ್ಟ ಸಾಮಾಜಿಕ ಹಿನ್ನಲೆಯುಳ್ಳ ಪ್ರದೇಶದಲ್ಲಿ ಹುಟ್ಟಿಕೊಂಡ ಸಾಮಾಜಿಕ ಆಂದೋಲನಗಳ ಹಾಗು ಮಹಿಳಾ ಹೋರಾಟಗಳ ಚರಿತ್ರೆಯು ಕಂಡುಕೊಳ್ಳಬೇಕಿದೆ. ಕಪ್ಪು ಸ್ತ್ರೀವಾದವು ಬಿಳಿಯ ಮಹಿಳೆಯ ಸ್ತ್ರೀವಾದಕ್ಕಿಂತ ತನ್ನನ್ನು ಭಿನ್ನ ನೆಲೆಯಲ್ಲಿ ಗುರುತಿಸಿಕೊಂಡಿದೆ. ಹಾಗೆಯೇ ಅಭಿವೃದ್ಧಿಗೊಂಡ ರಾಷ್ಟ್ರಗಳ ಸ್ತ್ರೀವಾದಿ ಚಿಂತನೆಗಿಂತ ಭಿನ್ನವಾದ ತಾತ್ವಿಕತೆಯನ್ನು ಅಭಿವೃದ್ಧಿಶೀಲ ರಾಷ್ಟ್ರಗಳ ಸ್ತ್ರೀವಾದಿಗಳು ಕಟ್ಟಿಕೊಳ್ಳಲೆತ್ನಿಸುತ್ತಿದ್ದಾರೆ. ಸ್ತ್ರೀವಾದಿ ಪಂಥಗಳ ಚಾರಿತ್ರಿಕ ಬೆಳವಣಿಗೆಯು ಸ್ತ್ರೀವಾದವನ್ನು ಸಿದ್ಧಾಂತದ ಚೌಕಟ್ಟಿನಲ್ಲಿರಿಸುವುದಕ್ಕಿಂತ ಸಾಪೇಕ್ಷ ನೆಲ್ಲೆಯಲ್ಲಿರಿಸುವುದು ಸೂಕ್ತ ಎಂಬ ತಿಳುವಳಿಕೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಆದ್ದರಿಂದ ಪಶ್ಚಿಮದ ಸ್ತ್ರೀವಾದದೊಂದಿಗೆ ದೇಸೀಯ ನೆಲೆಯ ಸ್ತ್ರೀವಾದಿ ಆಲೋಚನೆಗಳ ಪ್ರಭಾವ ಹಾಗೂ ಪ್ರೇರಣೆಗಳ ಹಿನ್ನಲೆಯಲ್ಲಿ ಭಾರತೀಯ ಸ್ತ್ರೀವಾದದ ಸ್ವರೂಪ ಕಂಡುಕೊಳ್ಳಬಹುದಾಗಿದೆ. ಭಾರತೀಯ ಸ್ತ್ರೀವಾದವನ್ನು ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ನೆಲೆಗಳಲ್ಲಿ ಏಕರೂಪವಾಗಿ ವಿವರಿಸಿಕೊಳ್ಳುವುದು ಸರಳವೇನೂ ಅಲ್ಲ. ಭಾರತೀಯ ಸಂದರ್ಭದಲ್ಲಿನ ಲಿಂಗ ವ್ಯವಸ್ಥೆಯ ಸ್ವರೂಪವನ್ನು ವಿಭಿನ್ನ ಸ್ತರಗಳಿಂದ ಆಯಾಮಗಳಿಂದ ನೋಡಲಾಗಿದೆ. ಜನಪರ ಸಾಮಾಜಿಕ ಚಳುವಳಿಗಳಲ್ಲಿ ತೊಡಗಿಕೊಂಡವರು ಮಹಿಳಾ ಪ್ರಶ್ನೆಯನ್ನು ತಮ್ಮ ಹೋರಾಟದ ಆದ್ಯತೆಯಾಗಿ ಸ್ವೀಕರಿಸಿದ್ದಾರೆ. ಅಕಾಡೆಮಿಕ್ ಶಿಸ್ತಿನಲ್ಲಿ ಮಹಿಳಾ ಅಧ್ಯಯನಗಳು ನಡೆಯುತ್ತಿವೆ. ಧಾರ್ಮಿಕ ಮೂಲಭೂತವಾದ, ಪಕ್ಷರಾಜಕರಣ, ಜಾತಿಪದ್ಧತಿಯ ಅಸಮಾನತೆ, ಜಾಗತೀಕರಣ, ಮುಕ್ತ ಮಾರುಕಟ್ಟೆ ನೀತಿ ಮೂಲಕ ಶೂನ್ಯ ಅಭಿವೃದ್ಧಿ ನೀತಿಗಳು ಭಾರತೀಯ ಮಹಿಳೆಯ ಬದುಕನ್ನು ಹೆಚ್ಚು ಆತಂಕಕಾರಿಯಾಗಿಸುತ್ತಿರುವುದರ ಬಗೆಗೆ ಅಧ್ಯಯನಗಳು ನಡೆಯುತ್ತಿವೆ. ಸ್ತ್ರೀವಾದದ ಮೂಲ ಪರಿಕಲ್ಪನೆಗಳಾದ ಲಿಂಗ, ಲಿಂಗವ್ಯವಸ್ಥೆ, ಲಿಂಗವ್ಯವಸ್ಥೆಯತಾರತಮ್ಯನೀತಿ, ಲೈಂಗಿಕ ಶೋಷಣೆ, ದ್ವಿಲಿಂಗೀಯತೆ, ಸ್ತ್ರೀತ್ವ, ಸ್ತ್ರೀಯಾತ್ಮಕತೆ ಇತ್ಯಾದಿಗಳು ಭಾರತೀಯ ಸಂದರ್ಭದಲ್ಲಿ ಹೊಸ ಅರ್ಥ ವಿಸ್ತಾರದೊಂದಿಗೆ ವಿವರಣೆಗೊಳಗಾಗುತ್ತಿದೆ. ಈ ಹಿನ್ನಲೆಯಲ್ಲಿ ಭಾರತೀಯ ಸ್ತ್ರೀವಾದವು ಪಾಶ್ಚಾತ್ಯ ಮೂಲದ ಅಮದು ಸರಕಾಗದೆ, ಸ್ವಂತ ಅನುಭವದ ಶೋಧದ

ಬೆಳಕಿನಲ್ಲಿ ಆಕಾರ ಪಡೆದುಕೊಳ್ಳಬೇಕಾದ ಪ್ರಕ್ರಿಯೆ ಆಗಿದೆ. ಲಿಂಗಾಧಾರಿತ ಶ್ರೇಣೀಕರಣ ಕುರಿತು ಮಾತನಾಡುವ ಸಂದರ್ಭದಲ್ಲಿ ಮಹಿಳಾ ವಿಷಯಗಳೇ ಮುಖ್ಯವಾಗಿಟ್ಟುಕೊಳ್ಳುವುದೇ ಸ್ತ್ರೀವಾದಿಯತ್ನವೆಂಬ ಅಭಿಪ್ರಾಯ ಭಾರತೀಯ ಸಾಮಾಜಿಕ ಚಿಂತನೆಯಲ್ಲಿ ಮೂಡಿದೆ. ಭಾರತೀಯ ಮಹಿಳಾ ಚಳುವಳಿಗಳ ಪ್ರಭಾವದ ಗುರುತು ಹಾಗೂ ಗೆಲವು ಎಂದು ಈ ಸಂಗತಿಯನ್ನು ಭಾವಿಸಬಹುದು. ಆದರೆ ಈ ಗೆಲವು ಸಮಸ್ಯಾತ್ಮಕವೂ ಆಗಿ ಪರಿಗಣಿಸಿದೆ ಎಂದು ಭಾರತೀಯ ಸ್ತ್ರೀವಾದಿ ಚಿಂತಕರಾದ ಸೂಸಿಥರು ಹಾಗು ತೇಜಸ್ವಿನಿನಿರಂಜನ ತಿಳಿಯುತ್ತಾರೆ." (ಪ್ರೀತಿಶುಭಚಂದ್ರ, 2002: ಪು,133) ಮಹಿಳಾ ಹೋರಾಟಗಳ ಮುಖ್ಯ ವಿಷಯಗಳು ಇಂದು ಏಕಕಾಲಕ್ಕೆ ಅನೇಕ ಸಾಂಸ್ಥಿಕ ಯೋಜನೆಯಲ್ಲಿ ಸೇರ್ಪಡೆಯಾಗಿವೆ. ಆದರೆ ಸ್ತ್ರೀವಿಮೋಚನೆಯ ಮೂಲ ಧ್ಯೇಯದಿಂದ ಹೋರಾಟದ ರೀತಿಯಲ್ಲಿಯೂ ಅವು ಕೆಲಸ ಮಾಡುತ್ತಿವೆ. ಈ ಯೋಜನೆಗಳು ದಲಿತವರ್ಗದೊಂದಿಗೆ ಜೊತೆಗೂಡಿ ಕಾರ್ಯ ನಿರ್ವಹಿಸದೆ ಇರುವುದು ಸ್ತ್ರೀವಾದಿ ಚಟುವಟಿಕೆ ಆಗಿರುವ ದೊಡ್ಡ ತಡೆಯಾಗಿದೆ ಎಂಬ ಆತಂಕ ಹಲವಾರು ಸ್ತ್ರೀವಾದಿಗಳದು. ಈ ವಿಷಯವನ್ನು ಭಾರತೀಯ ಸ್ತ್ರೀವಾದವು ಹೆಚ್ಚಿನ ವಿಶ್ಲೇಷಣೆಗೆ ಒಳಪಡಿಸಬೇಕಾದ ತುರ್ತಿನಲ್ಲಿದೆ. ಸ್ತ್ರೀವಾದದಿಂದ ಭಾರತೀಯ ಸಂದರ್ಭ ನೋಡುವುದಾದರೆ. ಹಾಗೆಯೇ ಕಳೆದ ಎರಡು ದಶಕದಿಂದ ಭಾರತದ ಮಹಿಳಾ ಅಧ್ಯಯನ ವಲಯಕ್ಕೆ ಅಂಬೇಡ್ಕರ್‌ನನ್ನು ಪ್ರಸ್ತುತಗೊಳಿಸಿದ ಸಂದರ್ಭವನ್ನು ಕುರಿತದ್ದು.

ಈ ಹಿನ್ನಲೆಯಲ್ಲಿ ಗಮನಿಸಲೇಬೇಕಾದ ಪ್ರಸಂಗ ಎಂದರೆ ೧೯೯೦ರಲ್ಲಿ ದಶಕದಲ್ಲಿ ವಿ.ಪಿ.ಸಿಂಗ್ ಭಾರತದ ಪ್ರಧಾನಿಯಾಗಿದ್ದರು. ಆಗ ೭ ಆಗಸ್ಟ್ ೧೯೯೦ ರಂದು ಈ ಸರ್ಕಾರವು ಮಂಡಲ್ ಸಮಿತಿಯ ಶಿಫಾರಸ್ಸಿನ ಮೇರೆಗೆ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳಿಗೆ ಶೇಕಡಾ ೨೭% ಮೀಸಲಾತಿಯನ್ನು ಕೇಂದ್ರ ಸರ್ಕಾರದ ಹುದ್ದೆಗಳಲ್ಲಿ ಮತ್ತು ಸಾರ್ವಜನಿಕ ಸಂಸ್ಥೆಗಳಲ್ಲಿ ನೀಡುವ ನಿರ್ಧಾರವನ್ನು ಪ್ರಕಟಿಸಿತು. ಏಕೆಂದರೆ ಭಾರತದಲ್ಲಿ ಶತಮಾನಗಳಿಂದಲೂ ಇರುವ ಜಾತಿ ಪದ್ಧತಿಯಿಂದಾಗಿ ಸಮಾಜದ ಕೆಲವು ವರ್ಗಗಳಿಗೆ ಆದ ಅನ್ಯಾಯವನ್ನು ಸರಿಪಡಿಸುವುದು ಇದರ ಉದ್ದೇಶವಾಗಿತ್ತು. ಇದನ್ನು ವಿರೋಧಿಸಿ ಭಾರತದಾದ್ಯಂತ ಗಲಭೆ, ದೊಂಬಿಗಳು ತಡೆಯಿಲ್ಲದಂತೆ ನಡೆದವು. ಅದರಲ್ಲಿ ಮಂಡಲ್ ವರದಿಯನ್ನು ವಿರೋಧಿಸಿದ ಜನ ವರ್ಗವು ಸ್ಪಷ್ಟವಾಗಿ ಮಧ್ಯಮ, ಮೇಲು ಮಧ್ಯಮ ವರ್ಗ ಮತ್ತು ವರ್ಣದಾಗಿತ್ತು. ಉತ್ತರಭಾರತದಲ್ಲಿ ಉಗ್ರರೂಪವನ್ನು ಪಡೆದುಕೊಂಡ ಈ ಹೋರಾಟವು ಮಹಿಳೆಯರ ಸಹಭಾಗಿತ್ವವನ್ನು ಕೂಡ ಹೊಂದಿತು. ಆಗ ಕಾಲೇಜು ಹುಡುಗಿಯರು ಸರ್ಕಾರಿ ನೌಕರಿಯ ಗಂಡನನ್ನು ಹೊಂದುವ ತಮ್ಮ ಹಕ್ಕನ್ನು ಈ ಸಂದರ್ಭದಲ್ಲಿ ಘೋಷಿಸಿದರು. ಉನ್ನತ ಸರ್ಕಾರಿ ಅಧಿಕಾರಿಗಳ ಪತ್ನಿಯರು ತಮ್ಮ

ಗಂಡುಮಕ್ಕಳು ಮತ್ತು ಗಂಡಂದಿರ ಭವಿಷ್ಯಕ್ಕೆ ಮಾರಕವಾಗುತ್ತದೆಂದು ಈ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು.

ಈ ಘಟನೆಯು ಆ ತನಕ ವರ್ಣ, ಜಾತಿ, ವರ್ಗ ಭೇದವಿಲ್ಲದೇ ಒಂದೇ ವೇದಿಕೆಯಲ್ಲಿ ಕೂಡುತ್ತಿದ್ದು, ಸ್ತ್ರೀವಾದಿ ಚಟುವಟಿಕೆಗಳು ತೊಡಗಿಸಿಕೊಂಡಿದ್ದ ಮಹಿಳೆಯರನ್ನು ಪ್ರತ್ಯೇಕಗೊಳಿಸಿತು. ಅಲ್ಲದೆ, ದಲಿತ ಮಹಿಳೆಯರನ್ನು ಅತಿಸೂಕ್ಷ್ಮಗೊಳಿಸಿತು. ಹಾಗಾಗಿ ದಲಿತ ಮಹಿಳೆಯರು ಪ್ರತ್ಯೇಕ ವೇದಿಕೆಯಲ್ಲಿ ತಮ್ಮ ಸ್ತ್ರೀವಾದಿ ಚಟುವಟಿಕೆಗಳನ್ನು ಆರಂಭಿಸಿದರು.

ಆಗ ಈ ಮಹಿಳೆಯರು ಈಗಾಗಲೇ ಪ್ರಚಲಿತಪಡೆದು ಕೊಂಡಿದ್ದ ದಲಿತ ಚಿಂತನೆಗಳನ್ನು ಮಹಿಳಾ ದೃಷ್ಟಿಯಿಂದ ದಲಿತಸ್ತ್ರೀವಾದ ಅಂತ ಒಂದು ಫಿಲಾಸಫಿ ಆಗಿ ಪ್ರಸ್ತುತಪಡಿಸಿದರು. ಆಗ ನಡೆಯುತ್ತಿದ್ದ ಚರ್ಚೆಗಳಲ್ಲಿ ಅಂಬೇಡ್ಕರ್ ಕೇಂದ್ರಬಿಂದು ಆದರು. ಹಾಗಾಗಿ ಅಂಬೇಡ್ಕರ್ ದೃಷ್ಟಿಕೋನವನ್ನು ಮಹಿಳಾ ಸಂದರ್ಭದಲ್ಲಿ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ.

ಅದ್ದರಿಂದ ಅಂಬೇಡ್ಕರ್‌ನ್ನ ಅಧ್ಯಯನಕ್ಕೆ ಒಳಪಡಿಸುವುದಾದರೆ, ಅವರು ಮಹಿಳೆಯರ ಅನೇಕ ವಿಷಯಗಳನ್ನು ಪ್ರಸ್ತಾಪಿಸುತ್ತಾರೆ. (ಅವುಗಳನ್ನು ಅನುಬಂಧ-೨ ರಲ್ಲಿ ತೋರಿಸಲಾಗಿದೆ) ಆದರೆ ಕಾಲದ ಮಿತಿಯಿಂದ ಎಲ್ಲ ಸಂಗತಿಗಳನ್ನು ಅಧ್ಯಯನಕ್ಕೆ ಬಳಸಲಾಗಿಲ್ಲ. ಆದರೆ, ಅಧ್ಯಯನದ ಉದ್ದೇಶದ ಹಿನ್ನಲೆಯಲ್ಲಿ "ಮಹಿಳೆ ಮತ್ತು ಜಾತಿವ್ಯವಸ್ಥೆಯಲ್ಲಿರುವ ಮಹಿಳೆಯರ ಕುರಿತು ವಿಷಯಗಳು ಅಂಬೇಡ್ಕರ್ ಅಭಿಪ್ರಾಯಗಳು, ಆಡಳಿತಗಾರರಾಗಿ ಕಾರ್ಮಿಕ ಮಹಿಳೆಯರ ಕುರಿತು ಪ್ರಸ್ತಾಪಿಸುವ ಸಂಗತಿಗಳ ಜೊತೆಗೆ ಸಂವಿಧಾನ ಮಹಿಳೆಯರಿಗೆ ನೀಡುವ ಹಕ್ಕು ಹಾಗು ಸೌಲಭ್ಯಗಳನ್ನು ಪ್ರಶ್ನಿಸುತ್ತವೆ. ಹಾಗೆಯೇ ಹಿಂದೂಕೋಡ್ ಬಿಲ್‌ನ್ನು ಮಹಿಳೆಯರ ಆಸ್ತಿಸಂಬಂಧ ಅವರು ಪ್ರಸ್ತಾಪಿಸುವ ಚರ್ಚೆಗಳನ್ನು ಮುಂದಿನ ಅಧ್ಯಾಯಗಳಲ್ಲಿ ಸ್ತ್ರೀವಾದಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ಉಲ್ಲೇಖಗಳು


೦೧. ವಸಂತ್‌ಮೂನ್ (ಮೂಲ), ೨೦೦೨, ಸನದಿ ಬಿ.ವಿ. (ಅನು), ಡಾ. ಬಾಬಾಸಾಹೇಬಾ ಅಂಬೇಡ್ಕರ್, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಪು -೩೬

೦೨. ಸಿಮೋನ್ ದ ಬೋವಾ, ೨೦೦೭, ಅನು: ಎಚ್.ಎಸ್.ಶ್ರೀಮತಿ, ಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು, ಪು-೧೬,೧೭

೦೩. ಚ.ನ.ಶಂಕರರಾವ್, ೨೦೦೭, ಭಾರತೀಯ ಸಮಾಜ ರಚನೆ-ಪರಿವರ್ತನೆ, ಜೈ ಭಾರತ ಪ್ರಕಾಶನ, ಮಂಗಳೂರು, ಪು-೩೭

೦೪. ಬಿ.ಎಸ್.ಚಂದ್ರಶೇಖರ್, ೨೦೦೫, ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು ೧೦೮

೦೫. ಕೇತ್ಕರ್ ಎಸ್.ವಿ. ೧೯೨೦ A Caste Study, ಪು-x

೦೬. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೭: ಪು-೧,೩

೦೭. ಕೋಟಗಾನಹಳ್ಳಿ ರಾಮಯ್ಯ ಸಂ, ತಲಪರಿಗೆ, ಲೇ ಕ್ರಿಸ್ಟಪ್ ಜ್‌ಫರ್ಲ್ಲೊ, ೨೦೦೫, ಕುಲ ಮೀಮಾಂಸೆಯ ಮೂಲಕ ಮೂರ್ತಿ ವ್ಯವಸ್ಥೆಯ ನಿರ್ಮೂಲನೆ, ಅಭಿಮಾನಿ ಪ್ರಕಾಶನ, ಬೆಂಗಳೂರು, ಪು-೩೦

೦೮. ಆರ್.ಇಂದಿರಾ; ೧೯೯೫; ಸ್ತ್ರೀವಾದ:ದಿಕ್ಸೂಚಿ, ಸಮತಾ ಅಧ್ಯಯನ ಕೇಂದ್ರ, ಮೈಸೂರು, ಪು-೧೬,೨೧

೦೯. ಬಾಬುರಾವ್ ಮುಡಬಿ, ೨೦೦೫ ಮಹಿಳಾ ಸಬಲೀಕರಣ, ಅಂಬೇಡ್ಕರ್ ದೃಷ್ಟಿಕೋನ, ಲಕ್ಷ್ಮಿ ಪ್ರಕಾಶನ, ಬೆಂಗಳೂರು, ಪು-೦೩

೧೦. ಅದೇ, ಪು-೩

೧೧. ಶೈಲಜ ಹಿರೇಮಠ; ೨೦೦೩; ಸ್ತ್ರೀಕಥನ; ಭುವನ ಪ್ರಕಾಶನ, ಹೊಸಪೇಟೆ, ಪು-೪೧,೫೫

೧೨. ಶೇಷನವರತ್ನ, ೨೦೦೪; ಮನುಸ್ಮೃತಿ, ಸಮಾಜ ಪುಸ್ತಕಾಲಯ; ಧಾರವಾಡ, ಪು-೯೬

೧೩. ಎನ್.ಗಾಯತ್ರಿ, ೧೯೯೬, ಮಹಿಳೆ ಬಿಡುಗಡೆ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು_೨೨,೨೩

೧೪. ಅದೇ, ಪು-೨೫,೨೬

೧೫. ಅದೇ, ಪು-೨೪,೨೫

೧೬. ಅದೇ, ಪು-೨೬

೧೭. ಅದೇ, ಪು-೨೯,೩೦

೧೮. ಬಾಬುರಾವ್ ಮುಡಬಿ, ೨೦೦೫, ಮಹಿಳಾ ಸಬಲೀಕರಣ, ಅಂಬೇಡ್ಕರ್ ದೃಷ್ಟಿಕೋನ, ಲಕ್ಷ್ಮೀ ಪ್ರಕಾಶನ, ಪು-೭,೯

೧೯. ಎನ್.ಗಾಯತ್ರಿ, ೧೯೯೬, ಮಹಿಳೆ ಬಿಡುಗಡೆ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು-೩೩

೨೦. ಅದೇ, ಪು-೩೩

೨೧. ಶೇಷನವರತ್ನ, ೨೦೦೪, ಮನುಸ್ಮೃತಿ, ಸಮಾಜ ಪುಸ್ತಕಾಲಯ; ಧಾರವಾಡ; ಪು-೯೩

೨೨. ಬಿ.ಯು.ಸುಮಾ: ೨೦೦೮: ಡಾ.ಬಿ.ಆರ್.ಅಂಬೇಡ್ಕರ್ ವರ್ತಮಾನದೊಂದಿಗೆ ಮುಖಾಮುಖಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು-೩

೨೩. ಚಂದ್ರಶೇಖರಾ.ಟಿ.ಆರ್. ಸಂ, ದಲಿತ ಅಧ್ಯಯನ, ಲೇ, ಉಷಾ.ಎಂ, ಮಹಿಳೆ ಮತ್ತು ಅಂಬೇಡ್ಕರ್ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೨೦೬,೨೦೭

೨೪. ಜೆರಾಲ್ಡಿನ್ ಫೋರ್ಬ್ಸ್: ೨೦೦೫: ಆಧುನಿಕ ಭಾರತದಲ್ಲಿ ಮಹಿಳೆ, ಎಚ್.ಎಸ್.ಶ್ರೀಮತಿ, (ಅನು): ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೭

೨೫. ಉಷಾ.ಎಂ: ೨೦೦೫: ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೩೦

೨೬. ಜೆರಾಲ್ಡಿನ್ ಫೋರ್ಬ್ಸ್: ೨೦೦೫: ಆಧುನಿಕ ಭಾರತದಲ್ಲಿ ಮಹಿಳೆ, ಎಚ್.ಎಸ್.ಶ್ರೀಮತಿ, (ಅನು): ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೩೦

೨೭. ಉದ್ಧೃತ: ಅದೇ, ಪು-೩೧

೨೮. ಅದೇ, ಪು-೩೧

೨೯. ಅದೇ, ಪು-೩೦

೩೦. ಉದ್ಧೃತ: ಅದೇ, ಪು-೧೬

೩೧. ಅದೇ, ಪು-೨೭,೩೩

೩೨. ಅದೇ, ಪು-೧೯

೩೩. Kancha Illaiah, 2005, A Paradigm Shift ಎಂಬ ಲೇಖನ Deccan Heralad April ೧೪.

೩೪. Valerian Rod Rigues, 2002, The essen tial writings of B.R.Ambedkar, p-೧

೩೫. ವಿದ್ಯಾಸಾಗರ.ಐ.ಎಸ್: ೨೦೦೫, ಅಂಬೇಡ್ಕರ್ ಮತ್ತು ಮಾನವೀಯ ಮೌಲ್ಯಗಳು, ಸುಮೇಧ ಪ್ರಕಾಶನ, ಗುಲ್ಬರ್ಗಾ, ಪು-೧೦೭

೩೬. ಡಾ.ಬಾ.ಸಾ.ಅಂ.ಬ.ಭಾ: ಸಂ-೧: ಪು-೯೬

೩೭. ಅರವಿಂದ ಮಾಲಗತ್ತಿ: ೧೯೯೧: ಡಾ.ಅಂಬೇಡ್ಕರ್ ವಿಚಾರಧಾರೆ, ಲೇ ಅನ್ನಪೂರ್ಣೇಶ್ವರಿ, ಮಹಿಳೆಯರ ಪ್ರಗತಿ ಮತ್ತು ಅಂಬೇಡ್ಕರ್, ಪು-೧೪೬

೩೮. ಅದೇ, ಪು-೧೪೬

೩೯. ಐ.ಎಸ್.ವಿದ್ಯಾಸಾಗರ, ೨೦೦೬: ಅಂಬೇಡ್ಕರ್ ಮತ್ತು ಮಾನವೀಯ ಮೌಲ್ಯಗಳು, ಸುಮೇಧ ಪ್ರಕಾಶನ, ಗುಲ್ಬರ್ಗಾ, ಪು-೧೧೦

೪೦. ವಸಂತ್‌ಮೂನ್ (ಮೂಲ), ೨೦೦೨, ಸನದಿ ಬಿ.ವಿ. ಅನು, ಡಾ. ಬಾಬಾಸಾಹೇಬಾ ಅಂಬೇಡ್ಕರ್, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಪು-೯೪

೪೧. ಅದೇ, ಪು-೧೦೯

೪೨. ಅದೇ, ಪು-೧೧೦

೪೩. ಐ.ಎಸ್.ವಿದ್ಯಾಸಾಗರ: ೨೦೦೬: ಅಂಬೇಡ್ಕರ್ ಮತ್ತು ಮಾನವೀಯ ಮೌಲ್ಯಗಳು, ಸುಮೇಧ ಪ್ರಕಾಶನ, ಗುಲ್ಬರ್ಗಾ, ಪು-೧೧೧

೪೪. ಬಿ.ಯು.ಸುಮಾ: ೨೦೦೮: ಡಾ.ಬಿ.ಆರ್.ಅಂಬೇಡ್ಕರ್ ವರ್ತಮಾನದೊಂದಿಗೆ ಮುಖಾಮುಖಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರ, ಪು–೧೯

೪೫. ಮಾ.ಭರಣಿ ಸಂ, ೧೯೯೧: ಶತಮಾನದ ಅಂಬೇಡ್ಕರ್ ಲೇ, ಅಹಲಾ ರಂಗ್ಣೇಕರ್, ಅಂಬೇಡ್ಕರ್ ಮತ್ತು ಮಹಿಳೆ, ಪು–೨೪೧

೪೬. ಅಮರೇಶ ನುಗಡೋಣಿ: ೨೦೦೮: ಕನ್ನಡ ಸಂಶೋಧನೆಯ ವೈಧಾನಿಕತೆಗಳು: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು–೧೨

೪೭. Deshpande (ed): 2002, Selected Writing of Jotro Phule, life word Books, New Delhi, P-70

೪೮. ಮುರುಳಿಧರ್ ಜಗತಾಪ: ೨೦೦೧: ಸಮಾಜ ಸುಧಾರಕ ಮಹಾತ್ಮಫುಲೆ; ಪು–೬೬

೪೯. ಅದೇ, ಪು–೮೦

೫೦. ಡಾ.ಬಾ.ಸಾ.ಅಂ.ಬ.ಭಾ: ೧೯೯೮: ಸಂ–೯: ಪು–೩೪೦

೫೧. ಬಿ.ಯು.ಸುಮಾ: ೨೦೦೮: ಡಾ.ಬಿ.ಆರ್.ಅಂಬೇಡ್ಕರ್ ವರ್ತಮಾನದೊಂದಿಗೆ ಮುಖಾ ಮುಖಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು–೪೦

೫೨. ಅದೇ, ಪು–೧೫,೧೯

೫೩. ಮಧುಕೀಶ್ವರ; ೧೯೯೩; ಗಾಂಧೀಜಿ ಮತ್ತು ಮಹಿಳೆಯರು, ಜನಪದ ಸೇವಾ ಟ್ರಸ್ಟ್, ಮೇಲುಕೋಟೆ, ಪು–i-vi

೫೪. ಸಂ, ವಿರೂಪಾಕ್ಷಿ ಪೂಜಾರಹಳ್ಳಿ: ೨೦೦೭: ಪೆರಿಯಾರರ ವಿಚಾರಧಾರೆ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು–೧,೧೨

೫೫. ಅದೇ, ಪು–೧೫,೧೯

೫೬. ಓ.ಎಲ್.ನಾಗಭೂಷಣ: ಲೋಹಿಯಾ ವ್ಯಕ್ತಿ–ವಿಚಾರ–ವಿಮರ್ಶೆ, ಪು–೫೪೩

೫೭. ರಾಮಮನೋಹರ ಲೋಹಿಯಾ: ಬರಹಗಳು, ಸಂ–೧,೨,೩

೫೮. ರಾಮಮನೋಹರ ಲೋಹಿಯಾ: ಜಾತಿಪದ್ಧತಿ, ಪು–೩೨೬,೫೧

೫೯. ರಾಮಮನೋಹರ ಲೋಹಿಯಾ: ಬರಹಗಳು, ಸಂ–೬

೬೦. ಓ.ಎಲ್.ನಾಗಭೂಷಣ: ಲೋಹಿಯಾ ವ್ಯಕ್ತಿ–ವಿಚಾರ–ವಿಮರ್ಶೆ,

೬೧. ಪ್ರೀತಿ ಶುಭಚಂದ್ರ: ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು–೧೩೩

## ಅಧ್ಯಾಯ–ಮೂರು

# ಮಹಿಳೆ, ಜಾತಿ ಶ್ರೇಣೀಕರಣ ಮತ್ತು ವಿವಾಹ ಸಂಸ್ಥೆ

ಅಧ್ಯಾಯ–ಮೂರು

# ಮಹಿಳೆ, ಜಾತಿ ಶ್ರೇಣೀಕರಣ ಮತ್ತು ವಿವಾಹ ಸಂಸ್ಥೆ

ಭಾರತದಲ್ಲಿ ಮಹಿಳೆ ಮತ್ತು ಜಾತಿ ಅಸಮಾನತೆಯ ವಿಷಯಗಳು ಬ್ರಿಟಿಷ್ ಶಿಕ್ಷಣದಿಂದ ಹೊಸ ತಿಳುವಳಿಕೆಯಲ್ಲಿ ಪ್ರಸ್ತುತಗೊಂಡವು. ಹಾಗಾಗಿ ಬಾಲ್ಯ, ವಿವಾಹ, ಸತಿ, ವಿಧವೆ ಮತ್ತು ಅಸ್ಪೃಶ್ಯರ ಸ್ಥಿತಿಗತಿಯಂತಹ ಅನೇಕ ಸಂಗತಿಗಳು ಭಾರತೀಯ ಸಾಮಾಜಿಕ ಸಮಸ್ಯೆಗಳು ಅಂತ ಪರಿಗಣಿತವಾದವು. ನಂತರ ಇವು ರಾಷ್ಟ್ರೀಯ ಚಳುವಳಿಯೊಂದಿಗೆ ತಳುಕುಹಾಕಿಕೊಂಡವು. ಅಲ್ಲದೆ, ಸ್ವತಂತ್ರ ಭಾರತದ ಸಂವಿಧಾನದಲ್ಲಿ ಅದರ ಪರಿಹಾರ ಕ್ರಮಗಳು ಸೇರ್ಪಡೆಗೊಂಡವು. ಈ ಕುರಿತು ವಸಾಹತು ಸಂದರ್ಭ ಚಿಂತನಾಕ್ರಮಗಳನ್ನು ಕ್ರೋಢೀಕರಿಸಿ, ಲಿಂಗ ನೆಲೆಯಿಂದ ಮರು ಪರಿಶೀಲನೆಗೆ ಒಳಪಡಿಸಲಾಗುವುದು. ಅದರಲ್ಲಿ ಪಾಶ್ಚಾತ್ಯ ಸುಧಾರಣಾವಾದಿ ದೃಷ್ಟಿಕೋನ ಒಂದು ಕಡೆ, ದೇಶಿಯ ಅಂದರೆ ಭಾರತೀಯ ಸುಧಾರಣಾವಾದಿ ದೃಷ್ಟಿಕೋನ ಇನ್ನೊಂದು ಕಡೆ. ಅಂಬೇಡ್ಕರ್ ಈ ದೃಷ್ಟಿಕೋನಗಳಿಗೆ ಪರ್ಯಾಯವಾದ ದೃಷ್ಟಿಕೋನವನ್ನು ಪ್ರಸ್ತುತಪಡಿಸುತ್ತಾರೆ. ಅಂದರೆ ಆಗ ಮಹಿಳೆಯ ವಿಷಯಗಳನ್ನು ಜಾತಿ ಒಳಗೆ ಜಾತಿಯೊಂದಿಗೆ ತಳುಕುಹಾಕದೆ ಗ್ರಹಿಸುತ್ತಿದ್ದ ದೃಷ್ಟಿಕೋನಗಳಿದ್ದವು. ಅದಕ್ಕೆ ಪರ್ಯಾಯವಾಗಿ ಅಂಬೇಡ್ಕರ್ ಲಿಂಗ, ಜಾತಿಯಲ್ಲಿ ಶ್ರೇಣೀಕರಣ ಉಳಿಸಿಕೊಂಡಿರುವ ವಿವಾಹ ಒಂದು ಪ್ರಕಾರವಾದ ಸ್ವಜಾತಿ ವಿವಾಹದೊಳಗೆ ಮಹಿಳಾ ವಿಷಯಗಳನ್ನು ಗ್ರಹಿಸಿದರು. ಈ ಎಲ್ಲಾ ಸಂಗತಿಗಳೇ ಈ ಅಧ್ಯಾಯದ ವಸ್ತುವಾಗಿವೆ. ಅದ್ದರಿಂದ ಲಿಂಗ, ಜಾತಿಧಾರಿತ ಶ್ರೇಣೀಕರಣವನ್ನು ವಸಾಹತು ಚಿಂತನಾ ಕ್ರಮದಲ್ಲಿ ಅಂಬೇಡ್ಕರ್ ಧೋರಣೆಗಳನ್ನು ಗುರುತಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ.

## ೩.೧. ಮಹಿಳೆ, ಜಾತಿ; ವಸಾಹತು ದೃಷ್ಟಿಕೋನ

ವಚನ ಚಳುವಳಿಯಲ್ಲಿ ಮಹಿಳೆ ಮತ್ತು ಜಾತಿ ವಿಷಯಗಳು ಭಿನ್ನವಾದ ಚಲನೆಯನ್ನು ಪಡೆದವು. ಆಧುನಿಕತೆ ಎಂದರೆ ವಸಾಹತುಶಾಹಿಗಳಿಂದ ಬಂದ ಶಿಕ್ಷಣ, ಸಾರಿಗೆ ಸಂಪರ್ಕ, ಮುಂತಾದವುಗಳಿಂದ ರೂಪಿತಗೊಂಡ ಹೊಸ ಜೀವನ ವಿಧಾನ ಎಂದು ಅರ್ಥೈಸಬಹುದು. ಇದನ್ನು ಡಿ.ಆರ್.ನಾಗರಾಜ "ಆಧುನಿಕತೆ ಎನ್ನುವುದು ಏಕರೂಪ ಜೀವನಕ್ರಮ"(ಡಿ.ಆರ್.ನಾಗರಾಜ: 2002; ಪು,14) ಎನ್ನುತ್ತಾರೆ. ಈ ಏಕರೂಪತೆ ಬೌದ್ಧಿಕ ವಲಯವನ್ನು ಸಹ ಆವರಿಸಿತ್ತು. ಪರಿಣಾಮ ಆರಂಭದ ಲಿಂಗ ಮತ್ತು ಜಾತಿ ಸಂಬಂಧಿ ವಿಷಯಗಳ ಗ್ರಹಿಕೆಯಲ್ಲಿ ಅದರ ಶ್ರೇಣೀಕರಣ ಕುರುಹುಗಳನ್ನು ಗುರುತಿಸಬಹುದು. ಅದ್ದರಿಂದ ವಸಾಹತು ಸಂದರ್ಭದಲ್ಲಿ ಮಹಿಳೆ ಮತ್ತು ಜಾತಿ ಸಂಬಂಧಿ ದೃಷ್ಟಿಕೋನವನ್ನು ಪಾಶ್ಚಾತ್ಯರ ಹಾಗು ಭಾರತೀಯರ ಅಂದರೆ ದೇಶಿಯ ಸುಧಾರಣಾವಾದಿಗಳಿಬ್ಬರೂ ಗುರುತಿಸಿಕೊಂಡ ಭೂಮಿಕೆಯಿಂದ ಇದನ್ನು ಪ್ರವೇಶಿಸಬಹುದು.

ಪಾಶ್ಚಾತ್ಯದಲ್ಲಿ ನಡೆಯುತ್ತಿದ್ದ ಮಹಿಳಾ ಚಳುವಳಿಯ ಪರಿಸರದಿಂದ ಭಾರತಕ್ಕೆ ಬಂದ ಪಾಶ್ಚಾತ್ಯರಿಗೆ ಭಾರತೀಯ ಮಹಿಳಾ ಸ್ಥಿತಿಗತಿಯನ್ನು ಗ್ರಹಿಸುವಾಗ ಜಾತಿಪದ್ಧತಿಯು ಬಹುದೊಡ್ಡ ಸಮಸ್ಯೆಯಾಯಿತು. ಆಗ ಪಾಶ್ಚಾತ್ಯರು ಜಾತಿಪದ್ಧತಿಯನ್ನು ಭಾರತದ ಸಮಕಾಲೀನ ಸಾಮಾಜಿಕ ಪದ್ಧತಿಯಾಗಿ ಗ್ರಹಿಸಲು ಪ್ರಯತ್ನಿಸಿದರು. ಏಕೆಂದರೆ ಈ ಪದ್ಧತಿ ಅವರಿಗೆ ಹೊಸದಾಗಿತ್ತು. ಅಲ್ಲದೆ, ಅಪರಿಚಿತವಾಗಿದ್ದು ಅದನ್ನು ಅವರು ತಮಗೆ ತಾವೇ ವಿವರಿಸಿಕೊಳ್ಳಲು ಪ್ರಯತ್ನಿಸಿದರು. ಹಾಗಾಗಿ "ಅವರು ಮೊದಲಿಗೆ ಜಾತಿಯ ಮೂಲವನ್ನು ಜಾತಿಯಿಂದಲೇ ಆರಂಭಿಸಿ, ಸಮಕಾಲೀನ ಆಚರಣೆಯ ನೆಲೆಯಲ್ಲಿ ಅದನ್ನು ವಿವರಿಸಿಕೊಳ್ಳುತ್ತಾ ಅದರಲ್ಲಿ ಮೂರು ಅಂಶಗಳನ್ನು ಪ್ರಧಾನವಾಗಿ ಗುರುತಿಸಿಕೊಂಡರು. "ಅವುಗಳೆಂದರೆ ೧. ವಿಭಜನೆ, ೨. ಪ್ರತ್ಯೇಕತೆ, ೩. ಶ್ರೇಣೀಕರಣ. ಭಾರತೀಯ ಸಮುದಾಯವನ್ನು ಕೆಲವು ನಿರ್ದಿಷ್ಟ ವಿಚಾರಗಳ ಹಿನ್ನಲೆಯಲ್ಲಿ ವಿವಾಹ, ಆಹಾರಕ್ರಮ, ಕಸುಬು ಇತ್ಯಾದಿ ವಿಭಜಸಿ, ಪ್ರತ್ಯೇಕಿಸುವ ಹಾಗು ಒಂದರ ಕೆಳಗೆ ಒಂದರಂತೆ ಜೋಡಿಸುವ ಸಾಮಾಜಿಕ ರಚನೆಯಾಗಿ ಇದನ್ನು ಗುರುತಿಸಿದರು." (ಉಷಾ ಎಂ: 2005; ಪು,17)

ನಂತರ ಜಾತಿ ಕುರಿತು ಪಶ್ಚಿಮದ ಚಿಂತನೆಯನ್ನೆಲ್ಲ Louis Dumount ಗ್ರಹಿಕೆ ಗಮನಾರ್ಹವಾದುದು. "ಆತನ ಪ್ರಕಾರ ಇದರಲ್ಲಿ ಮುಖ್ಯವಾಗಿ ಮೂರು ಹಂತಗಳಿವೆ. ಮೊದಲನೆಯ ಹಂತದಲ್ಲಿ ಪಾಶ್ಚಾತ್ಯರಿಗೆ ಜಾತಿಪದ್ಧತಿಯೊಂದು ಅವರಿಗೆ ತಿಳಿಯದ ಆಶ್ಚರ್ಯಕರವಾದ ಪದ್ಧತಿಯಾಗಿ ಕಂಡು ಬಂದಿತು. ಅದ್ದರಿಂದ ಅವರು ಜಾತಿ ಅಸ್ತಿತ್ವವನ್ನು ತಮಗೆ ತಾವೇ ವಿವರಿಸಿಕೊಳ್ಳಬೇಕಾದ ಅಗತ್ಯ ಮನಗಂಡರು. ಎರಡನೆಯ ಹಂತದಲ್ಲಿ

ಚಾರಿತ್ರಿಕ ದೃಷ್ಟಿಕೋನದೊಂದಿಗೆ ಅಂದರೆ ಹತ್ತೊಂಬತ್ತನೆಯ ಶತಮಾನದ ಕೊನೆಯ ದಿನಗಳಲ್ಲಿ ವಿವರಿಸಿಕೊಳ್ಳವ ವಿಧಾನದೊಂದಿಗೆ ಅದನ್ನು ವಿಶ್ಲೇಷಿಸುವ ಮಾದರಿಯು ಆರಂಭಗೊಂಡಿತು. ಮೂರನೆಯ ಹಂತದಲ್ಲಿ ಅಂದರೆ ೧೯೪೫ ರ ನಂತರ ಅದರ ಬಗ್ಗೆ ಆಳವಾದ ಅಧ್ಯಯನಗಳು ಮಾನವಶಾಸ್ತ್ರ, ಸಮಾಜಶಾಸ್ತ್ರಗಳ ನೆಲೆಯಿಂದ ಆರಂಭಗೊಂಡವು." (Louis dumont: 1972: ಪು,36)

ಭಾರತೀಯ ಮಹಿಳೆಯರ ಸಮಸ್ಯೆಯನ್ನು ಐರೋಪ್ಯರು ಪರಿಶೀಲಿಸುವಾಗ ಎದುರಾದ ಜಾತಿ ಪದ್ಧತಿಯನ್ನು ವಿವರಿಸಿಕೊಳ್ಳುವಾಗ ಅವರಿಗೆ ಅದು ಹಿಂದೂ ಸಮಾಜದ ಅರ್ಥವಾಗದ ವಿಭಜನಾಕ್ರಮವಾಗಿ ಕಂಡುಬಂದಿತು. ಆದರೆ ಅದೇ ಮಹಿಳೆ ಅಸಮಾನತೆಗೆ ಕಾರಣವಾಗಿರುವ ಲಿಂಗಾಧಾರಿತ ವಿಭಜನೆ ಅವರಿಗೆ ಪರಿಚಿತವಾಗಿತ್ತು. ಏಕೆಂದರೆ ಪಿತೃಪ್ರಧಾನತೆ ಭಾರತಕ್ಕೆ ಸೀಮಿತ ಗೊಂಡುದಾಗಿರಲಿಲ್ಲ. ಅದಕ್ಕೆ ಜಾಗತಿಕ ಗುಣವಿದೆ. ಆದರೆ ಪಿತೃಪ್ರಧಾನತೆ ಭಾರತೀಯ ಸಂದರ್ಭದಲ್ಲಿ ಹೊಂದಿದ್ದ ಕೆಲವು ಗುಣಲಕ್ಷಣಗಳು ಗಮನಾರ್ಹವಾದವು. ಅದರಲ್ಲಿ ಜಾತಿಯೇ ಬಹಳ ಮುಖ್ಯವಾಗಿತ್ತು. ಈ ಎಲ್ಲಾ ಬೆಳವಣಿಗೆಯ ಹಿನ್ನಲೆಯಲ್ಲಿ ಐರೋಪ್ಯರು ಜಾತಿ ಪ್ರಶ್ನೆಗಳನ್ನು ಸಂಕುಚಿತಗೊಳಿಸಿ ಮಹಿಳೆ ಪ್ರಶ್ನೆಗಳನ್ನು ಮಹಿಳೆ ಸಮಸ್ಯೆಯಾಗಿ ಪ್ರಸ್ತುತಪಡಿಸಿದರು. ಆಗ ಜಾತಿ ಒಳಗೆ ಮಹಿಳೆ ಪ್ರಶ್ನೆಗಳನ್ನು ಸಹ ಪ್ರಸ್ತುತಗೊಳಿಸುತ್ತವೆ ಅಂತ ಹೇಳುತ್ತಲೇ, ಮಹಿಳೆ ಪ್ರಶ್ನೆಗಳಿಗೆ ಏಕರೂಪ ಚೌಕಟ್ಟನ್ನು ನೀಡುವ ಪ್ರಯತ್ನಮಾಡಿದರು. ಹಾಗಾಗಿ ಅವರು ಲಿಂಗಾಧಾರಿತ ಶ್ರೇಣೀಕರಣ ಪ್ರಶ್ನೆಯನ್ನು ತಿರುಚಿ ಮಹಿಳೆ ಹಿನ್ನಲೆಯಲ್ಲಿ ಮಹಿಳೆ ಸಮಸ್ಯೆಯಾಗಿ ಮಾತ್ರ ಗುರುತಿಸಿಕೊಂಡರು. ಒಟ್ಟಿನಲ್ಲಿ ಮಹಿಳೆಯ ಈ ಸಮಸ್ಯೆಗಳೇ ಭಾರತೀಯ ಸಮಾಜದ ಬರ್ಬರತೆಗೆ ಕಾರಣವೆಂಬಂತೆ ಅವುಗಳನ್ನು ಪ್ರಾದೇಶಿಕಗೊಳಿಸಿದರು.

ಈ ಕುರಿತು ಗಮನಿಸಲೇಬೇಕಾದ ಉಲ್ಲೇಖಗಳೆಂದರೆ : ಬ್ರಿಟಿಷ್ ಇಂಡಿಯಾ ಚರಿತ್ರೆ (Hisitory of British India 1826) ಯನ್ನು ಬರೆದ ಜೇಮ್ಸ್‌ಮಿಲ್ "ಭಾರತೀಯರನ್ನು ಅನಾಗರಿಕರು ಎಂದು ದೃಢಪಡಿಸಲು ಪ್ರಯತ್ನಿಸುತ್ತಾನೆ. ಹಾಗಾಗಿ ಮಿಲ್ ಒಂದು ಸಮಾಜದ ಅಭಿವೃದ್ಧಿಯನ್ನು ಅಲ್ಲಿನ ಮಹಿಳೆಯರ ಸ್ಥಿತಿಗಳನ್ನು ಅನುಲಕ್ಷಿಸಿ ಗುರುತಿಸಬಹುದು ಎಂದು ಹೇಳಿದ. ಇದರ ಉದ್ದೇಶವೆಂದರೆ ಅನಾಗರಿಕ ಜನರು ಹೆಂಗಸರನ್ನು ಕೀಳಾಗಿ ಕಾಣುತ್ತಾರೆ. ನಾಗರಿಕರಾದರೆ ಅವರನ್ನು ಪೂಜಿಸುತ್ತಾರೆ. ಮುಂದುವರೆದ ಸಮಾಜಗಳನ್ನು ವರ್ಣಿಸುತ್ತಾ ಮಿಲ್ 'ದುರ್ಬಲ' ಲಿಂಗದವರ (ಹೆಂಗಸರ) ಪರಿಸ್ಥಿತಿ ದಿನದಿನಕ್ಕೆ ಉತ್ತಮಗೊಳ್ಳುತ್ತಾ ಕೊನೆಗೊಮ್ಮೆ ಅವರು ಪುರುಷರಿಗೆ ಸಮಾನರೇ ಎನಿಸುವಂತಾಗಿ ತಮ್ಮ ಇಚ್ಛೆ ಹಾಗೂ ಅನುಕೂಲಗಳಿಗೆ ತಕ್ಕ ಸ್ಥಾನಗಳನ್ನು ಗಳಿಸುವಂತಾಗುತ್ತಾರೆ ಎಂದು ಹೇಳುತ್ತಾನೆ." (ಜೇಮ್ಸ್‌ಮಿಲ್; ಉದ್ರೃತ; ಜೆರಾಲ್ಡಿನಾ ಪೋರ್ಬಾ, ೨೦೦೧; ಪು.೨೦)

೧೮೪೪ರಲ್ಲಿ ಇಂಡಿಯಾಕ್ಕೆ ಬಂದಿದ್ದ ರೆವರೆಂಡ್ ಇ.ಸ್ಟೋರೋ "ಇಲ್ಲಿನ ಮಹಿಳೆಯರ ಹೀನಾಯ ಸ್ಥಿತಿಗಳಿಗೆ ಇಂಡಿಯಾದಲ್ಲಿ ಒಗ್ಗಟ್ಟಿಲ್ಲದಿರುವುದೇ ಮುಖ್ಯ ಕಾರಣ" (ಅದೇ, ಪು.೨೦) ಎಂದು ಹೇಳಿದರು.... ಇಸ್ರೇಲ್, ರೋಮಾ ಮತ್ತು ಪಶ್ಚಿಮ ಯುರೋಪುಗಳೆನ್ನು ಶಕ್ತಿ ರಾಷ್ಟ್ರಗಳೆಂದು ಪಟ್ಟಿ ಮಾಡುವ ಸ್ಟೋರೋ ಈ ರಾಷ್ಟ್ರಗಳು ತಮ್ಮ ಮಹಿಳೆಯರಿಗೆ ನೀಡಿರುವ ಉನ್ನತ ಸ್ಥಾನಗಳಿಂದಾಗಿ ಅವು ನೈತಿಕ ಧೈರ್ಯ ಹಾಗು ಮೌಲ್ಯಗಳನ್ನು ಗಳಿಸಿವೆ" ಎಂದು ಹೇಳುತ್ತಾರೆ. (ಅದೇ, ಪು.೨೧)

ಈ ಮೂಲಕ ಅವರು ಐರೋಪ್ಯ ಸಮಾಜವು ಲಿಂಗತಾರತಮ್ಯಕ್ಕೆ ಹೊರತಾದುದು ಎಂಬಂತೆ ಸಾಬೀತು ಪಡಿಸತೊಡಗಿದರು. ಅಲ್ಲದೆ ಭಾರತೀಯ ಸಮಾಜವನ್ನು ಗುಣಪಡಿಸುವ ಚಿಕಿತ್ಸಕರಂತೆ ವರ್ತಿಸತೊಡಗಿದರು. ಹಾಗಾಗಿ ಭಾರತದ ಮೇಲಿನ ಆಡಳಿತವನ್ನು ನ್ಯಾಯಯುತ ಎಂಬ ಪ್ರಚಾರವನ್ನು ಪ್ರಸ್ತುತ ಪಡೆದವು.

ಈ ಹಂತದಲ್ಲಿ ಅವರಿಗೆ ಕಂಡುಬಂದ ವೈದಿಕ ಮಹಿಳಾ ಸಮಸ್ಯೆಗಳು ಜಾತಿಗಳ ಒಳಗೆ ಅಸ್ತಿತ್ವ ಹೊಂದಿದ್ದರಿಂದ ಅವುಗಳನ್ನು ಜಾತಿ/ಧರ್ಮ ಕೇಂದ್ರಿತ ಸಮಸ್ಯೆಗಳಾಗಿ ನೋಡುವುದಕ್ಕೆ ಪ್ರಯತ್ನಿಸಿದರು. ಹಾಗಾಗಿ ಮನುಸ್ಮೃತಿಯ ಅನುವಾದಕರು ಹಾಲ್‌ಹೆಡನ್‌ನ 'ಕೋಡ್ ಆಫ್ ಜೆಂಟೋ ಲಾಸ್' (Code of Gento Laws) ಎಂಬುದನ್ನು ಮತ್ತೆ ಕೆಲವು ಧಾರ್ಮಿಕ ಕೃತಿಗಳನ್ನು, ಪ್ರವಾಸಿಗರು ಹಾಗು ಮಿಷನರಿಗಳ ಕೆಲವು ಬರಹಗಳನ್ನು ಓದಿದ ಮಿಲ್ "ಹಿಂದೂಗಳು ತಮ್ಮ ಹೆಂಗಸರ ಸ್ಥಿತಿ ಶೋಚನೀಯವಾಗಿದೆ ಎಂದು ಹೇಳುತ್ತಾರೆ. ಈ ಮೂಲಕ ಅವರು ಪಿತೃಪ್ರಧಾನತೆಯ ಪ್ರಶ್ನೆಯನ್ನು ಎತ್ತದೆ ಮಹಿಳಾ ಸಮಸ್ಯೆಯನ್ನು ಜಾತಿ ಒಳಗೆ ನಿಭಾಯಿಸಲು ಪ್ರಯತ್ನಿಸುತ್ತಾರೆ." (ಅದೇ, ಪು, ೨೧)

ಆದ್ದರಿಂದ ಮಹಿಳೆ ಮತ್ತು ಜಾತಿ ಪ್ರಶ್ನೆಗಳು ಪ್ರತ್ಯೇಕವಾದ ಮಾರ್ಗಗಳಲ್ಲಿ ಗ್ರಹಿತವಾದವು. ಅಲ್ಲದೆ, ತಮ್ಮ ಪ್ರಯಾಣ ಬೆಳೆಸಿದವು. ಆದರೆ ಮಹಿಳಾ ಪ್ರಶ್ನೆಗಳು ಪಿತೃಪ್ರಧಾನತೆಯ ಸಾಮಾಜಿಕ ಸಂರಚನೆಯ ಹಂತದೊಂದಿಗೆ ಗುರುತುಗೊಳ್ಳಲಿಲ್ಲ. ಅಂದರೆ, ಅಸ್ಪೃಶ್ಯತೆಯು ಜಾತಿಪದ್ಧತಿಯೊಂದಿಗೆ ಗುರುತುಗೊಂಡಂತೆ ವಿಧವಾ, ಸತಿ, ಬಾಲ್ಯವಿವಾಹ ಇತ್ಯಾದಿ ಪ್ರಶ್ನೆಗಳು ಪಿತೃಪ್ರಧಾನ ವ್ಯವಸ್ಥೆಯೊಂದಿಗೆ ಗುರುತುಗೊಳ್ಳಲಿಲ್ಲ ಎನ್ನಬಹುದು.

ಮಹಿಳೆಯ ವಿವಾಹ ಸಂಬಂಧಿ ಸಮಸ್ಯೆಯನ್ನು ಮೇಲ್ಪದರಲ್ಲಿ ಗ್ರಹಿಸಿ ಚರ್ಚಿಸಿದರು. ಅಂದರೆ ಸತಿ ಪದ್ಧತಿಯು ಬ್ರಾಹ್ಮಣ ಸಮುದಾಯದ ಆಚರಣೆಯಾಗಿ ಕಂಡುಬಂದದ್ದು, ಮುಂದುವರೆದು ಬ್ರಾಹ್ಮಣ ಸಮಾಜವು ಪಿತೃಪ್ರಧಾನ ಸಮಾಜ ಎಂಬ ತೀರ್ಮಾನಕ್ಕೆ ತಲುಪಲಿಲ್ಲ. ಮೂಲಭೂತವಾದ ಲಿಂಗಾಧಾರಿತ ಶ್ರೇಣೀಕರಣದ ತಾರತಮ್ಯದ ಪ್ರಶ್ನೆಯನ್ನು ಎತ್ತದೆಯೇ ಮಹಿಳಾ ಸಮಸ್ಯೆಯನ್ನು ಇಲ್ಲಿ ವಿಶ್ಲೇಷಿಸಲಾಯಿತು. ಜಾತಿಪದ್ಧತಿಯು ಸಾಮಾಜಿಕ

ಸಂರಚನೆಯಾಗಿ ವಿಶ್ಲೇಷಣೆಗೊಳಪಡುತ್ತಿದ್ದಾಗಲೂ ಆ ಸಂರಚನೆ ಮೂಲಭೂತವಾಗಿ ಪಿತೃಪ್ರಧಾನವಾದುದು ಎಂಬುದನ್ನು ಗುರುತಿಸಲಿಲ್ಲ. ಹಾಗಾಗಿ ಲಿಂಗ ಮತ್ತು ಜಾತಿ ಪ್ರಶ್ನೆಗಳು ಒಟ್ಟಾಗಿ ಕಂಡುಕೊಳ್ಳಬಹುದಾಗಿದ್ದ ರಾಜಕೀಯ ನಿಲುವೊಂದನ್ನು ಇಲ್ಲವಾಗಿಸಿತು. ಅಲ್ಲದೆ ಜಾತಿಯಲ್ಲಿನ ಲಿಂಗಾಧಾರಿತ ಶ್ರೇಣೀಕರಣವನ್ನು ಕಡಿತಗೊಳಿಸಿ ಮಹಿಳೆ ಸಮಸ್ಯೆ ಎಂಬ ಏಕರೂಪಿ ನೆಲೆಯಲ್ಲಿ ಪ್ರಸ್ತುತಪಡಿಸಿತು.

ಹೀಗೆ ಐರೋಪ್ಯ ದೃಷ್ಟಿಕೋನವು ಮಹಿಳೆ ಮತ್ತು ಜಾತಿ ಪ್ರಶ್ನೆಗಳನ್ನು ಗುರುತಿಸಿಕೊಂಡರು. ಅದು ಪ್ರತ್ಯೇಕವಾಗಿಯೇ ಪರಿಭಾವಿಸಿತು. ಹಾಗಾಗಿ ಅವೆರಡೂ ಒಟ್ಟಾಗಿ ಸೇರಿ ಕಂಡುಕೊಳ್ಳಬಹುದಾಗಿದ್ದ ನಿಲವು ಹಾಗು ಭಾರತೀಯ ಸಮಾಜವು ಲಿಂಗ ಅಸಮಾನತೆ ಸಮಗ್ರ ನೀತಿಗಳು ಗುರುತಿಸಿಕೊಳ್ಳಲು ವಿಫಲವಾದವು. ಅದ್ದರಿಂದ ಈ ಎಲ್ಲಾ ಪ್ರಶ್ನೆಗಳನ್ನು ವಸಾಹತು ದೃಷ್ಟಿಕೋನದ ಐರೋಪ್ಯರ ಸಂದರ್ಭದಲ್ಲಿ ಅವರ ಅಗತ್ಯಕ್ಕೆ ಮಾತ್ರ ಎತ್ತಲ್ಪಟ್ಟವು ಎಂದು ಗುರುತಿಸಬಹುದು.

**೩.೨. ಮಹಿಳೆ, ಜಾತಿ; ದೇಶಿ ದೃಷ್ಟಿಕೋನ**

ಭಾರತದಲ್ಲಿ ಭಕ್ತಿ ಚಳುವಳಿಯ ನಂತರ ಮಹಿಳೆ ಮತ್ತು ಜಾತಿ ಶ್ರೇಣೀಕರಣದಲ್ಲಿನ ಅಸಮಾನತೆಯ ಪದರುಗಳನ್ನು ಕಡಿತಗೊಳಿಸುವ, ತಿದ್ದುಪಡಿ ಮಾಡುವಂತಹ ಪ್ರಯತ್ನಗಳು ಆರಂಭವಾದದ್ದು ವಸಾಹತು ಆಳ್ವಿಕೆ ಸಂದರ್ಭದಲ್ಲಿಯೇ ಎನ್ನಬಹುದು. ಇದರ ಮುಂಚೂಣಿಯಲ್ಲಿ ವಸಾಹತು ಆಡಳಿತವನ್ನು ಸಮರ್ಥಿಸುವ ಐರೋಪ್ಯರು ಒಂದು ಕಡೆಯಾದರೆ, ಏಕರೂಪಿ ನೆಲೆಯ ವಸಾಹತು ಶಿಕ್ಷಣ ಪಡೆದ ಭಾರತೀಯ ಸುಧಾರಣಾವಾದಿಗಳು ಇನ್ನೊಂದುಕಡೆ. ಆಗ ಐರೋಪ್ಯರಿಗೆ ಮಹಿಳೆ ಒಂದು ಸುಧಾರಿಸುವ ವಸ್ತುವಾದರೆ, ಭಾರತೀಯರಿಗೆ ಆಕೆ ಸಂಸ್ಕೃತಿಯ ಪ್ರತೀಕ. ಹಾಗೆಯೇ ಜಾತಿಪದ್ಧತಿಯು ಐರೋಪ್ಯರಿಗೆ ವಿಚಾರಧಾರೆಯಾದರೆ, ಭಾರತೀಯರಿಗೆ ಅದೊಂದು ಅನುಭವ ಪರಂಪಗತ ನಂಬಿಕೆಯಾಗಿತ್ತು. ಆಗ ಐರೋಪ್ಯರು ಜಾತಿ ಪದ್ಧತಿಯನ್ನು ವಿವರಿಸಿಕೊಳ್ಳುವ ಸಂದರ್ಭದಲ್ಲಿ ದೇಶಿಯರಿಂದ ಪ್ರಭಾವಿತರಾದರು. ಅದೇ ಸಮಯಕ್ಕೆ ದೇಶಿಯರ ಮೇಲೂ ಪ್ರಭಾವ ಬೀರಿದರು. ಹಾಗಾಗಿ ಇದನ್ನ ವಸಾಹತೋತ್ತರ ಚಿಂತನೆಗಳು "ಐರೋಪ್ಯ ಮತ್ತು ದೇಶಿಯರ ನಡುವಿನ ಕೊಡು ಕೊಳ್ಳುವಿಕೆ ಪ್ರಕ್ರಿಯೆಯು ದ್ವಿಮುಖತನ ಮೀರಿ ಏಕರೂಪಿ ನೆಲೆಯಲ್ಲಿ ಪರ್ಯಾವಸಾನಗೊಂಡಿದೆ" ಎನ್ನುವವು. (Parth chatterj: 1989;p-೬೦)

ಆರಂಭದಲ್ಲಿ ಐರೋಪ್ಯರು ಜಾತಿಪದ್ಧತಿಯು ಭಾರತೀಯ ಸಮಾಜಕ್ಕೊಂದು ನಾಗರಿಕ ವ್ಯವಸ್ಥೆಯನ್ನು ಒದಗಿಸಿತೆಂದು ಭಾವಿಸಿದರು. ಜಾತಿ ಪ್ರಶ್ನೆಯನ್ನು ಸಂಕುಚಿತಗೊಳಿಸಿ ಮಹಿಳಾ ಪ್ರಶ್ನೆಗಳನ್ನು ಮಹಿಳಾ ಸಮಸ್ಯೆಯಾಗಿಸಿಕೊಂಡು ಸ್ತ್ರೀ ಉದ್ಧಾರ ಕಾರ್ಯಕ್ರಮಗಳನ್ನು

ಹಮ್ಮಿಕೊಂಡರು. ಆದರೆ ಸ್ವಲ್ಪ ಅವಧಿಯಲ್ಲಿ ಐರೋಪ್ಯರಿಗೆ ಜಾತಿಪದ್ಧತಿಯ ಚರ್ಚೆಗಳು ಮುಂಚೂಣಿಗೆ ಬಂದವು. ಸಮಕಾಲೀನ ಸಂದರ್ಭದಲ್ಲಿ ಜಾತಿ ಪದ್ಧತಿಯು ಸಮಾಜದಲ್ಲಿ ಸೃಷ್ಟಿಸಿದ ತಾರತಮ್ಯ, ಶೋಷಣೆಗಳು ಸಮಸ್ಯೆಯಾಗಿ ಪ್ರಸ್ತುತಗೊಂಡವು. ಆಗ ಅವುಗಳಿಗೆ ಪರಿಹಾರ ಕ್ರಮವಾಗಿ ದಲಿತೋದ್ಧಾರ ಕಾರ್ಯಕ್ರಮಗಳು ರೂಪುಗೊಂಡವು. ಹೀಗೆ ವಸಾಹತುಶಾಹಿ ಕಾಲಘಟ್ಟದ ಸುಧಾರಣಾವಾದದ ಎರಡು ಪ್ರಮುಖ ಧಾರೆಗಳಲ್ಲಿ ಕಾಣಿಸಿಕೊಂಡವು. ಅವುಗಳೆಂದರೆ, ದಲಿತೋದ್ಧಾರ ಕಾರ್ಯಕ್ರಮಗಳು ಮತ್ತು ಸ್ತ್ರೀ ಉದ್ಧಾರ ಕಾರ್ಯಕ್ರಮಗಳು.

ಇಂತಹ ಚೌಕಟ್ಟಿನಲ್ಲಿ ಭಾರತದಲ್ಲಿನ ಲಿಂಗಾಧಾರಿತ ಮತ್ತು ಜಾತಿಧಾರಿತ ಅಸಮಾನತೆಯನ್ನು ಗ್ರಹಿಸುತ್ತಿರುವ ದೇಶಿ ಸುಧಾರಣಾವಾದವು ಪರಂಪರೆ ಹಾಗು ಆಧುನಿಕತೆಗಳೆರಡರ ನಡುವಿನ ಮಾರ್ಗವೊಂದನ್ನು ರೂಪಿಸಿಕೊಂಡಿತು. "ಅದು ಮೊದಲಿಗೆ ಅವುಗಳಿಗೆ ವೇದ ಪ್ರಾಮಾಣ್ಯವನ್ನು ಕಂಡುಕೊಳ್ಳಲು ಪ್ರಯತ್ನಿಸಿದವು. ಅಂದರೆ ವೇದ ಕಾಲದಲ್ಲಿ ಜಾತಿ ಪದ್ಧತಿಯ ಅಸ್ತಿತ್ವವಿತ್ತೆ? ಸ್ತ್ರೀಯರ ಸ್ಥಾನಮಾನದ ನೆಲೆ ಯಾವುದಾಗಿತ್ತು ಎಂಬುದರ ಆಧಾರದ ಮೇಲೆ ಅವುಗಳನ್ನು ವಿಶ್ಲೇಷಿಸಿದರು. ಈ ಶೋಧದಲ್ಲಿ ಅವರು ವೇದಕಾಲೀನ ಸ್ತ್ರೀಯರ ಸುಧಾರಿತ ಸ್ಥಾನವನ್ನು ಹೊಂದಿದ್ದರು ಎಂದು ಗುರುತಿಸುತ್ತಾರೆ. ಆ ಮಾದರಿಯೊಳಗೆ ಮಹಿಳಾ ಸಮಸ್ಯೆಯನ್ನು ಬಿಡಿಸಲೆತ್ನಿಸಿದರು. ಹಾಗೆಯೇ ಜಾತಿ ಪ್ರಶ್ನೆಗಳನ್ನು ಚಾತುರ್ವರ್ಣ್ಯದ ಮೂಲದಿಂದ ಗುರುತಿಸಿಕೊಂಡರು. ವೇದಕಾಲೀನ ವರ್ಣಾಧಾರಿತ ಸಮಾಜ ಕುರಿತು ಒಪ್ಪಿತ ಹಾಗು ಅದರ ಬದಲಾವಣೆ ರೂಪದಲ್ಲಿ ಗುರುತಿಸಿಕೊಂಡು ಜಾತಿ ವ್ಯವಸ್ಥೆ ಕುರಿತು ಟೀಕೆಯಲ್ಲಿ ತೊಡಗಿದರು. ವರ್ಣ ವ್ಯವಸ್ಥೆ ವೃತ್ತಿಯಾಧಾರಿತ ಶ್ರಮ ವಿಭಜನೆಯಾಗಿದ್ದು ಅದು ಮುಕ್ತಚಲನೆಯನ್ನು ಹೊಂದಿದೆ ಎಂದು ಅವರು ಸಮಜಾಯಿಸಿ ನೀಡಿದರು." (ಎಂ.ಉಷಾ; ೨೦೦೫; ಪು-೨೦) ಈ ಹಿನ್ನಲೆಯಲ್ಲಿ ಸುಧಾರಣಾವಾದವು ಒಂದುಕಡೆ ಒಪ್ಪುವ, ಮತ್ತೊಂದುಕಡೆ ಪ್ರತಿಭಟಿಸುವ ಧೋರಣೆಯನ್ನು ಹೊಂದಿತ್ತು. ಪರಿಣಾಮವಾಗಿ ಜಾತಿಪದ್ಧತಿಯ ಕುರಿತು ಸುಧಾರಣಾವಾದವು ಅದರ ಸಂರಚನೆ ಗ್ರಹಿಸಿ ವಿಶ್ಲೇಷಿಸುವ ಬದಲು ಒಂದು ನಿರ್ದಿಷ್ಟ ಜಾತಿಯ ಶೋಷಣೆಯ ಸಂಗತಿಯಾಗಿ ಗ್ರಹಿತವಾಯಿತು. ಅಂದರೆ ಪ್ರತಿಯೊಂದು ಜಾತಿಯಲ್ಲಿ ಶ್ರೇಣೀಕರಣದ ಸ್ಥಾನಗಳನ್ನು ಗುರುತಿಸುವ ಬದಲಾಗಿ ಸ್ಪೃಶ್ಯ-ಅಸ್ಪೃಶ್ಯ ನೆಲೆಯ ವಿಭಾಗ ಕ್ರಮವನ್ನು ಪರಿಭಾವಿಸಲಾಯಿತು. ಹೀಗೆ ದೇಶಿಯ ಸುಧಾರಣಾವಾದವು ಬ್ರಿಟಿಷ್‌ರು ಆರಂಭಿಸಿ ಅಪೂರ್ಣಗೊಳಿಸಿದ್ದ ಲಿಂಗ ಹಾಗು ಜಾತಿ ಪ್ರಶ್ನೆಗಳೆರಡನ್ನೂ ಮಹಿಳೆ ಮತ್ತು ಅಸ್ಪೃಶ್ಯರ ಸಮಸ್ಯೆಯಾಗಿ ಕಟ್ಟಿಕೊಂಡಿತು ಎನ್ನಬಹುದು.

ದೇಶಿಯ ಸುಧಾರಣಾವಾದದ ಮಹಿಳೆ ಮತ್ತು ಜಾತಿ ಸಂಬಂಧ ದೃಷ್ಟಿಕೋನವನ್ನು ಅದರ ಲಕ್ಷಣಗಳ ಹಿನ್ನಲೆಯಲ್ಲಿ ಮೂರು ಮಾದರಿಯಾಗಿ ಗುರುತಿಸಬಹುದು. ಒಂದು: ಸ್ತ್ರೀ ಸುಧಾರಣೆಯಲ್ಲಿ ಜಾತಿ ಪ್ರಶ್ನೆಯನ್ನು ಅಲಕ್ಷ್ಯವಾಗಿ ಪರಿಭಾವಿಸಿದ್ದು, ಎರಡು: ಸ್ತ್ರೀ ಸುಧಾರಣೆಗೆ ಸಮಾಂತರವಾಗಿ ಜಾತಿ ಪ್ರಶ್ನೆಯನ್ನು ಪರಿಭಾವಿಸಿದ್ದು, ಮೂರು: ಜಾತಿ ಪ್ರಶ್ನೆಗಳ ಹಿನ್ನಲೆಯಲ್ಲಿ ಸ್ತ್ರೀ ಸುಧಾರಣೆ ಆಲೋಚನೆಗಳನ್ನು ಪ್ರಸ್ತುತ ಪಡಿಸಿದ್ದು. ಹಾಗಾಗಿ ಮೊದಲನೆ ಮಾದರಿಯಲ್ಲಿ ಬರುವವರು ಪ್ರಾಥಮಿಕ ಹಂತದ ಸುಧಾರಣಾವಾದಿಗಳು ರಾಜಾರಾಮ ಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ, ರಾನಡೆ ಮುಂತಾದವರು ಇದರ ಪ್ರಮುಖ ವಕ್ತಾರರು. ಇವರು ಐರೋಪ್ಯರು ಆರಂಭದಲ್ಲಿ ಮಾದರಿಯಾದ ಜಾತಿ ಪ್ರಶ್ನೆಗಳನ್ನು ಸಂಕುಚಿತಗೊಳಿಸಿ ಮಹಿಳೆ ಪ್ರಶ್ನೆಯನ್ನು ಮಹಿಳಾ ಸಮಸ್ಯೆಯಾಗಿಸುವುದನ್ನು ಅನುಸರಿಸಿದರು. ಆದರೆ ತಮ್ಮ ಜಾತಿ ಒಳಗಿನ ಮಹಿಳೆಯರ ಸಮಸ್ಯೆಯ ಜಾತಿಯೊಂದಿಗೆ ತಳುಕು ಹಾಕದೆ ವಿವಾಹ ಸಂಬಂಧಿ ಸಮಸ್ಯೆಗಳನ್ನು ಮುಖ್ಯವಾಗಿ ಪರಿಗಣಿಸಿದ್ದರು. ಅಂದರೆ ಸತಿ, ವಿಧವೆ, ಬಾಲ್ಯವಿವಾಹಗಳನ್ನು ಮಹಿಳೆ ಸಮಸ್ಯೆ ಅಂತ ಪ್ರಸ್ತುತಪಡಿಸುವ ಪ್ರಯತ್ನಗಳಾದವು. ಈ ತರಹದ ಅವರ ಆಲೋಚನೆಗಳಿಗೆ ಅವರ ಸ್ವಂತ ಅನುಭವಗಳೇ ಆಧಾರವಾಗಿದ್ದವು. "ರಾಜಾರಾಮ ಮೋಹನರಾಯ ಅವರು ಸತಿಸಹಗಮನ ಆಚರಣೆಯನ್ನು ತಮ್ಮ ಮನೆಯಲ್ಲಿಯೇ ಕಂಡವರು. ಅಂದರೆ ಅವರ ಅಣ್ಣ ಸತ್ತಾಗ ಅವರ ಅತ್ತಿಗೆ ಶಾಸ್ತ್ರೋಕ್ತವಾಗಿ ಉರಿಯುವ ಜ್ವಾಲೆಗೆ ಜೀವಂತ ಧುಮುಕಿ ಸತ್ತುಹೋಗಿದ್ದನ್ನು ಕಣ್ಣಾರೆ ಕಂಡ ರಾಜಾರಾಮ ಮೋಹನರಾಯರು ಈ ದುಷ್ಟ ಪದ್ಧತಿಯನ್ನು ನಿಷೇಧಿಸಬೇಕೆಂದು ಅಭಿಪ್ರಾಯಕ್ಕೆ ಬಂದರು. ಇದು ಹೆಣ್ಣನ್ನು ನಿಗೂಢ ರೀತಿಯಲ್ಲಿ ಕೊಲೆಮಾಡುವ ಅಧರ್ಮ ಪದ್ಧತಿ ಎಂದರು. ವಿಧವೆ ತಾನು ಆತ್ಮಾಹುತಿ ಮಾಡಿಕೊಳ್ಳುವುದು ಯಾವ ವಿಧವೆ ಆತ್ಮಾಹುತಿಗೆ ಅರ್ಪಿಸಿಕೊಳ್ಳುವುದಿಲ್ಲವೋ ಆಕೆ ಅನುಭವಿಸುವ ಅಗೌರವ ತೇಜೋವಧೆ ಮತ್ತು ಕಿರುಕುಳಗಳನ್ನು ಸಂಪ್ರದಾಯಸ್ಥ ಬ್ರಾಹ್ಮಣ ಜಾತಿಯಲ್ಲಿ ಜನಿಸಿದ ಮೋಹನರಾಯರು ನಿತ್ಯವು ನೋಡಿ ಈ ಅನಿಷ್ಟ ಪದ್ಧತಿಯನ್ನು ತೊಲಗಿಸುವ ನಿರ್ಧಾರಕ್ಕೆ ಬಂದರು". (ಹ.ಸೋಮಶೇಖರ್: ೨೦೦೭; ಪು.೧೨೪) ಆಗ ಆಡಳಿತದ ಸೂತ್ರ ಹಿಡಿಯುವ ಬ್ರಿಟಿಷರಿಗೆ ವಸ್ತು ಸ್ಥಿತಿಯನ್ನು ವಿವರಿಸಿ ಸ್ತ್ರೀಯರನ್ನು ಅಮಾನವೀಯವಾಗಿ ನಡೆಸಿಕೊಳ್ಳುತ್ತಿರುವ ಬಗೆಯನ್ನು ಮನವರಿಕೆ ಮಾಡಿಕೊಟ್ಟು ಸತಿಸಹಗಮನ, ಬಾಲ್ಯವಿವಾಹ ಮುಂತಾದ ಸಾಮಾಜಿಕ ಪಿಡುಗುಗಳ ನಿಷೇಧದ ತುರ್ತನ್ನು ಪ್ರಸ್ತುತಪಡಿಸಿದರು.

ಹಾಗೆಯೇ "೧೮೨೮ ರಲ್ಲಿ 'ಬ್ರಹ್ಮಸಮಾಜ'ವನ್ನು ಸ್ಥಾಪಿಸಿ, ಸ್ತ್ರೀ ಸಂಬಂಧಿ ಸಂಗತಿಗಳನ್ನು ಚರ್ಚಿಸತೊಡಗಿದರು. ಸ್ತ್ರೀ ವಿರೋಧಿ ಚಟುವಟಿಕೆಗಳನ್ನು ಖಂಡಿಸಿದರು. ಅದೇ ಸಮಯದಲ್ಲಿ ಲಾರ್ಡ್ ವಿಲಿಯಂ ಬೆಂಟಿಕ್‌ನನ್ನು ಭೇಟಿಮಾಡಿ "ಸತಿಪದ್ಧತಿ"ಯಲ್ಲಿನ ಕ್ರೌರ್ಯವನ್ನು

ಅರ್ಥಮಾಡಿಸಿ ಡಿಸೆಂಬರ್ ೪, ೧೮೨೯ ರಂದು ಸತಿಪದ್ಧತಿ ನಿಷೇಧ ಆದೇಶ ಹೊರಡಿಸುವಲ್ಲಿ ಸಫಲರಾದರು." (ಹ.ಸೋಮಶೇಖರ್: ೨೦೦೭; ಪು.೧೩೦)

ಇನ್ನು ಈಶ್ವರಚಂದ್ರ ವಿದ್ಯಾಸಾಗರ ಕುರಿತು ಹೇಳುವುದಾದರೆ: "ರಾಜಾರಾಮ ಮೋಹನರಾಯರು ಬಾಲ್ಯವಿವಾಹ ಮತ್ತು ಸಹಗಮನಗಳ ವಿರುದ್ಧ ತೀವ್ರ ತರಹದ ಹೋರಾಟ ನಡೆಸಿದ್ದರು. ಆಗ ಅವು ಪೂರ್ಣವಾಗಿ ನಿಂತಿರಲಿಲ್ಲ." (ಜೆರಾಲ್ಡಿನ್ ಪೋರ್ಬ್ಸ್: ೨೦೦೧; ಪು.೩೨-೩೩) ಇವು ಈಶ್ವರಚಂದ್ರರನ್ನು ಹೆಚ್ಚು ಗಮನ ಸೆಳೆದವು. ಹಾಗಾಗಿ ಬಾಲ್ಯವಿವಾಹ ಪದ್ಧತಿಯಿಂದಾಗಿ ಅನೇಕರು ಬಾಲವಿಧವೆಯರಾಗುತ್ತಿದ್ದರು. ಏಕೆಂದರೆ ಶ್ರೇಷ್ಠಕವೆನಿಸಿದ ಗಂಡಸರು ಎಷ್ಟಾದರು ಮದುವೆಗಳನ್ನು ಯಾವುದೇ ವಯಸ್ಸಿನಲ್ಲಿ ಮಾಡಿಕೊಳ್ಳಬಹುದಿತ್ತು. ಅದ್ದರಿಂದಲೇ ಅನೇಕ ಹೆಂಡತಿಯರು ಒಬ್ಬ ಗಂಡ ಸತ್ತರೆ ಏಕಕಾಲಕ್ಕೆ ಅನೇಕ ವಿಧವೆಯರಾಗುತ್ತಿದ್ದರು. ಇದರಲ್ಲಿ ಬಾಲ್ಯವಿಧವೆಯರೇ ಹೆಚ್ಚು. ಈ ಹಿನ್ನಲೆಯಲ್ಲಿ ಈಶ್ವರ ಚಂದ್ರರು ವಿಧವಾ ವಿವಾಹ ಮತ್ತು ಬಹುಪತ್ನಿತ್ವ ಈ ಎರಡರ ಕಡೆ ಹೆಚ್ಚು ಆಸಕ್ತರಾದರು. ಅಲ್ಲದೆ ವಿಧವಾ ವಿವಾಹದ ಪರವಾಗಿ ಪ್ರಚಾರ ಮಾಡಲಾರಂಭಿಸಿದರು. ಧರ್ಮಶಾಸ್ತ್ರಗಳನ್ನು ಅಧ್ಯಯನ ಮಾಡಿ ಹಿಂದೂ ಧರ್ಮಶಾಸ್ತ್ರಗಳಲ್ಲಿ ವಿಧವೆ ವಿವಾಹಕ್ಕೆ ನಿಷೇಧವಿಲ್ಲ ಎಂದು ದೃಢಪಡಿಸಿದರು. ಇದನ್ನೊಂದು ಸಾಮಾಜಿಕ ಆಂದೋಲನವಾಗಿ ರೂಪಿಸಿದರು. "ಈ ಮೂಲಕ ೧೦೦೦ ಜನರ ಸಹಿ ಇರುವ ಮನವಿಯೊಂದನ್ನು ಬ್ರಿಟಷ್ ಸರ್ಕಾರಕ್ಕೆ ಸಲ್ಲಿಸಿದರು. ಅನೇಕ ವಾದ-ವಿವಾದಗಳ ನಡುವೆ ೧೮೫೬ ರ ಜುಲೈ ೨೬ ರಂದು ವಿಧವಾ ವಿವಾಹ ಕಾಯಿದೆ ಅಧಿನಿಯಮವಾಯಿತು. ನಂತರ ವಿಧವಾ ಪುನರ್ ವಿವಾಹವನ್ನು ಸಂಘಟಿಸಲಾಯಿತು." (ಹ.ಸೋಮಶೇಖರ್: ೨೦೦೭; ಪು.೧೩೫)

ಈ ಎಲ್ಲಾ ಚಟುವಟಿಕೆಗಳನ್ನು ಆಧರಿಸಿ ಆಂದೋಲನದ ಮೊದಲ ಮಾದರಿಯನ್ನು ಅರ್ಥೈಸುವುದಾದರೆ ಮಹಿಳೆಯ ಸಮಸ್ಯೆಯನ್ನು ಸೀಮಿತಾರ್ಥದಲ್ಲಿ ಪರಿಭಾವಿಸಿದ್ದನ್ನು ಗಮನಿಸಬಹುದು. ಅಂದರೆ ಇಲ್ಲಿ ಜಾತಿ ಪರಿಕಲ್ಪನೆ ಸಂಪೂರ್ಣ ನಿರ್ಲಕ್ಷ್ಯಕ್ಕೆ ಒಳಗಾಗಿವೆ ಎನ್ನಲಾಗುವುದಿಲ್ಲ. ಸಹಗಮನ ನಿಷೇಧ, ವಿಧವಾ ಪುನರ್ ವಿವಾಹ ಚಟುವಟಿಕೆ ಆಯಾ ಜಾತಿ ಒಳಗೆ ನಡೆಯುವ ಸಂಗತಿಗಳಾಗಿವೆ. ಜಾತಿ ಪ್ರಜ್ಞೆಯ ಢಾಳತೆಯನ್ನು ಪ್ರತಿನಿಧಿಸುತ್ತವೆ. ಹಿಂದೂ ಸ್ತ್ರೀ, ಬ್ರಾಹ್ಮಣ ಸ್ತ್ರೀ ಸಮಸ್ಯೆಯನ್ನು ಜಾತಿ ಪದ್ಧತಿಯ ಒಳಗೆ ಗ್ರಹಿಸಿದರು. ಜಾತಿ ವಿನಾಶದ ಮೂಲಕ ಅದನ್ನು ಹೋಗಲಾಡಿಸಬಹುದು ಎಂದು ಗುರುತಿಸಲಿಲ್ಲ. ಬೇರೊಂದು ವಿಧಾನದಲ್ಲಿ ಹೇಳುವುದಾದರೆ ಜಾತಿ ನಿರ್ಮೂಲನೆ ಮೂಲಕ ಬ್ರಾಹ್ಮಣ ಮಹಿಳೆಯರ ಬಿಕ್ಕಟ್ಟುಗಳನ್ನು ಬಗೆಹರಿಸಬಹುದು ಎಂದು ಭಾವಿಸುವುದಿಲ್ಲ.

ಭಾರತೀಯ ಮಹಿಳೆಯರ ಪರಿಸ್ಥಿತಿಯು ಜಾತಿಪದ್ಧತಿಯೊಂದಿಗೆ ನಿಕಟ ಸಂಬಂಧ ಹೊಂದಿವೆ. ಜಾತಿಪದ್ಧತಿಯು ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕೆಂಬ ಹಿನ್ನಲೆಯಲ್ಲಿ ಬಹಳಷ್ಟು ಮೌಲ್ಯಗಳು, ಆಚರಣೆಗಳನ್ನು ಸ್ತ್ರೀ ಮೇಲೆ ಹೇರಲಾಗಿದೆ. ಜಾತಿಗಳ ಪ್ರತ್ಯೇಕತೆ ಕಾಪಾಡುವುದು, ಪಾವಿತ್ರ್ಯ ಉಳಿಸಿಕೊಳ್ಳಬೇಕು. ಅದರ ಸಂಕರಕ್ಕೆ ಕಾರಣರಾದವರನ್ನು ಶಿಕ್ಷೆಗೊಳಪಡಿಸುವುದು ಎರಡನ್ನು ಸ್ತ್ರೀಯೇ ಭರಿಸಬೇಕೆಂಬ ಒತ್ತಡವು ಸ್ತ್ರೀ ಶೋಷಣೆಯ ಮೂಲಭೂತ ಕಾರಣಗಳಲ್ಲಿ ಪ್ರಮುಖವಾದುದಾಗಿದೆ. ಆದರೆ ಇದನ್ನು ನಿರ್ಲಕ್ಷಿಸಿ ಮಹಿಳಾ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳುವ ಭೂಮಿಕೆ ಒಳಗೆನೇ ಲಿಂಗ ಮತ್ತು ಜಾತಿ ಪ್ರಶ್ನೆಗಳು ಬೇರೆ ಬೇರೆ ಎನ್ನುವ ಪ್ರಶ್ನೆಗಳಾಗಿ ಉಳಿಯುತ್ತವೆ. ಇದು ಸುಧಾರಣಾವಾದಿಗಳಿಗೆ ಅವೆರಡನ್ನು ಪ್ರತ್ಯೇಕವಾಗಿ ಪರಿಭಾವಿಸಿ ನಿರ್ವಹಿಸುವ ಕ್ರಮವೊಂದನ್ನು ಒದಗಿಸಿತು. ಈ ಕ್ರಮದಲ್ಲಿ ಮಹಿಳಾ ಹಾಗು ಅಸ್ಪೃಶ್ಯತೆ ಸಮಸ್ಯೆಗಳು ತಮ್ಮಷ್ಟಕ್ಕೆ ತಾವೇ ಸ್ವಯಂಪೂರ್ಣವಾದ ಸಮಸ್ಯೆಗಳು ಅವುಗಳ ಒಳಗೆ ಸಂಬಂಧವಿಲ್ಲ. ಆಯಾ ಸಮಾಜದ ಅಂತರಿಕ ಸಮಸ್ಯೆಯಾಗಿಯೇ ಪ್ರಸ್ತುತಪಡೆಯಿತು. ಈ ಹಿನ್ನಲೆಯಲ್ಲಿ ಸುಧಾರಿಸುವ ಕ್ರಮಗಳು ರೂಪುಗೊಂಡವು. ಹಾಗಾಗಿ ಇಲ್ಲಿ ದಲಿತರನ್ನು ಉದ್ಧಾರಕ್ಕಾಗಿ ಹಾಕಿಕೊಳ್ಳುವ ಕಾರ್ಯಕ್ರಮಗಳು ಬೇರೆಯಾಗುತ್ತವೆ. ಬ್ರಾಹ್ಮಣ ಸ್ತ್ರೀಯ ಸಮಸ್ಯೆ ಪರಿಹಾರ ಬೇರೆ ಆಗುತ್ತದೆ. ಈ ಬಗೆಯ ಗ್ರಹಿಕೆಯಿಂದಾಗಿಯೇ ಮಹಿಳೆಯರನ್ನು ಸಾರ್ವತ್ರಿಕರಿಸಿಕೊಂಡು ಅತ್ಯಂತ ಕಾಳಜಿ ವಹಿಸುವುವವರಾಗಿ ಕಂಡು ಬಂದಷ್ಟು ಸುಧಾರಕರು ಸಮಕಾಲೀನ ಸಮಾಜದಲ್ಲಿದ್ದ ಅಸ್ಪೃಶ್ಯರ ಸಮಸ್ಯೆ ಮತ್ತು ಅದರಲ್ಲಿ ಪಿತೃಪ್ರಧಾನತೆ, ಹಾಗೂ ಜಾತಿಶ್ರೇಣೀಕರಣಗಳಲ್ಲಿ ಪಿತೃಪ್ರಧಾನತೆ ಅದಕ್ಕನುಗುಣವಾಗಿರುವ ಲಿಂಗಾಧಾರಿತ ಶ್ರೇಣೀಕರಣ ಹಾಗು ಜಾತಿಶ್ರೇಣೀಕರಣದಲ್ಲಿ ಪಿತೃಪ್ರಧಾನತೆ ಕುರಿತು ಗಮನಹರಿಸುವುದಿಲ್ಲ ಎಂದು ಹೇಳಬಹುದು.

ಎರಡನೆ ಮಾದರಿಯೆಂದರೆ : ಸ್ತ್ರೀ ಸುಧಾರಣೆಗೆ ಸಮಾನಾಂತರವಾಗಿ ಜಾತಿ ಪ್ರಶ್ನೆಯನ್ನು ಪರಿಭಾವಿಸಿದ್ದು. ಜ್ಯೋತಿಬಾ ಫುಲೆ ಮತ್ತು ಪೆರಿಯಾರ್ ಇದರ ಪ್ರಮುಖ ವಕ್ತಾರರಾಗಿದ್ದಾರೆ. ಜ್ಯೋತಿಬಾ ಫುಲೆಯವರು ಸುಧಾರಣಾವಾದಿ ಚಟುವಟಿಕೆಯ ವ್ಯಾಪ್ತಿಯೊಳಗೆ ಗುರುತಿಸಿಕೊಳ್ಳುವವರು. ಇವರು ಮೊದಲಿಗೆ ಮಹಿಳೆ ಮತ್ತು ಜಾತಿ ಪ್ರಶ್ನೆಯನ್ನು ಹತ್ತಿರ ತರುವ ಪ್ರಯತ್ನಮಾಡುತ್ತಾರೆ. ಇದನ್ನು ಅವರ ಚಟುವಟಿಕೆಗಳಿಂದ ಗುರುತಿಸಬಹುದು.

"ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವುದೇ ತಪ್ಪು, ಸ್ತ್ರೀ ವಿದ್ಯಾರ್ಜನೆಗೆ ಅನರ್ಹಳು ಎಂದು ನಂಬಿದ್ದ ಕಾಲದಲ್ಲಿ ಫುಲೆ ೧೮೪೮ ರಲ್ಲಿ ಮೊಟ್ಟಮೊದಲು ಕನ್ಯಾಶಾಲೆಯನ್ನು ಸ್ಥಾಪಿಸಿದರು. ೧೮೫೧ ರಲ್ಲಿ ದಲಿತರಿಗಾಗಿ ಮೊಟ್ಟಮೊದಲ ಶಾಲೆ ಆರಂಭಿಸಿದರು." (ಮುರಳೀಧರ ಜಗತಾಪ: ೨೦೦೦; ಪು.೩೯)

"ಫುಲೆಯವರು ೧೮೬೩ ವಿಧವೆಯರು ಹೆತ್ತ ಮಕ್ಕಳನ್ನು ಪೋಷಿಸಲು ಅನಾಥಾಲಯ ಆರಂಭಿಸಿದರು. ಅಲ್ಲದೆ, ವಿಧವೆಯರಿಗೆ ೧೮೬೪ಳ ರಲ್ಲಿ ವಿಧವೆ ವಿವಾಹ ನೆರವೇರಿಸುವ ಮೂಲಕ ಈ ಕುರಿತು ಒಂದು ವೇದಿಕೆಯನ್ನು ಸಂಘಟಿಸಿದರು." (ಅದೇ,ಪು-೬೬)

"ವಿಧವೆಯರ ಮುಂಡನೆ ಮಾಡುವುದನ್ನು ಮನುಷ್ಯರ ಮೇಲೆ ಮನುಷ್ಯರೇ ನಡೆಸುವ ಕ್ರೂರ ಹಿಂಸೆ ಎಂದು ಭಾವಿಸಿದ ಫುಲೆ ಬಾಲಹೆಣ್ಣುಮಕ್ಕಳನ್ನು ತಲೆ ಬೋಳಿಸಿ ವಿಕಾರಗೊಳಿಸುವುದನ್ನು ಪ್ರತಿಭಟಿಸಿದರು. ಇಂಥ ಬರ್ಬರ ಕೃತ್ಯದ ವಿರುದ್ಧ ಆಂದೋಲನ ನಡೆಸಿದರು. ಅಲ್ಲದೆ ಪುಣೆ ಕ್ಷೌರಿಕರನ್ನು ಸಂಘಟಿಸಿ ಅವರಿಗೆ ಅರಿವು ಮೂಡಿಸಿದರು. ಹಾಗೆಯೇ ವಿಧವೆಯರು ಬಸಿರಾಗುವುದಕ್ಕೆ ಬಾಲಹತ್ಯೆ ನಿಷೇಧಕ ಪ್ರಸೂತಿ ಗೃಹವನ್ನು ಆರಂಭಿಸಿದರು." (ಅದೇ, ಪು-೬೫)

೧೮೭೩ ರಲ್ಲಿ 'ಸತ್ಯಶೋಧಕ ಸಮಾಜ'ವನ್ನು ಸ್ಥಾಪಿಸಿದರು. ಈ ವೇದಿಕೆಯ ಮುಖಾಂತರ ಅನೇಕ ಬಾಲ್ಯವಿವಾಹ, ಸತಿ ವಿರುದ್ಧ ಸಾಮಾಜಿಕ ಚಳುವಳಿಯನ್ನು ಮಾಡಿದರು. ಈ ಹಿನ್ನಲೆಯಲ್ಲಿ ಫುಲೆಯವರು 'ದಾಸ್ಯ' ಎಂಬ ತಮ್ಮ ಕೃತಿಯಲ್ಲಿ "ಸಾವಿರಾರು ವರ್ಷಗಳಿಂದ ಅಸ್ತಿತ್ವದಲ್ಲಿದ್ದ ಮೇಲ್ಜಾತಿಯ ಸರ್ವಸ್ವಾಮ್ಯ ಪದ್ಧತಿಯನ್ನು ಅದರ ಆಕ್ರಮಣದಿಂದ ರಚನೆಯಾದ ಶೂದ್ರತಿಶೂದ್ರರ, ಸ್ತ್ರೀಯರ ದಾಸ್ಯದ ಇತಿಹಾಸವನ್ನು ನಿರೂಪಿಸುತ್ತಾರೆ. ಬ್ರಾಹ್ಮಣ ಮತ್ತು ಶೂದ್ರರು ಧರ್ಮದ ಹೆಸರಿನಲ್ಲಿ ಜಾತೀಯತೆ ಮತ್ತು ಅಸ್ಪೃಶ್ಯತೆಗಳನ್ನು ಸಾಮಾಜಿಕ ದಾಸ್ಯವನ್ನು ಉಳಿಸಿ ಬೆಳಿಸಿಕೊಂಡು ಬಂದಿವೆ ಎಂದು ಈ ಕೃತಿಯಲ್ಲಿ ಸಾಬೀತುಪಡಿಸುತ್ತಾರೆ." (ಅದೇ, ಪು-೮೦) ಪುಲೆಯವರ ಈ ಎಲ್ಲ ಸಂಗತಿಗಳು ಸಹ ಮಹಿಳೆ ಮತ್ತು ಜಾತಿಯಲ್ಲಿರುವ ಮಹಿಳೆಯರ ಸಮಸ್ಯೆ ಪ್ರಸ್ತುತಪಡಿಸಿರುವುದಕ್ಕೆ ಸಾಕ್ಷಿಯಾಗಿವೆ.

ಇವುಗಳು ಜಾತಿ ಪದ್ಧತಿ ಭಾರತೀಯ ಮಹಿಳೆ ಸಂದರ್ಭದಲ್ಲಿ ಅತ್ಯಂತ ಮಹತ್ವ ಪಾತ್ರ ವಹಿಸುತ್ತದೆ. ಅದು ಅದ್ಭುತ ಪರಿಣಾಮ ಉಂಟುಮಾಡುತ್ತದೆ. ಈ ಪರಿಣಾಮ ಏಕರೂಪಿಯಾಗಿಲ್ಲ. ಆದರೆ ಒಂದೇ ಬಗೆಯ ತೀವ್ರತೆಯನ್ನು ಹೊಂದಿದೆ. ಹಾಗಾಗಿಯೇ ವೈಧವ್ಯಕ್ಕೆ ಒಳಗಾಗಿರುವ ಮಹಿಳೆಯರು ವೈಧವ್ಯ ಎಂಬ ಸಾಮಾಜಿಕ ನಿಯಮಗಳನ್ನು ಮುರಿಯುವ ಮೂಲಕವೇ ಆಯಾ ಸಮುದಾಯಕ್ಕೆ ಅಪವಿತ್ರವೆನಿಸಿ, ಅಸ್ಪೃಶ್ಯಗಳಾಗುತ್ತಾಳೆ. ಈ ಕಾರಣಕ್ಕಾಗಿಯೇ ಆ ಕಡೆ ಸಮಾಜದಲ್ಲಿ ಅತ್ಯಾಚಾರ, ದೌರ್ಜನ್ಯ, ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾಳೆ. ಈ ಸಮಾಜದಲ್ಲಿ ಮಹಿಳೆ ದೌರ್ಜನ್ಯಕ್ಕೊಳಗಾಗುವುದು ಅಪವಿತ್ರದ ಸ್ಥಿತಿಯನ್ನು ಮುಂದುವರಿಸುವ ಪಿತೃಪ್ರಧಾನತೆಯ ವಿಕಾರ ರೂಪವಾಗಿದೆ. ಅದ್ದರಿಂದ ಅಸ್ಪೃಶ್ಯತೆಯು ಅಪವಿತ್ರತೆಯನ್ನು ಅಪವಿತ್ರತೆಯು ಅಸ್ಪೃಶ್ಯತೆಯನ್ನು ನಿಷ್ಪನ್ನಗೊಳಿಸುವ ಮೂಲಕವೇ ಜಾತಿಶ್ರೇಣೀಕರಣದ ಎಲ್ಲ ಹಂತಗಳು ಸ್ತ್ರೀಯನ್ನು ಶೋಧಿಸುತ್ತವೆ ಎಂದು ಗುರುತಿಸಬಹುದು.

ಇನ್ನು ಪೆರಿಯಾರ ಸಹ ಲಿಂಗ ಮತ್ತು ಜಾತಿ ಪ್ರಶ್ನೆಗಳನ್ನು ಸಮಾನ ಪಾತಳಿಯಲ್ಲಿ ಗ್ರಹಿಸುತ್ತಾರೆ. ಇದನ್ನ ಅವರ ಬರಹಗಳಿಂದ ಗ್ರಹಿಸಬಹುದು. ಅವರ ಪ್ರಕಾರ "ಜಾತಿಯು ಏಕಕಾಲಕ್ಕೆ ಒಂದು ವ್ಯವಸ್ಥೆ ಹಾಗು ಚಿಂತನೆ ಆಗಿದೆ. ಹಾಗೆಯೇ ಇದು ಸಾಮಾಜಿಕ ಸಂಬಂಧಗಳು ಹೇಗಿರಬೇಕು ಎಂಬುದನ್ನು ನಿರ್ಧರಿಸುತ್ತದೆಯಲ್ಲದೆ, ಒಂದು ವ್ಯವಸ್ಥೆಯಾಗಿ ಮೇಲ್ಜಾತಿಗಳ ಪರವಾದ ಮಧ್ಯವರ್ತಿಯಾಗಿ ಕೆಲಸಮಾಡುತ್ತದೆ. ಅವರು ಸಮಾಜದಲ್ಲಿ ಶ್ರೇಷ್ಠರು ಎಂಬ ಧ್ವನಿಯನ್ನು ಉಳಿಸುತ್ತದೆ. ಸಮಾಜದಲ್ಲಿ ಉಚ್ಚ-ನೀಚ ಎಂಬ ಸ್ಥಾನ ನಿರ್ಧರಿಸುತ್ತದೆ" ಎನ್ನುತ್ತಾರೆ. (ಸಂ: ವಿರೂಪಾಕ್ಷಿ ಪೂಜಾರಹಳ್ಳಿ: ೨೦೦೭; ಪು-೧೩೮)

ಶೂದ್ರ ಎಂಬುದನ್ನು 'ದಾಸಿಯ ಮಗ' ಎಂದು ವಿವರಿಸಿಕೊಳ್ಳುವ ಅವರು ಶೂದ್ರದಂತಹ ಸಮುದಾಯವನ್ನು ಭಾರತೀಯ ಸಮಾಜದ ಹೆಣ್ಣಿನ ಲೈಂಗಿಕತೆಯ ಮೇಲೆ ನಡೆಸಿದ ದೌರ್ಜನ್ಯದಿಂದಲೇ ಸೃಷ್ಟಿಯಾಯಿತು ಎನ್ನುತ್ತಾರೆ. ಹಾಗಾಗಿ, ಅವರ ಪ್ರಕಾರ "ಹೆಣ್ಣಿನ ಲೈಂಗಿಕತೆಯ ಮೇಲೆ ಅಧಿಕಾರ ಸ್ಥಾಪಿಸುವ ಅದನ್ನು ದುರ್ಬಳಕೆ ಮಾಡಿಕೊಂಡ ಸಂಪ್ರದಾಯಿಕ ಜಾತಿ ಆಧಾರಿತ ವಿವಾಹ ಸಂಸ್ಥೆಯ ನಿಯಮಗಳನ್ನು ನಾಶಗೊಳ್ಳಬೇಕು ಅಂದರೆ ಸ್ತ್ರೀ - ಪುರುಷರು ಸಾಂಪ್ರದಾಯಿಕ ವಿವಾಹ ಪದ್ಧತಿಯನ್ನು ಮುರಿಯುವ ಮೂಲಕ ಆತ್ಮಗೌರವದ ವಿವಾಹ ಸ್ವೀಕರಿಸಬೇಕು. ಆಗ ಮಾತ್ರವೇ ಲಿಂಗಸಮಾನತೆ ಸಾಧ್ಯವೆನ್ನುತ್ತಾರೆ." (ಗಮನಿಸಿ: (ಸಂ) ವಿರೂಪಾಕ್ಷಿ ಪೂಜಾರಹಳ್ಳಿ)

ಹಾಗಾಗಿಯೇ ೧೯೨೧ ರ ಅಖಿಲ ಭಾರತ ಜನಸಂಖ್ಯಾಗಣತಿಯ ಪ್ರಕಾರ ಅಂದಿನ ಬಾಲವಿಧವೆಯರ ಸಂಖ್ಯೆ ಹೀಗಿದೆ: ೧ ರಿಂದ ೫ ವರ್ಷದ ವರೆಗಿನ ಹೆಣ್ಣು ಮಕ್ಕಳಲ್ಲಿ ೧೧,೮೯೨ ಮಂದಿ ೬ ರಿಂದ ೧೫ ವರ್ಷದ ವಯೋಮನದಲ್ಲಿ ೨೯,೦೭೬ ಮಂದಿ ೧೫ ರಿಂದ ೨೦ ವರ್ಷದವರಲ್ಲಿ ೧೭೪ ಮಂದಿ ಬಾಲವಿಧವೆಯರಿದ್ದರು. ಹೀಗೆ ಸುಮಾರು ೨ ಕೋಟಿಯಷ್ಟರ ಪ್ರಮಾಣದಲ್ಲಿ ಇಪ್ಪತ್ತು ವರ್ಷದೊಳಗಿನ ಹೆಣ್ಣುಮಕ್ಕಳು ವಿಧವೆಯರಾಗಿ ಉಳಿದಿರುವುದು ಭಾರತೀಯ ಸಮಾಜಕ್ಕೆ ಕಂಟಕಪ್ರಾಯವಾದದ್ದು. ಬಾಲ್ಯವಿವಾಹವನ್ನು ತಡೆಗಟ್ಟಬೇಕು. ಅಲ್ಲದೆ, ವಿಧವೆ ವಿವಾಹವನ್ನು ಪ್ರೋತ್ಸಾಹಿಸಬೇಕು. ಈ ಹಿನ್ನಲೆಯಲ್ಲಿ ಸ್ತ್ರೀಯರ ಉನ್ನತಿಯನ್ನು ತಮ್ಮ ಆಂದೋಲನದ ಪ್ರಮುಖ ಅಜೆಂಡವಾಗಿ ಪರಿಗಣಿಸಿದರು. ಅಂದರೆ ಪೆರಿಯಾರರು ಭಾರತದ ಪ್ರಗತಿಯನ್ನು ಸ್ತ್ರೀಯರ ಮತ್ತು ಅಸ್ಪೃಶ್ಯರ ಸ್ಥಿತಿಗತಿಯಲ್ಲಿ ಬದಲಾವಣೆಯಿಂದ ಸಾಧ್ಯ. ಪ್ರಜ್ಞಾವಂತ ಶೂದ್ರರು ಬ್ರಾಹ್ಮಣರ ಹಿಂಬಾಲಕರಾಗಿ ಅಸ್ಪೃಶ್ಯರನ್ನು ಹೊರಗಿಟ್ಟಂತೆ, ಸ್ತ್ರೀಯರನ್ನು ಮನೆಯಲ್ಲಿಯೇ ಹೊರಗಿಟ್ಟರು. ಇದು ಮಹಿಳೆಯರ ದಾಸ್ಯ ಬ್ರಾಹ್ಮಣ ಸಂಸ್ಕೃತಿಯ ಪ್ರಮುಖ ಲಕ್ಷಣವಾಗಿರುವುದನ್ನು ಪ್ರಸ್ತುತಪಡಿಸುತ್ತದೆ ಎಂದು ಹೇಳಬಹುದು.

ಹಾಗೆಯೇ ಮಹಿಳೆ ಮತ್ತು ಜಾತಿಧಾರಿತ ಪ್ರಶ್ನೆಯನ್ನು ಗಾಂಧೀಜಿಯವರು ರಾಷ್ಟ್ರೀಯ ಚಳುವಳಿ ನೆಲೆಯಿಂದಲೇ ಗ್ರಹಿಸುತ್ತಾರೆ. ಈ ಹಿನ್ನಲೆಯಲ್ಲಿ ಅಸ್ಪೃಶ್ಯರ ಕುರಿತು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಅವುಗಳೆಂದರೆ ಗುಡಿಗಳ ಪ್ರವೇಶ, ಬಾವಿ ನೀರು ತುಂಬುವ ಕಾರ್ಯಕ್ರಮಗಳು, ಅಂತರ್ ಭೋಜನಗಳು ಇತ್ಯಾದಿ. ಹಾಗೆಯೇ, 'ಹರಿಜನ' ಪತ್ರಿಕೆಯನ್ನು, ಹರಿಜನ ಸೇವಕ ಸಂಘವನ್ನು, ಹರಿಜನ ಹೆಸರನ್ನು ವಿರೋಧಿಸುವ ಅಸ್ಪೃಶ್ಯರ ವಿರೋಧಿ ಸಂಘ ಮುಂತಾದವನ್ನು ಸ್ಥಾಪಿಸಿದರು.

ಮಹಿಳೆಯ ವಿವಾಹ ಸಂಬಂಧಿ ವಿಷಯಗಳನ್ನು ಸಂಪ್ರದಾಯಿಕ ನೆಲೆಯಲ್ಲಿ ಗ್ರಹಿಸುತ್ತಾರೆ. ಅಂದರೆ "ದಮನಕ್ಕೊಳಗಾದ ಭಾರತೀಯ ಮಹಿಳೆಯರಿಗೆ ಸೀತೆ, ದಮಯಂತಿ ಹಾಗು ದ್ರೌಪದಿ – ಈ ಮೂರು ಆದರ್ಶ ನಾರಿಯರೇ ಸ್ಫೂರ್ತಿಯಾಗಬೇಕೆಂದು. ಆದರೆ ಗಾಂಧೀಜಿಯವರ ಪ್ರಕಾರ ಸೀತೆ ಮತ್ತು ದ್ರೌಪದಿ ಎಲ್ಲರೂ ಒಪ್ಪಿಕೊಂಡಿರುವ ನಿರ್ಜೀವವಾದ ದಾಸ್ಯದ ಪ್ರತೀಕಗಳಲ್ಲ, ಗುಣ ಕ್ರಿಯಾಶೀಲ ಪ್ರತಿಮೆಗಳು ಎಂದು ಹೇಳುತ್ತಿದ್ದರು. ಅಂದರೆ ಗಾಂಧೀಜಿ ಲಿಂಗ ಮತ್ತು ಜಾತಿ ಅಸಮಾನತೆ ಪ್ರತ್ಯೇಕವಾಗಿ ಭಾವಿಸಿದ್ದು, ಮಹಿಳೆಯರ ಕುರಿತು ಸಂಕೇತಗಳಿಗೆ ಹೋಗಲಾರದ ಅರ್ಥವನ್ನು ಹೋರಿಸುತ್ತಿದ್ದರು. ಉದಾಹರಣೆಗೆ ಸಾಮಾಜ್ಯಶಾಹಿ ವಿರೋಧದ ಸಂದೇಶ ಸಾರಲು ಸೀತೆಯನ್ನು ಸ್ವದೇಶಿಯ ಸಂಕೇತವಾಗಿ ಬಳಸಿದರು. ಸೀತೆಯು ಭಾರತದಲ್ಲಿ ಸಿದ್ಧವಾದ ಉಡುಪನ್ನು ಅಥವಾ ಮನೆಯಲ್ಲಿ ನೇಯ್ದ ಬಟ್ಟೆಯನ್ನು ಧರಿಸುತ್ತಿದ್ದಳು. ಅದ್ದರಿಂದಲೇ ಆಕೆ ತನ್ನ ದೇಹ ಮತ್ತು ಹೃದಯವನ್ನು ಪವಿತ್ರವಾಗಿಟ್ಟುಕೊಂಡಿದ್ದಳು ಎಂದು ಹೇಳುತ್ತಿದ್ದರು." (ಮಧುಕೀಶ್ವರ್: ೧೯೯೩; ಪು–೬–೧೫)

ಗಾಂಧೀಜಿಯವರ ದೃಷ್ಟಿಯಲ್ಲಿ "ಬಾಲ್ಯವಿವಾಹ ಪದ್ಧತಿ ಭಾರತೀಯ ಸ್ತ್ರೀತ್ವಕ್ಕೆ ಕಳಂಕಪ್ರಾಯ. ಬಾಲ್ಯವೈಧವ್ಯಕ್ಕೂ ಮತ್ತು ಧರ್ಮಕ್ಕೂ ನಿಕಟವಾದ ಸಂಪರ್ಕವಿದೆ ಎಂಬುದನ್ನು ಗ್ರಹಿಸಿದರು. ಈ ಆಚರಣೆಗೆ ಬೆಂಬಲಿಸುವ ಧರ್ಮ ಅಲ್ಲ, ಅದು ಅಧರ್ಮ. ಇದನ್ನು ಅನುಮೋದಿಸಿ ಪ್ರೋತ್ಸಾಹಿಸುವ ಮೂಲಕ ದೇವರು ಮತ್ತು ಸ್ವರಾಜ್ಯದಿಂದ ನಾನು ದೂರ ನಡೆಯುತ್ತಿದ್ದೇವೆ" (ಅದೇ, ಪು–೯) ಎಂದರು.

ಇವುಗಳನ್ನು ಹೀಗೆ ಗ್ರಹಿಸಬಹುದು ಅಂದರೆ ರಾಷ್ಟ್ರೀಯ ಚಳುವಳಿಯನ್ನು ಬ್ರಿಟಿಷ್‌ರೊಂದಿಗೆ ಮುಖಾಮುಖಿಯಾದಂತೆ. ಅಸ್ಪೃಶ್ಯರ ಸಮಸ್ಯೆಯನ್ನು ಜಾತಿಶ್ರೇಣೀಕರಣದೊಂದಿಗೆ ಮುಖಾಮುಖಿಯಾಗಿಸಲಾಯಿತು. ಜಾತಿ ಶ್ರೇಣೀಕರಣಕ್ಕನುಗುಣವಾಗಿರುವ ಮಹಿಳೆಯರ ಸಮಸ್ಯೆಗಳ ಕುರಿತು ಚರ್ಚೆ ಹೋರಾಟ ನಡೆಯಲಿಲ್ಲ. ಅಲ್ಲದೆ ರಾಷ್ಟ್ರೀಯ ಚಳುವಳಿಯ ಸಂದರ್ಭಕ್ಕಾಗಿ ಮಾತ್ರ ಮಹಿಳೆ ಮತ್ತು ಅಸ್ಪೃಶ್ಯರ ಪ್ರಶ್ನೆಗಳು ಎದ್ದವು. ಈ ಮೂಲಕ

ಲಿಂಗಾಧಾರಿತ ಶ್ರೇಣೀಕರಣ ಮತ್ತು ಜಾತಿಯ ಮೂಲಭೂತ ನೆಲೆಗಳನ್ನು ಯಥಾಪ್ರಕಾರ ಪ್ರಸ್ತುತಪಡೆದವು. ಅಲ್ಲದೆ ಪ್ರತ್ಯೇಕ ನೆಲೆಯಲ್ಲಿ ಪರಿಭಾವಿತವಾದವು. ಹೀಗೆ ಗಾಂಧೀಜಿಯವರು ಮಹಿಳೆ ಮತ್ತು ಜಾತಿ ಸಮಸ್ಯೆಯನ್ನು ರಾಷ್ಟ್ರೀಯ ಸ್ವಾಸ್ಥ್ಯದೊಂದಿಗೆ ವಿಶ್ಲೇಷಣೆಗೆ ಒಳಪಡಿಸಿದರು.

ಈ ಎಲ್ಲ ಚಟುವಟಿಕೆಗಳನ್ನು ಆಧರಿಸಿ ಎರಡನೆ ಮಾದರಿಯನ್ನು ಅರ್ಥೈಸುವುದಾದರೆ: ಒಂದು ಸ್ತ್ರೀ ಸುಧಾರಣೆ ಸಮಾನಂತರವಾಗಿ ಜಾತಿ ಪ್ರಶ್ನೆಯನ್ನು ತೆಗೆದುಕೊಂಡರು. ಜ್ಯೋತಿ ಬಾ ಪುಲೆ, ಪೆರಿಯಾರ ಮಹಿಳೆಯ ಸಮಸ್ಯೆಯನ್ನು ವಸಾಹತುಶಾಹಿಯ ಏಕಕಾರ ನೆಲೆಗಿಂತ ಭಿನ್ನವಾಗಿ ಗ್ರಹಿಸಿದರು. ಅಂದರೆ ಮಹಿಳೆ, ಜಾತಿ ಒಳಗಿನ ಮಹಿಳೆಯರನ್ನು ವಿಂಗಡಿಸಿಕೊಂಡರು. ವಿವಾಹ ಸಂಬಂಧಿ ಸಮಸ್ಯೆಯ ಸ್ವರೂಪ ಏಕರೂಪಿಯಾಗಿಯೇ ಪ್ರಸ್ತುತಪಡಿಸಿದವು. ಆದರೂ ಮಹಿಳೆ, ಅಸ್ಪೃಶ್ಯರ ಸ್ಥಿತಿಯ ಬದಲಾವಣೆ ತರುವ ಪ್ರಯತ್ನವಾದವು. ಆದರೆ ಅದೇ ಗಾಂಧೀಜಿ ಮಹಿಳೆ ಮತ್ತು ಅಸ್ಪೃಶ್ಯರ ಸ್ಥಿತಿ ರಾಷ್ಟ್ರೀಯ ಚಳುವಳಿ ಸಂದರ್ಭದಲ್ಲಿ ಎತ್ತಿದ ಪ್ರಶ್ನೆಗಳಾದವು ಎಂದು ಹೇಳಬಹುದು. ಮಹಿಳೆ ಸ್ಥಿತಿ ಬದಲಾವಣೆಯಿಂದ ಜಾತಿಯ ಬದಲಾವಣೆ ಆಗಬೇಕು ಎನ್ನುವ ಜ್ಯೋತಿ ಬಾ ಫುಲೆ, ಪೆರಿಯಾರ ಪ್ರಭಾವ ಅಂಬೇಡ್ಕರ್ ಮೇಲೆ ಅಧಿಕವಾಗಿದೆ. ಆದರೆ ಪಾಶ್ಚಾತ್ಯ ಮತ್ತು ದೇಶಿಯ ಸುಧಾರಣವಾದಿ ಪರ್ಯಾಯವಾಗಿ ಅಂಬೇಡ್ಕರ್ ಜಾತಿ ನಿರ್ಮೂಲನೆಯಿಂದಲೆ ಮಹಿಳಾ ಶೋಷಣೆಗೆ ಹೋಗಲಾಡಿಸಲು ಸಾಧ್ಯ ಎಂದು ವಿವರಿಸಲು ಪ್ರಯತ್ನಿಸುತ್ತಾರೆ. ಹಾಗಾಗಿ ಇನ್ನು ಮುಂದಿನ ಭಾಗ ಅಂಬೇಡ್ಕರ್ ದೃಷ್ಟಿಕೋನದಲ್ಲಿ ವಿಶ್ಲೇಷಿಸಲಾಗುವುದು.

### ೩.೧ ಮಹಿಳೆ ಮತ್ತು ಜಾತಿ; ಅಂಬೇಡ್ಕರ್ ದೃಷ್ಟಿಕೋನ

ಜಾತಿ ಪ್ರಶ್ನೆಗಳ ಹಿನ್ನಲೆಯಲ್ಲಿ ಸ್ತ್ರೀ ಸುಧಾರಣೆ ಆಲೋಚನೆ ಪ್ರಸ್ತುತ ಪಡಿಸಿದ್ದು ಮೂರನೇ ಮಾದರಿಯಾಗಿದೆ. ಇದರ ಪ್ರಮುಖ ವಕ್ತಾರರು ಅಂಬೇಡ್ಕರ್ ಆಗಿದ್ದಾರೆ. ಅಂದರೆ ಮಹಿಳೆ ಮತ್ತು ಜಾತಿಯನ್ನು ವಿವಾಹದೊಳಗೆ ಸಂಯೋಜಿಸುವ ಅಂಬೇಡ್ಕರ್ ಕ್ರಮ ತುಂಬಾ ವಿಭಿನ್ನವಾದುದು. ವಸಾಹತು ಸಂದರ್ಭಲ್ಲಿ ಲಿಂಗ ಮತ್ತು ಜಾತಿ ವಿಷಯ ಸಂಬಂಧಿ ಚರ್ಚೆಗಳು ಹೆಚ್ಚು ಮಹತ್ವ ಪಡೆಯುತ್ತಿದ್ದವು. ಆಗ ಅಂಬೇಡ್ಕರ್ ಅಸ್ಪೃಶ್ಯರ ನೋವುಗಳನ್ನು ಅನುಭವಿಸಿದರು. ಈ ಹಿನ್ನಲೆಯಲ್ಲಿ ಅವರು ಜಾತಿಯ ಎಲ್ಲಾ ಮುಖಗಳನ್ನು ತರ್ಕಬದ್ಧವಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. 'ತರ್ಕಬದ್ಧ' ಎಂಬುದನ್ನ ಕಾರ್ಯಕಾರಣ ಸಂಬಂಧ ಎಂದು ಭಾವಿಸಲಾಗಿದೆ. ಅದ್ದರಿಂದ ಅಂಬೇಡ್ಕರ್ ಜಾತಿಪದ್ಧತಿಯ ವಿರುದ್ಧ ರಾಜಕೀಯ ಹೋರಾಟವನ್ನೆ ರೂಪಿಸತೊಡಗಿದರು. ಈ ಕಾರಣದಿಂದಾಗಿಯೇ ಅವರು ಅದಕ್ಕೊಂದು ತಾತ್ವಿಕತೆಯನ್ನು ನಿರ್ಮಿಸಿಕೊಳ್ಳುವುದರಲ್ಲಿ ಕೂಡ ಹೆಚ್ಚು ಆಸಕ್ತರಾದರು. ಹಾಗಾಗಿ ಅವರು

ಉಳಿದವರಿಗಿಂತ ಹೆಚ್ಚು ಗಂಭೀರವಾಗಿ ಜಾತಿಪದ್ಧತಿಯ ಉಗಮ ಬೆಳವಣಿಗೆಗಳ ಕುರಿತು ಚರ್ಚಿಸುತ್ತಾರೆ.

ಮಹಿಳೆ ಮತ್ತು ಜಾತಿ ಸಂಬಂಧದಲ್ಲಿ ಅವರು 'ಭಾರತದಲ್ಲಿ ಜಾತಿಗಳು' ಎನ್ನುವ ಪ್ರಬಂಧ ಗಮನಾರ್ಹವಾದುದು. ಇದನ್ನು ಅವರು ೧೯೧೬ ರ ಮೇ ೯ ರಂದು ಅಮೆರಿಕೆಯ ನ್ಯೂಯಾರ್ಕ್‌ನ ಕೊಲಂಬಿಯ ವಿಶ್ವವಿದ್ಯಾಲಯದಲ್ಲಿ ನಡೆದ ಡಾ.ಎ.ಎ.ಗೋಲ್ಡನ್ ಮೇಜರ್ ಸ್ಮರಣಾರ್ಥಕ ಮಾನವಕುಲಶಾಸ್ತ್ರ ವಿಚಾರ ಸಂಕಿರಣದಲ್ಲಿ ಮಂಡಿಸಿದ್ದಾರೆ. ಅದರಲ್ಲಿ ಅವರು ಪಾಶ್ಚಾತ್ಯ ವಿಧ್ವಾಂಸರಾದ ಸೇನಾರ್ಟ್, ನೆಸ್‌ಫೀಲ್ಡ್, ಸರ್ ರಿಸ್ಲೆಯವರ ಹಾಗು ದೇಶಿ ಚಿಂತಕರಾದ ಡಾ.ಕೇತ್ಕರ್‌ರವರ ಜಾತಿಯ ವ್ಯಾಖ್ಯೆ ಮತ್ತು ಅದರ ಲಕ್ಷಣಗಳನ್ನು ವಿಮರ್ಶಾತ್ಮಕ ವಿವರಿಸುತ್ತಾರೆ. ಅಂದರೆ ಅಂಬೇಡ್ಕರ್ ಯಾವ ಸ್ತ್ರೀವಾದಿಯು, ಸಮಾಜ ಅಧ್ಯಯನಕಾರು ಪ್ರವೇಶಿಸದ ಹೊಸದಾರಿಯಲ್ಲಿ ಮಾನವಶಾಸ್ತ್ರ ಅಧ್ಯಯನ ವಿಧಾನಗಳ ಮೂಲಕ ವಿಷಯವನ್ನು ಪ್ರವೇಶಿಸುತ್ತಾರೆ. ಈ ಮೂಲಕವೇ ಅವರು 'ಜಾತಿಪದ್ಧತಿ' ಎಂದರೇನು ಎಂಬುದನ್ನು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಹಾಗೆ ವ್ಯಾಖ್ಯಾನಿಸುವಾಗ ಅಂಬೇಡ್ಕರ್ ಪ್ರಾಥಮಿಕವಾಗಿಯೇ ಜಾತಿಪದ್ಧತಿಯನ್ನು ಹೊರಗಿನದೆಂದು ತೋರಿಸುತ್ತಾರೆ. ಈ ಮೂಲಕ ಭಾರತದ ಬಗೆಗಿನ ಪಾಶ್ಚಾತ್ಯರ ಟೀಕೆಗಳಿಗೆ ಉತ್ತರಿಸುತ್ತಾರೆ./

ಅಂಬೇಡ್ಕರ್ ಜಾತಿಪದ್ಧತಿಯ ಕುರಿತು ಚಾರಿತ್ರಿಕ ನೋಟವು ಇದನ್ನು ಪುಷ್ಟಿಕರಿಸುತ್ತದೆ. "ಭಾರತದ ಸಮಾಜಕ್ಕಿಂತ ಮಿಗಿಲಾಗಿ ಇಂದಿನ ಯಾವ ನಾಗರಿಕ ಸಮಾಜವು ಪ್ರಾಚೀನ ಕಾಲದ ಪಳೆಯುಳಿಕೆಗಳನ್ನು ತೋರಿಸಲಾರದೆಂದು, ಭಾರತದ ಧರ್ಮವು ಮೂಲಭೂತವಾಗಿ ಪುರಾತನವಾದುದು, ಕಾಲ ಮತ್ತು ನಾಗರಿಕತೆಯಲ್ಲಿ ಪ್ರಗತಿಯಾಗಿದ್ದು ಅದರ ನಿಮಯಗಳು ತನ್ನೆಲ್ಲ ಪೌರೋಹಿತ ಬಲದೊಂದಿಗೆ ಇಂದಿಗೂ ಜಾರಿಯಲ್ಲಿವೆ. ಅಂತಹ ಪುರಾತನ ಪಳೆಯುಳಿಕೆಗಳಲ್ಲಿ ಜಗತ್ತಿನ ವಿವಿಧ ಸಮಾಜದ ಭಿನ್ನ ಗೋತ್ರ ವಿವಾಹ ಪದ್ಧತಿ ಒಂದಾಗಿದ್ದು, ಚರಿತ್ರೆಯ ಬೆಳವಣಿಗೆಯೊಂದಿಗೆ ಭಿನ್ನ ಗೋತ್ರ ವಿವಾಹವು ತನ್ನ ಪ್ರಭಾವವನ್ನು ಕಳೆದುಕೊಂಡಿದೆ. ಆದರೆ ಭಾರತೀಯರ ವಿಚಾರದಲ್ಲಿ ಭಿನ್ನ ಗೋತ್ರ ನಿಯಮವು ಇಂದಿಗೂ ಸ್ಪಷ್ಟವಾದ ಕಟ್ಟಳೆಯಾಗಿದೆ. ಈ ಬಣ ಭಿನ್ನಗೋತ್ರ ವಿವಾಹ ನಿಯಮದ ಸುತ್ತ ಕೇಂದ್ರೀಕೃತವಾಗಿರುವ ಮದುವೆ ನಿಯಮದಲ್ಲಿ ಇದನ್ನು ಸುಲಭವಾಗಿ ನೋಡಬಹುದು. ಏಕೆಂದರೆ ಸಪಿಂಡರು (ರಕ್ತಬಂಧುಗಳು) ಮದುವೆಯಾಗಬಾರದೆಂದಲ್ಲ. ಆದರೆ ಸ್ವಗೋತ್ರರ (ಅದೇ ಗುಂಪಿನ) ನಡುವಣ ಒಂದು ಮದುವೆಯನ್ನು ಕೂಡ ಅಪವಿತ್ರವೆಂದು ಪರಿಗಣಿಸಲಾಗಿದೆ ಎನ್ನುತ್ತಾರೆ." (ಡಾ.ಬಾ.ಅಂ.ಬ.ಭಾ: ಸಂ-೧; ಪು-೯,೧೦) ಈ ಮೂಲಕ ಅವರು ಸ್ವಜಾತಿ ವಿವಾಹವು ಭಾರತೀಯರಿಗೆ ಹೊರಗಿನದೆಂದು ಸಾಬೀತುಪಡಿಸುತ್ತಾರೆ.

ಅದ್ದರಿಂದಲೇ ಭಾರತದ ಬೇರೆ ಬೇರೆ ಮದುವೆಗಳು ಭಿನ್ನಗೋತ್ರ ವಿವಾಹ ಪದ್ಧತಿಯವೇ ಆಗಿವೆ. ಕುಲದೇವತಾರಾಧನಾ ಸಂಸ್ಥೆಗಳಲ್ಲಿರುವ ಇತರ ಗುಂಪುಗಳು ಹೀಗೆಯೇ ಇವೆ. ಹಾಗಾಗಿ ಭಾರತೀಯ ಭಿನ್ನಗೋತ್ರ ವಿವಾಹವನ್ನು ಯಾರು ಉಲ್ಲಂಘಿಸುವ ಧೈರ್ಯ ತೋರದ ಒಂದು ನಂಬಿಕೆಯಾಗಿದೆ.

ಅದ್ದರಿಂದ ಜಾತಿಗಳ ಒಳಗೆ ಸ್ವಜಾತಿ ವಿವಾಹವು ಇದ್ದರೂ ಕೂಡ ಭಿನ್ನಗೋತ್ರ ವಿವಾಹವನ್ನು ಕಟ್ಟುನಿಟ್ಟಾಗಿ ಪರಿಪಾಲಿಸಲಾಗುತ್ತದೆ. ಭಿನ್ನಗೋತ್ರ ವಿವಾಹ ನಿಯಮವನ್ನು ಮೀರಿದವರಿಗಿಂತ ಕಠಿಣತರವಾದ ದಂಡವನ್ನು ಸ್ವಜಾತಿ ವಿವಾಹವ ನಿಯಮವನ್ನು ಮೀರಿದವರಿಗೆ ವಿಧಿಸಲಾಗುವುದು. ಹಾಗಾಗಿ, ಭಿನ್ನಗೋತ್ರ ವಿವಾಹ ಪದ್ಧತಿಯೇ ನಿಯಮವಾಗಿದ್ದು, ಇದರಲ್ಲಿ ಜಾತಿ ಪ್ರಶ್ನೆ ಇರುವುದಿಲ್ಲ. ಏಕೆಂದರೆ ಭಿನ್ನಗೋತ್ರ ವಿವಾಹವೆಂದರೆ ಐಕ್ಯವೆಂದರ್ಥ. ಆದರೆ ನಮ್ಮಲ್ಲಿ ಜಾತಿಗಳಿವೆ. ಅದರ ಪರಿಣಾಮ ಭಾರತ ಕುರಿತಂತೆ "ಜಾತಿಗಳ ಸೃಷ್ಟಿಯೆಂದರೆ ಭಿನ್ನಗೋತ್ರದ ವಿವಾಹದ ಮೇಲೆ ಸ್ವಜಾತಿ ವಿವಾಹದ ಅಧಿಕ ಸ್ಥಾನವೆಂದು" (ಡಾ.ಬಾ.ಅಂ.ಬ.ಭಾ: ಸಂ–೧; ಪು–೧೦) ಅಂತಿಮವಾಗಿ ಅಂಬೇಡ್ಕರ್ ವಿಶ್ಲೇಷಿಸುತ್ತಾರೆ.

ಜಾತಿ ಪ್ರಶ್ನೆಯನ್ನು ವಿವಾಹದೊಂದಿಗೆ ತಳುಹಾಕಿ ವಿವರಿಸುತ್ತಾರೆ. ವಿವಾಹ ಸಂಸ್ಥೆಯು ಪಿತೃಪ್ರಧಾನತೆಯ ಮೂಲಭೂತ ಘಟಕ ಆಗಿದೆ. ಈ ವಿವಾಹ ಸಂಸ್ಥೆಯು ಮೂಲಕವೇ ಜಾತಿ ಮತ್ತು ಲಿಂಗದ ಪ್ರಶ್ನೆಗಳನ್ನು ಒಟ್ಟಿಗೆ ತರಲು ಪ್ರಯತ್ನಿಸುತ್ತಾರೆ.

ಅಂಬೇಡ್ಕರ್ ಜಾತಿಪದ್ಧತಿಯನ್ನು ಪವಿತ್ರ–ಅಪವಿತ್ರ ಕಲ್ಪನೆಯಿಂದಲೂ ಹಿಂದಿನ ಹಂತದಿಂದ ಗ್ರಹಿಸಲು ಯತ್ನಿಸುತ್ತಾರೆ. ಅವರ ಪ್ರಕಾರ 'ಪಾವಿತ್ರ್ಯದ ಕಲ್ಪನೆ ಜಾತಿಯ ಧಾರ್ಮಿಕ ಮುಖವನ್ನು ಮಾತ್ರ ತೋರಿಸುತ್ತದೆ. ಇದು ಶ್ರೇಣೀಕರಣದಲ್ಲಿ ಬ್ರಾಹ್ಮಣ ಜಾತಿಯನ್ನು ಮೊದಲ ಸ್ಥಾನದಲ್ಲಿರಿಸುವ ಸಂದರ್ಭದಲ್ಲಿ ಕಂಡುಬರುವುದು. ಹಾಗಾಗಿ ಪಾವಿತ್ರ್ಯದ ಕಲ್ಪನೆಯು ಜಾತಿಯ ಒಂದು ವೈಶಿಷ್ಟವಾಗಿರುವುದು. ಜಾತಿಯನ್ನು ವ್ಯಾಖ್ಯಾನಿಸಿಕೊಳ್ಳುವ ಹಂತದಲ್ಲಿ ಪಾವಿತ್ರ್ಯದ ಕಲ್ಪನೆ ಕೇವಲ ಅನುಷಂಗಿಕವಾದುದು, ಇದು ನೇರವಾಗಿ ವಿವಾಹಕ್ಕೆ ಸಂಬಂಧಿಸಿದ್ದು. ಜಾತಿಪದ್ಧತಿ ಕುರಿತು ಅಂಬೇಡ್ಕರ್ ಹೀಗೆ ಹೇಳುತ್ತಾರೆ "ಜಾತಿಯ ಏಕೈಕ ಸಾರವೆಂದು ಕರೆಯಬಹುದಾಗಿದ್ದು ಪ್ರತಿಬಂಧನೆ ಅಥವಾ ಅಂತರಜಾತೀಯ ವಿವಾಹವಿಲ್ಲದಿರುವಿಕೆಯೊಂದೇ. ಇದನ್ನು ಇನ್ನು ಸಂಕ್ಷಿಪ್ತವಾಗಿ ಸ್ವಜಾತಿ ವಿವಾಹವೊಂದೇ ಎನ್ನುತ್ತಾರೆ" (ಡಾ.ಬಾ.ಅಂ.ಬ.ಭಾ: ಸಂ–೧; ಪು–೮) ಆದರೆ ಇದನ್ನು ಮಾನವ ಕುಲಶಾಸ್ತ್ರದಿಂದ ಕೆಲವರು ನಿರಾಕರಿಸಬಹುದು. ಏಕೆಂದರೆ ಜಾತಿ ಸಮಸ್ಯೆ ಹುಟ್ಟಲು ಅವಕಾಶ ಕೊಡದಂತಹ ಸ್ವಜಾತಿ ವಿವಾಹವಿರುವ ಗುಂಪುಗಳು ಇವೆ. ಸಾಮಾನ್ಯ ರೀತಿಯಲ್ಲಿ ಇದು

ಸರಿಯಿರಬಹುದು. ಸಾಂಸ್ಕೃತಿಕವಾಗಿ ಭಿನ್ನವಾದ ಸ್ವಜಾತಿ ವಿವಾಹ ಸಮಾಜಗಳು ಹೆಚ್ಚು ಕಡಿಮೆ ಬೇರೆ ಬೇರೆಯಾದ ಸ್ಥಳಗಳಲ್ಲಿ ತಮ್ಮ ವಾಸದ ನೆಲೆಗಳನ್ನು ಹೊಂದಿದ್ದು ಅವರಲ್ಲಿ ಪರಸ್ಪರ ವ್ಯವಹಾರ ಅಗತ್ಯವಿಲ್ಲ ಎಂಬುದು ವಾಸ್ತವ ಸತ್ಯ. ಈ ಹೇಳಿಕೆಯನ್ನು ಪುಷ್ಟೀಕರವಾಗಿಸಲು ಸಂಯುಕ್ತ ಸಂಸ್ಥಾನಗಳಲ್ಲಿರುವ ಅಮೆರಿಕ ಇಂಡಿಯನ್ಸ್ ಎಂಬ ಹೆಸರಿನಿಂದ ಕರೆಯಲಾಗುವ "ನೀಗ್ರೋಗಳು, ಬಿಳಿಯರು ಮತ್ತು ವಿವಿಧ ಆದಿವಾಸಿ ಗುಂಪುಗಳನ್ನು ನಿದರ್ಶನಗಳಾಗಿ ನೀಡುವುದನ್ನು ಪ್ರಸ್ತಾಪಿಸುವ ಅಂಬೇಡ್ಕರ್ ಭಾರತದ ಸಂದರ್ಭ ಬೇರೆ ಎಂದು ವಾದಿಸುತ್ತಾರೆ. ಅಂದರೆ ಭಾರತದ ಜನರು ಒಟ್ಟಾರೆಯಾಗಿ ಒಂದೇ ಬಗೆಯವರು ನಿರ್ದಿಷ್ಟ ವಲಯಗಳನ್ನು ಹೊಂದಿರುವ ಭಾರತದ ವಿವಿಧ ಜನಾಂಗಗಳು ಬಹುಮಟ್ಟಿಗೆ ಒಬ್ಬರೊಡನೆ ಒಬ್ಬರು ಮಿಳಿತವಾಗಿದ್ದಾರೆ. ಸಾಂಸ್ಕೃತಿಕ ಏಕತೆಯನ್ನು ಪಡೆದಿದ್ದಾರೆ. ಇದೊಂದೇ ಸಮರೂಪ ಜನಾಂಗದ ಒರೆಗಲ್ಲು. ಈ ಸಮರೂಪತೆಯನ್ನು ಆಧರಿಸುವಾಗ ಸ್ವಜಾತಿ ವಿವಾಹ ಸಮಾಜ ಅಥವಾ ಆದಿವಾಸಿ ಗುಂಪುಗಳ ಹತ್ತಿರದ ರಕ್ತ ಸಂಬಂಧ ಮಾತ್ರದಿಂದ ರಚಿತವಾದ ಸಂದರ್ಭದಲ್ಲಿ ಸಂಪೂರ್ಣವಾಗಿ ಕಾಣದ ಜಾತಿಯ ಒಂದು ಹೊಸ ಸ್ವರೂಪದ ಸಮಸ್ಯೆಯಾಗುತ್ತದೆ." (ಡಾ.ಬಾ.ಅಂ.ಬ.ಭಾ: ಸಂ-೧; ಪು-೮,೯)

ಹಾಗಾಗಿ ಭಾರತದಲ್ಲಿ ಜಾತಿಯೆಂದರೆ ಸ್ವಜಾತಿ ವಿವಾಹ ಪದ್ಧತಿಯ ಮೂಲಕ ಒಂದು ಇನ್ನೊಂದರೊಡನೆ ಸಮ್ಮಿಳಿತವಾಗದಂತೆ ತಡೆಯುತ್ತದೆ ಎಂದು ಪ್ರಸ್ತುತಪಡಿಸುತ್ತಾರೆ.

ಹೀಗೆ ಅಂಬೇಡ್ಕರ್ ಜಾತಿ ಪದ್ಧತಿಯ ವ್ಯಾಖ್ಯಾನವನ್ನು ವಿವಾಹ ಸಂಸ್ಥೆಯೊಂದಿಗೆ ಜೋಡಿಸಿದ್ದು, ಭಾರತದ ವಿವಾಹ ಸಂಸ್ಥೆಯು ಜಾತಿಯ ಚೌಕಟ್ಟಿನೊಳಗೆ ಅಸ್ತಿತ್ವ ಪಡೆದಿರುವುದು. ಜಾತಿ ಮತ್ತು ಪಿತೃಪ್ರಧಾನತೆಯ ಕೇಂದ್ರ ವಿವಾಹ ಸಂಸ್ಥೆಯಾಗಿರುವುದು. ಜಾತಿ ಮತ್ತು ಲಿಂಗದ ಪ್ರಶ್ನೆಯನ್ನು ಒಗ್ಗೂಡಿಸುವ ಅಗತ್ಯವನ್ನು ಪ್ರತಿಪಾದಿಸುತ್ತದೆ. ಸ್ವಜಾತಿ ವಿವಾಹದ ಮೂಲಕ ಸ್ತ್ರೀಯ ಲೈಂಗಿಕತೆಯ ಮೇಲಿನ ಹಕ್ಕನ್ನು ಜಾತಿಗಳಿಗೆ ವಹಿಸಿಕೊಡುವುದು ಜಾತಿಯೊಳಗಿಂದಲೇ ಹೆಣ್ಣಿನ ಮೇಲಿನ ಪುರುಷ ಅಧಿಕಾರವನ್ನು ಬಲಪಡಿಸುತ್ತದೆ. ಈ ಪುರುಷಾಧಿಕಾರವು ಜಾತಿಪದ್ಧತಿಯನ್ನು ಮುಂದುವರೆಸುತ್ತದೆ. ಇದು ಜಾತಿಪದ್ಧತಿಯ ನಿಜವಾದ ನೆಲೆ. ಜಾತಿಯೊಂದಿಗೆ ವಿಧವಾ, ಸತಿ, ಬಾಲ್ಯವಿವಾಹ ಮುಂತಾದ ಆಚರಣೆಗಳು ರೂಢಿಗೆ ಬರುತ್ತವೆ. ಪಾವಿತ್ರ್ಯದ ಕಲ್ಪನೆ ಬಲಗೊಳ್ಳುತ್ತದೆ. ಹೆಣ್ಣಿನ ಪಾವಿತ್ರ್ಯ ಹಾಗು ಜಾತಿಯ ಪಾವಿತ್ರ್ಯಗಳು ಒಂದಾಗುತ್ತದೆ. ಈ ಪಾವಿತ್ರ್ಯ ನಾಶಕ್ಕೆ ಶಿಕ್ಷೆಗಳು ಕಠಿಣಗೊಳ್ಳುತ್ತವೆ. ಇದನ್ನು ಒಂದು ಕಾಲ್ಪನಿಕ ಗುಂಪಿನ ಮೂಲಕ ಸ್ವಜಾತಿ ವಿವಾಹ ಜಾರಿಗೊಳಿಸುವ ವಿಧಾನಗಳನ್ನು ಪರಿಶೀಲಿಸುತ್ತಾರೆ.

"ಒಂದು ಗುಂಪು ತನ್ನ ಜಾತಿಯಲ್ಲೇ ಮದುವೆ ಮಾಡಿಕೊಳ್ಳಲು ಇಚ್ಛಿಸಿದರೆ ಹೊರಗಿನ ಗುಂಪುಗಳೊಂದಿಗೆ ಅಂತರ್ಜಾತಿಯ ಮದುವೆ ಮಾಡಿಕೊಳ್ಳುವುದರ ವಿರುದ್ಧ ಹೇರುವ ಔಪಚಾರಿಕ ನಿಷೇಧ ಅಷ್ಟೊಂದು ಫಲಕಾರಿಯಾಗಲು ಸಾಧ್ಯವಿಲ್ಲ. ಹಾಗಾಗಿ ಎಲ್ಲ ಗುಂಪುಗಳು ಕಲೆಯದಂತೆ ಒಂದು ಗೆರೆಯೆಳೆದು ಆವೃತ್ತದಿಂದ ಆಚೆಗೆ ಜನರು ಮದುವೆ ಒಪ್ಪಂದಗಳನ್ನು ಮಾಡಿಕೊಡದೆಂದು ಹದ್ದಿನಲ್ಲಿಡುವುದು ಅನಿವಾರ್ಯವಾಗಿದೆ." (ಡಾ.ಬಾ.ಅಂ.ಬ.ಭಾ: ಸಂ-೧; ಪು-೧೧, ೧೪)

ಆಗ ಹೊರಗನವರೊಂದಿಗೆ ಮದುವೆಗಳನ್ನು ತಡೆಹಿಡಿಯುವ ಆ ಗೆರೆಯು ಗುಂಪುನೊಳಗೆ ಸಮಸ್ಯೆಗಳನ್ನು ಹುಟ್ಟಿಸುತ್ತದೆ. ಅವುಗಳನ್ನು ಪರಿಹರಿಸುವುದು ಸುಲಭದ ಮಾತಲ್ಲ. ಈ ಸಮಸ್ಯೆಗಳನ್ನು ಸಂಕ್ಷೇಪಿಸಿ ಹೇಳುವುದಾದರೆ ರೂಢಿಯ ಒಂದು ಗುಂಪಿನಲ್ಲಿ ಹೆಂಗಸರು ಗಂಡಸರೂ ಹೆಚ್ಚುಕಡಿಮೆ ಸಮನಾಗಿ ಹಂಚಿಕೊಂಡಿರುತ್ತಾರೆ. ಸಾಮಾನ್ಯವಾಗಿ ಹೇಳುವುದಾದರೆ ಸಮ ವಯಸ್ಕರಲ್ಲಿ ಸಮಾನತೆಯೊಂದು ಇದ್ದೇ ಇರುತ್ತದೆ. ಆದರೆ ವಾಸ್ತವ ಸಮಾಜಗಳಲ್ಲಿ ಯಾವಾಗಲೂ ಈ ಸಮಾನತೆಯು ಅರಿವಿಗೆ ಬರುವುದೇ ಇಲ್ಲ. ಅದೇ ಕಾಲದಲ್ಲಿ ತಾನೊಂದು ಜಾತಿಯಾಗ ಬಯಸುವ ಗುಂಪಿಗೆ ಲಿಂಗಗಳ ನಡುವೆ ಸಮಾನತೆಯನ್ನುಳಿಸಿ ಕಾಪಾಡುವುದು ಅಂತಿಮ ಗುರಿಯಾಗಿರುತ್ತದೆ. ಏಕೆಂದರೆ ಅದಿಲ್ಲದೆ ಸ್ವಜಾತಿ ವಿವಾಹ ಅಸ್ತಿತ್ವದಲ್ಲಿರುವುದು ಹಿಂದಿನಂತೆ ಸಾಧ್ಯವಾಗುವುದಿಲ್ಲ ಅಂದರೆ ಸ್ವಜಾತಿ ವಿವಾಹ ಪದ್ಧತಿಯನ್ನು ಸಂರಕ್ಷಿಸಿ ಬೇಕಾದಲ್ಲಿ ತಮ್ಮೊಳಗಿನವರೊಂದಿಗೆ ಲೈಂಗಿಕ ಸಂಪರ್ಕದ ಹಕ್ಕನ್ನು ಕಲ್ಪಿಸಿಕೊಡಬೇಕು. ಇಲ್ಲವಾದಲ್ಲಿ ಸ್ವಜಾತಿ ವಿವಾಹ ಪದ್ಧತಿಯನ್ನು ಮುರಿಯುತ್ತಾರೆ. ಅದ್ದರಿಂದ ಜಾತಿಯಾಗಿ ಉಳಿಯಬೇಕೆಂದು ಬಯಸುವ ಗುಂಪಿನೊಳಗೆ ಸ್ತ್ರೀ-ಪುರುಷರ ಸಂಖ್ಯೆಯಲ್ಲಿ ಸಮಾನತೆಯನ್ನು ಉಳಿಸಿಕೊಂಡು ಬರುವುದು ತೀವ್ರ ಅಗತ್ಯವಾಗಿತ್ತು.

ಹೀಗಾಗಿ ಜಾತಿ ಸಮಸ್ಯೆಯು ಅಂತಿಮವಾಗಿ ಮದುವೆಗೆ ಪ್ರಾಪ್ತವಯಸ್ಕರಾದ ಸ್ತ್ರೀ-ಪುರುಷ ವೈರುಧ್ಯಗಳನ್ನು ಸರಿಪಡಿಸುವ ಒಂದು ಅಂಶವಾಗಿ ಮಾರ್ಪಡುತ್ತದೆ. ಇದನ್ನು ವಿವಾಹ ಸಂಸ್ಥೆಯಲ್ಲಿರುವ ಗಂಡು-ಹೆಣ್ಣುಗಳ ನೆಲೆಯಿಂದ ವಿಸ್ತರಿಸುವುದಾದರೆ ಹೆಂಡತಿಗಿಂತ ಮುಂಚೆಯೇ ಗಂಡ ಸತ್ತು ಒಬ್ಬ ಹೆಚ್ಚುವರಿ ಹೆಣ್ಣನ್ನು ಉಳಿಸಿ ಹೋಗಬಹುದು. ಅಂತಹ ಗಂಡನನ್ನು ಕಳೆದುಕೊಂಡ ಹೆಂಡತಿಯನ್ನು ಜಾತಿಯಲ್ಲಿ ಉಳಿಸಿಕೊಳ್ಳಬೇಕಾಗುತ್ತದೆ. ಹಾಗೆಯೇ ಹೆಂಡತಿ ಸತ್ತು ಗಂಡ ಉಳಿದು ಹೆಚ್ಚುವರಿ ಮನುಷ್ಯನಾಗಲೂಬಹುದು. ಹೆಂಡತಿಯನ್ನು ಕಳೆದುಕೊಂಡ ಗಂಡನನ್ನು ಜಾತಿಯಲ್ಲಿ ಉಳಿಸಿಕೊಳ್ಳಬೇಕಾಗುತ್ತವೆ. ಇಲ್ಲವಾದರೆ ಅವರು ಗುಂಪಿನಿಂದ ಹೊರಗೆ ಹೋಗಿ ಅಂತರ್‌ಜಾತೀಯ ವಿವಾಹದ ಮೂಲಕ ಆ ಜಾತಿಯ ವಿವಾಹ ಪದ್ಧತಿಯನ್ನು ಮುರಿಯುತ್ತಾರೆ. ಅಂದರೆ ಜಾತಿಯ ಸ್ವಗೋತ್ರ ವಿವಾಹ ಪದ್ಧತಿಯನ್ನು ಕಾಪಾಡುವ ಸಲುವಾಗಿ ಎರಡು ರೀತಿಯಲ್ಲಿ ಆಕೆಯ ವಿಷಯವನ್ನು ನಿಭಾಯಿಸುತ್ತಾರೆ.

ಪ್ರಥಮವಾಗಿ "ಅವಳ ಮೃತಗಂಡನ ಚಿತೆಯಲ್ಲೇ ಅವಳನ್ನು ಸುಟ್ಟು ಕಥೆ ಮುಗಿಸಬಹುದು. ಆದರೆ ಲೈಂಗಿಕ ಅಸಮಾನತೆಯ ಸಮಸ್ಯೆಯನ್ನು ನಿವಾರಿಸುವಲ್ಲಿ ಇದೊಂದು ಅಪ್ರಾಯೋಗಿಕ ವಿಧಾನವಾಯಿತು. ಕೆಲವು ಕಡೆಗಳಲ್ಲಿ ಇದು ಸರಿ ಹೋಗಬಹುದು. ಅದರಿಂದಾಗಿ ಪ್ರತಿಯೊಬ್ಬ ಹೆಚ್ಚುವರಿ ಸ್ತ್ರೀಯನ್ನು ಹೀಗೆ ನಿಭಾಯಿಸಲಾಗದು. ಅದು ಸುಲಭ ಪರಿಹಾರವಾದರೂ ಕಷ್ಟ ಸಾಧ್ಯವಾಗಿದೆ. ಈ ರೀತಿಯಲ್ಲಿ ಹೆಚ್ಚುವರಿ ಸ್ತ್ರೀ (ವಿಧವೆ)ಯನ್ನು ಗುಂಪಿನಲ್ಲೇ ಉಳಿಯುತ್ತಾಳೆ. ಆದರೆ ಅವಳ ಇರುವಿಕೆಯಲ್ಲಿ ಕೇವಲ ಎರಡು ಅಪಾಯಗಳಿವೆ. ಆಕೆ ಜಾತಿಯ ಹೊರಗೆ ಮದುವೆಯಾಗಿ ಸ್ವಜಾತಿ ಪದ್ಧತಿಯನ್ನು ಉಲ್ಲಂಘಿಸಬಹುದು. ಇಲ್ಲವೆ ಆಕೆ ಜಾತಿಯೊಳಗೆ ಮದುವೆಯಾಗಲೂಬಹುದು ಮತ್ತು ಅದ್ದರಿಂದ ಯಾವುದೇ ರೀತಿಯಲ್ಲಿ ಆಕೆಯೊಂದು ಪಿಡುಗು. ಆಕೆಯ ಸತ್ತ ಗಂಡನೊಂದಿಗೆ ಆಕೆಯನ್ನು ದಹಿಸಲಾಗದಿದ್ದರೂ ಯಾವುದಾದರೊಂದನ್ನು ಮಾಡಲೇಬೇಕು" ಎಂಬುದನ್ನು ಗುರುತಿಸುತ್ತಾರೆ. (ಡಾ.ಬಾ.ಅಂ.ಬ.ಭಾ: ಸಂ-೧; ಪು-೧೨)

ಎರಡನೆಯ ಪರಿಹಾರೋಪಾಯವೆಂದರೆ "ಅವಳಿಗೆ ಉಳಿದ ಜೀವನಪರ್ಯಂತ ವೈಧವ್ಯವನ್ನು ವಿಧಿಸುವುದು. ವಸ್ತುನಿಷ್ಠ ಪರಿಣಾಮದ ದೃಷ್ಟಿಕೋನಯಿಂದಿರುವಂತೂ ವೈಧವ್ಯವನ್ನು ಹೇರುವುದಕ್ಕಿಂತಲೂ ಸುಡುವುದು (ಸತಿಪದ್ಧತಿ) ಉತ್ತಮ ಪರಿಹಾರ. ವಿಧವೆಯನ್ನು ಸುಡುವುದರಿಂದ ಒಬ್ಬ ಹೆಚ್ಚುವರಿ ಹೆಣ್ಣಿಗೆ ಸಂಭವಿಸಬಹುದಾದ ಎಲ್ಲ ಕೇಡುಗಳನ್ನು ನಿವಾಸಿದಂತಾಗುತ್ತದೆ. ಸತ್ತು ಇಲ್ಲವಾಗುವುದರ ಮೂಲಕ ಆಕೆ ಜಾತಿಯ ಒಳಗಾಗಲೀ ಹೊರಗಾಗಲೀ ಮದುವೆಯಾಗುವ ಸಮಸ್ಯೆ ಇರುವುದಿಲ್ಲ." ಆದರೆ "ಹೀಗೆ ಸುಡುವುದಕ್ಕಿಂತಲೂ ಕಡ್ಡಾಯದ ವೈಧವ್ಯ ಅದು ಹೆಚ್ಚು ವಾಸ್ತವಕ್ಕೆ ಇಳಿಸುವುದು ಸುಲಭ. ಇದು ಮಾನವೀಯವಾಗಿರುವುದಲ್ಲದೆ ಸತಿ ಹೋಗದಂತೆಯು ಹಾಗು ಪುನಃ ವಿವಾಹವಾಗದಂತೆಯು ತಡೆದು ಕಾಪಾಡುತ್ತದೆ. ಗುಂಪಿನ ನೈತಿಕತೆಯನ್ನು ರಕ್ಷಿಸುವಲ್ಲಿ ವಿಫಲವಾಗುವ ಸಾಧ್ಯತೆಗಳಿವೆ. ಕಡ್ಡಾಯ ವೈಧವ್ಯದಲ್ಲಿ ಆದರೆ ಸ್ತ್ರೀ ಇರುತ್ತಾಳೆಂಬ ನಂಬಿಕೆ ಇದ್ದರೂ ಆಕೆ ತನ್ನ ಜಾತಿ ಸಮಾಜದವರು ಎಳೆದ ಲಕ್ಷ್ಮಣ ರೇಖೆಯನ್ನು ದಾಟಬಹುದು. ಅದ್ದರಿಂದ ಮರುಳಾದ ಪರಿಸ್ಥಿತಿಯಲ್ಲಿರುವಂತೆ ಆಕೆಯನ್ನು ಕೆಳದರ್ಜೆಗೆ ಇಳಿಸಬಹುದು ಅಂದರೆ ಕೇಶಮುಂಡನೆ, ತಾಳಿ, ಕಾಲು ಉಂಗುರ ಇತ್ಯಾದಿ ಆಭರಣಗಳನ್ನು ತೆಗೆಯಬಹುದು. (ಡಾ.ಬಾ.ಅಂ.ಬ.ಭಾ: ಸಂ-೧; ಪು-೧೩,೧೪)

ಅದೇ ತರಹ ಹೆಚ್ಚುವರಿ ಗಂಡಸಿನ ಸಂದರ್ಭವನ್ನು ಪರಿಶೀಲಿಸುವ ಅಂಬೇಡ್ಕರ್ "ತನ್ನನ್ನು ಒಂದು ಜಾತಿಗೊಳಪಡಿಸಲು ಇಚ್ಛಿಸುವ ಗುಂಪಿನಲ್ಲಿ ಹೆಚ್ಚುವರಿ ಹೆಣ್ಣಿನದಕ್ಕಿಂತ ಹೆಚ್ಚುವರಿ ಗಂಡಸಿನ (ವಿಧುರ) ಸಮಸ್ಯೆ ಇನ್ನು ಪ್ರಮುಖತರವಾಗಿದೆ ಮತ್ತು ಸಮಸ್ಯಾತ್ಮಕವಾಗಿದೆ.

ಅನಾದಿ ಕಾಲದಿಂದಲೂ ಹೆಣ್ಣಿಗೆ ಹೋಲಿಸಿದಾಗ ಗಂಡು ಮೇಲುಗೈ ಪಡೆದಿದ್ದಾನೆ. ಎಲ್ಲ ಗುಂಪಿನಲ್ಲೂ ಆತ ಪ್ರಧಾನ ವ್ಯಕ್ತಿ. ಎರಡು ಲಿಂಗಗಳಲ್ಲಿ ಆತನಿಗೆ ಅಧಿಕತರವಾದ ಪ್ರತಿಷ್ಠೆಯಿದೆ. ಸ್ತ್ರೀಯ ಮೇಲಿನ ಅವನ ಈ ಸಾಂಪ್ರದಾಯಿಕವಾದ ಶ್ರೇಷ್ಠತೆಯಿಂದಾಗಿ ಆತನ ಅಪೇಕ್ಷಗಳನ್ನು ಯಾವಾಗಲೂ ಪರಿಶೀಲಿಸಲಾಗುತ್ತದೆ. ಇನ್ನೊಂದು ಕಡೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಎಲ್ಲ ಬಗೆಯ ಪಕ್ಷಪಾತ ಕಟ್ಟಳೆಗಳಿಗೂ ಸ್ತ್ರೀ ಸುಲಭವಾಗಿ ಬಲಿಯಾಗುತ್ತಿದ್ದಾಳೆ. ಆದರೆ ಗಂಡಸು ಕಟ್ಟಳೆಗಳನ್ನು ಮಾಡುವ ವ್ಯಕ್ತಿಯಾಗಿ ಅನೇಕ ಬಾರಿ ಅವುಗಳಿಗೆ ಅತೀತವಾಗಿದ್ದಾನೆ. ಪರಿಸ್ಥಿತಿ ಹೀಗಿರುವುದರಿಂದಾಗಿ ಒಂದು ಜಾತಿಯಲ್ಲಿ ಹೆಚ್ಚುವರಿ ಹೆಣ್ಣಿಗೆ ನೀವು ತೋರುವಂತಹ ವರ್ತನೆಯನ್ನು ಗಂಡಿಗೂ ತೋರಲಾಗುವುದಿಲ್ಲ." (ಡಾ.ಬಾ.ಅಂ.ಬ.ಭಾ: ಸಂ-೧; ಪು-೧೬)

ಈ ಹಿನ್ನಲೆಯಲ್ಲಿ "ಆತನನ್ನು ಸತ್ತ ಆತನ ಹೆಂಡತಿಯೊಂದಿಗೆ ಸುಡುವುದು ಎರಡು ರೀತಿಗಳಲ್ಲಿ ಕಷ್ಟಸಾಧ್ಯ. ಮೊದಲನೆಯದೆಂದರೆ ಆತ ಗಂಡಸು ಎಂಬುದೊಂದೆ ಸರಳ ಕಾರಣಕ್ಕಾಗಿ ಆತನನ್ನು ಚಿತೆಯೇರಿಸಲು ಸಾಧ್ಯವಾಗುವುದಿಲ್ಲ. ಎರಡನೆಯದಾಗಿ, ಹಾಗೆ ಮಾಡಿದರೂ ಆ ಜಾತಿಗೆ ಒಬ್ಬ ಬಲಿಷ್ಠ ವ್ಯಕ್ತಿ ನಷ್ಟವಾಗುತ್ತಾನೆ. ಆದ್ದರಿಂದ ಅವನನ್ನು ಪ್ರಶಸ್ತವಾಗಿಯೇ ನಿವಾರಿಸಿಕೊಳ್ಳಲು ಇನ್ನೆರಡು ಪರಿಹಾರಗಳುಳಿಯುತ್ತವೆ. ಪ್ರಶಸ್ತಿವಾಗಿಯೇ ಎಂದು ನಾನು ಹೇಳುತ್ತಿರುವುದು ಏಕೆಂದರೆ ಆತ ಗುಂಪಿಗೊಂದು 'ಆಸ್ತಿ'." (ಅದೇ, ಪು-೧೩,೧೪)

ಆತ ಗುಂಪಿಗೆ ಮುಖ್ಯವಾದದುರಿಂದಲೂ, "ಸ್ವಜಾತಿ ಪದ್ಧತಿಯನ್ನೇ ಮುಖ್ಯವಾಗಿರುವುದರಿಂದಲೂ ಇದರ ಪರಿಹಾರ ಎರಡು ಗುಂಪುಗಳಿಗೂ ಸಲ್ಲುವಂತೆ ಅವನಿಗೆ ವಿಧುರ, ಬ್ರಹ್ಮಚರ್ಯವನ್ನು ಹೇರುತ್ತವೆ. ಆದರೆ ಇದು ತಾತ್ವಿಕವಾಗಿಯೂ ಪ್ರಾಯೋಗಿಕವಾಗಿಯೂ ವಿಫಲಗೊಳ್ಳುತ್ತದೆ. ಒಂದು ಸಂಸ್ಕೃತ ಪರಿಭಾಷಿಕ ಶಬ್ದವನ್ನು ಬಳಸಿ ಹೇಳುವುದಾದರೆ ಅವನನ್ನು ಒಬ್ಬ 'ಗೃಹಸ್ಥ' (ಒಂದು ಕುಟುಂಬ ಪಾಲಕ) ನನ್ನಾಗಿ ಇಡುವುದು. ಜಾತಿ ಹಿತದೃಷ್ಟಿಯಿಂದಲೇ, ಆದರೆ ಜಾತಿಯೊಳಗೆ ಒಬ್ಬ ಹೆಂಡತಿಯನ್ನು ಅವನಿಗೆ ಒದಗಿಸುವುದೇ ಸಮಸ್ಯೆಯಾಗಿದೆ. ಹೊರನೋಟಕ್ಕೆ ಇದು ಅಸಾಧ್ಯ. ಏಕೆಂದರೆ ಒಂದು ಜಾತಿಯಲ್ಲಿರಬೇಕಾದ ಪ್ರಮಾಣವೆಂದರೆ ಒಂದು ಗುಂಪಿಗೆ ಒಂದು ಹೆಣ್ಣು ಎರಡು ಬಾರಿ ಮದುವೆ ಆಗುವ ಅವಕಾಶವನ್ನು ಯಾರೂ ಹೊಂದಲಾಗದು. ಬಿಗಿಯಾಗಿ ತಾನೇ ಹಾಕಿರುವ ಒಂದು ಜಾತಿಯೊಳಗೆ ಮದುವಣಿಗರ ಬಳಿ ಹೋಗುವ ಮದುವಣಾಗಿತ್ತಿಯರು ಯಾವಾಗಲೂ ತಕ್ಕಷ್ಟೇ ಇರುತ್ತಾರೆ. ಇಂಥ ಸಂದರ್ಭಗಳಲ್ಲಿ ಹೆಚ್ಚುವರಿ ಗಂಡಸಿಗೆ ಆತನನ್ನು ಒಂದು ಗುಂಪಿಗೆ ಕಟ್ಟಿಹಾಕುವ ಸಲುವಾಗಿ ಮದುವೆಯಾಗಬೇಕಾದ ಹಂತವನ್ನು ಇನ್ನು ತಲುಪಿರದ, ಅಪ್ರಾಪ್ತ

ಉಳಿಸಿದಂತಾಗಿರುತ್ತದೆ. ಜಾತಿಯಿಂದ ನಿರಂತರವಾಗಿ ಹೊರಗೆ ಹರಿಯುವ ಸಂಖ್ಯಾಬಲವನ್ನು ಈ ವಿಧಾನದಿಂದ ಸಂರಕ್ಷಿಸುವಂತಾಗುವುದಲ್ಲದೆ ಸ್ವಜಾತಿ ಪದ್ಧತಿ ಮತ್ತು ನೀತಿಗಳನ್ನು ಕಾಪಾಡಿದಂತಾಗುತ್ತದೆ.

ಒಟ್ಟಿನಲ್ಲಿ ಸ್ತ್ರೀ-ಪುರುಷ ನಡುವೆ ಇರುವ ಸಾಂಖ್ಯಿಕ ತಾರತಮ್ಯವನ್ನೇ ನಾಲ್ಕು ರೀತಿಗಳಿಂದ ಹೀಗೆ ಪಾಲಿಸುತ್ತದೆ.

೧. ತನ್ನ ಸತ್ತ ಗಂಡನೊಂದಿಗೆ ವಿಧವೆಯನ್ನು ಸುಡುವುದು - ಸತಿಪದ್ಧತಿ

೨. ಕಡ್ಡಾಯ ವೈಧವ್ಯ

೩. ವಿಧುರನ ಮೇಲೆ ಬ್ರಹ್ಮಚರ್ಯ ಹೇರುವುದು

೪. ಅಪ್ರಾಪ್ತ ವಯಸ್ಕಳೊಂದಿಗೆ ಅವರ ವಿವಾಹ - ಬಾಲ್ಯವಿವಾಹ

ಅಂದರೆ ಮಹಿಳೆ ಹಿನ್ನಲೆಯಲ್ಲಿ ಹಿಂದೂ ಸಮಾಜವು ತನ್ನ ಸಾಮಾಜಿಕ ನಡುವಳಿಕೆಯಲ್ಲಿ ಸಂಕೀರ್ಣವೆನಿಸಿದರೂ, ಮೇಲುನೋಟಕ್ಕೆ ಮೂರು ಪ್ರತ್ಯೇಕ ಸಂಪ್ರದಾಯಗಳು ವ್ಯಕ್ತವಾಗುತ್ತದೆ. ಅವುಗಳೆಂದರೆ :

೧. ಸತಿಪದ್ಧತಿ

೨. ವೈಧವ್ಯ

೩. ಬಾಲ್ಯವಿವಾಹ

ಇವುಗಳಿಂದ ಜಾತಿಯನ್ನು ಕಾಪಾಡಲಾಗಿದೆ" (ಡಾ.ಬಾ.ಅಂ.ಬ.ಭಾ: ಸಂ-೧; ಪು-೧೬,೨೧) ಎನ್ನುತ್ತಾರೆ.

ಈ ಎಲ್ಲ ಸಂಗತಿಗಳನ್ನು ಹೀಗೆ ಗ್ರಹಿಸಬಹುದು. ಅಂಬೇಡ್ಕರ್ ಅವರ ಈ ಚಿಂತನೆಯು ವಸಾಹತು ಸಂದರ್ಭದ ಭಿನ್ನವಾದ ಚಿಂತನಾಕ್ರಮವಾಗಿದೆ. ಅಂದರೆ ಅದು ಮಹಿಳೆ ಮತ್ತು ಜಾತಿಯ ಪ್ರಶ್ನೆಗಳನ್ನು ಇಂಡಿಯಾದ ಸಂಸ್ಕೃತಿಯ ಸಂದರ್ಭದಲ್ಲಿ ಪ್ರಸ್ತುತಪಡಿಸುತ್ತದೆ. ಅಂದರೆ ಭಾರತದ ಜನಾಂಗಗಳು ಅಂತರ ಸಂಬಂಧವಿದ್ದು, ಅಖಂಡವಾದ ಸಾಂಸ್ಕೃತಿಕ ಏಕತೆಯನ್ನು ಪಡೆದಿವೆ. ಹಾಗಾಗಿ, ಭಾರತದ ಆದಿವಾಸಿ ಸಮಾಜ ಜಾತಿ, ಲಿಂಗ ತಾರತಮ್ಯಕ್ಕೆ ಹೊರತಾದದ್ದಾಗಿದೆ. ಆದರೆ ಈ ಸಮಾಜದ ಮೇಲಿನ ಆರ್ಯರ ಅಂದರೆ ವೈದಿಕ ಸಮಾಜದ ಸ್ಥಾಪನೆ. ಲಿಂಗ ಮತ್ತು ಜಾತಿ ತಾರತಮ್ಯ ಹೇರಲ್ಪಟಿತು. ಆದ್ದರಿಂದ ಪುರುಷ-ಪುರುಷ, ಮಹಿಳೆ-ಮಹಿಳೆ, ಪುರುಷ-ಮಹಿಳೆ, ಮಹಿಳೆ-ಪುರುಷರ ನಡುವೆ ಪ್ರಧಾನ-ಅಧೀನ ನೆಲೆಗಳು ಇವೆ. ಇವುಗಳಲ್ಲಿನ ತಾರತಮ್ಯ ಧೋರಣೆ ಅಸಮಾನತೆಯನ್ನು ಸೃಷ್ಟಿಸುತ್ತದೆ. ಅಲ್ಲದೆ ಮಹಿಳೆಯರ ಸಂಬಂಧದಲ್ಲಿ ಸಮಸ್ಯೆಯಾಗಿ ಪ್ರಸ್ತುತ ಪಡೆಯುತ್ತದೆ. ಆದ್ದರಿಂದ ಭಾರತದ ಮಹಿಳೆಯರ ಎಲ್ಲ ಸಮಸ್ಯೆಗಳು ಜಾತಿಯಿಂದ ನಿಷ್ಪನ್ನಗೊಂಡಿವೆ.

ಈ ಹಿನ್ನಲೆಯಲ್ಲಿ ಅಂಬೇಡ್ಕರ್ ಸಹ ಸುಧಾರಣಾವಾದಿಗಳಾ ಸತಿ, ವಿಧವಾ, ಬಾಲ್ಯವಿವಾಹ ಇತ್ಯಾದಿ ವಿಷಯಗಳನ್ನೇ ಕೈಗೆತ್ತಿಕೊಂಡರೂ ಅದನ್ನು ಭಿನ್ನವಾಗಿ ವ್ಯಾಖ್ಯಾನಿಸಲು ಪ್ರಯತ್ನಿಸುವುದು ಗಮನಾರ್ಹವಾದುದಾಗಿದೆ. ಅವರ ಪ್ರಕಾರ ಬಹುಪತ್ನಿತ್ವ, ಅಸಮವಿವಾಹ, ವೈಧವ್ಯ ಆಚರಣೆ, ಸತಿ ಇತ್ಯಾದಿ ಆಚರಣೆಗಳಿಗೆ ಸ್ವಜಾತಿ ವಿವಾಹ ಪದ್ಧತಿಯೇ ಕಾರಣ. ಜಾತಿ ಸಮಸ್ಯೆಯು ಅಂತಿಮವಾಗಿ ಮದುವೆಗೆ ಪ್ರಾಪ್ತವಯಸ್ಕರಾದ ಸ್ತ್ರೀ-ಪುರುಷ ವೈರುಧ್ಯಗಳನ್ನು ಸರಿಪಡಿಸುವ ಒಂದು ಅಂಶವಾಗಿ ಮಾರ್ಪಡುತ್ತದೆ. ಜಾತಿಯೊಳಗೆ ಉಳಿಯಬೇಕೆಂಬ ಘಟಕಕ್ಕೆ ಸ್ತ್ರೀ-ಪುರುಷರ ಸಂಖ್ಯೆಯಲ್ಲಿ ಸಮಾನತೆ ಇರಬೇಕು. ಆದರೆ ಇದು ಸಾಧ್ಯವಿಲ್ಲ. ಹುಟ್ಟಿನಲ್ಲಾಗಲಿ, ಮರಣದಲ್ಲಾಗಲಿ ಇದು ಹೆಚ್ಚುವರಿಯಾದ ಗಂಡು ಹೆಣ್ಣನ್ನು ಸಮುದಾಯದಲ್ಲಿ ಸೃಷ್ಟಿಸುತ್ತದೆ. ಹಾಗೆ ಹೆಚ್ಚುವರಿಯಾದ ಹೆಣ್ಣನ್ನು ನಿವಾರಿಸುವ ವಿಧಾನವಾಗಿ ಸತಿಪದ್ಧತಿ, ವೈಧವ್ಯ ಹುಟ್ಟಿಕೊಳ್ಳುತ್ತವೆ. ಈ ಆಚರಣೆಗಳು ಹೆಚ್ಚುವರಿ ಹೆಣ್ಣನ್ನು ಸಮುದಾಯದೊಳಗೆ ಬಳಸುವ ಅಥವಾ ಕಳಿಸುವ ಮಾದರಿಗಳು. ಆದರೆ ಈ ಒತ್ತಡ ಹೆಚ್ಚುವರಿ ಗಂಡಿನ ಮೇಲಿರುವುದಿಲ್ಲ. ಬ್ರಹ್ಮಚರ್ಯ, ವಿವಾಹಬಾಹಿರ ಸಂಬಂಧ, ವರ್ಣಸಂಕರ ಇತ್ಯಾದಿಗಳಲ್ಲೆಲ್ಲಾ ಪುರುಷನಿಗೆ ಕೆಲವು ಹೆಚ್ಚಿನ ರಿಯಾಯತಿಗಳು ಸವಲತ್ತುಗಳು ಇವೆ. ಅದಕ್ಕಾಗಿ ಅಳದಲ್ಲಿ ಸತಿ, ವಿಧವಾ, ಬಾಲ್ಯವಿವಾಹ ಇತ್ಯಾದಿಗಳು ಜಾತಿ ಉಳಿವಿಗಾಗಿ ಇರುವಂತಹವು. ಅಂದರೆ ಮೇಲ್ಜಾತಿ, ಮತ್ತು ಕೆಳಜಾತಿ ಮಹಿಳೆಯರ ಸಮಸ್ಯೆಗಳು ಸ್ವಜಾತಿ ವಿವಾಹದಿಂದ ಉಳಿದಿವೆ ಅಷ್ಟೆ ಅಲ್ಲ ಅವು ಏಕರೂಪವಾದವು. ಅದ್ದರಿಂದಲೇ ಅಸ್ಪೃಶ್ಯತೆಯನ್ನು ಜಾತಿ ವ್ಯವಸ್ಥೆಯೊಂದಿಗೆ ಗ್ರಹಿಸಿದರು. ಆದರೆ ಅದೇ ಲಿಂಗಸಂಬಂಧ ಸಮಸ್ಯೆಯನ್ನು ಬ್ರಾಹ್ಮಣ ಪಿತೃಪ್ರಧಾನತೆಯೊಂದಿಗೆ ಗುರುತಿಸಿದರು. ಹಾಗಾಗಿ ಅಂತರ್‌ಜಾತಿ ವಿವಾಹ ಪರಿಕಲ್ಪನೆ ಪ್ರಸ್ತುತಪಡಿಸಿದರು. ಅದ್ದರಿಂದ ಐರೋಪ್ಯರ ಮತ್ತು ದೇಶಿಯ ಸುಧಾರಣಾವಾದಿಗಳ ಬಾಲ್ಯವಿವಾಹ, ಸತಿ, ವಿಧವಾ ಮೊದಲಾದ ಮಹಿಳಾ ಸಮಸ್ಯೆಗಳನ್ನು ಅಂತರ್‌ಜಾತಿ ವಿವಾಹದ ಮೂಲಕ ಮಾತ್ರ ನಿರ್ಮೂಲನೆ ಸಾಧ್ಯ. ಹಾಗಾಗಿ ಎಲ್ಲರು ಈ ವಿವಾಹದ ಪ್ರಕಾರದ ಕಡೆಗೆ ಗಮನಹರಿಸಬೇಕಾದ ತುರ್ತನ್ನು ಪ್ರಸ್ತುತಗೊಂಡಿತು. ಅಂದರೆ ಜಾತಿಪದ್ಧತಿಯ ನಿರಾಕರಣೆಯೊಂದಿಗೆ ಮಹಿಳೆ ಸಮಸ್ಯೆ ಪರಿಹಾರ ಹೊಂದಬಹುದಾದವು.

ಆದರೆ ಜಾತಿವ್ಯವಸ್ಥೆಯು ಬ್ರಾಹ್ಮಣರಿಂದ ನಿಷ್ಪನ್ನ ಆಗಿರುವುದರಿಂದ ಮೇಲ್ಜಾತಿಯ ಸಂರಕ್ಷತೆಯ (?) ಒಳಗಿರುವ ಮಹಿಳೆಯರು ಜಾತಿ ಪದ್ಧತಿಯ ಊರ್ಜಿತಕ್ಕಾಗಿ (ಸ್ವಯಂ) ಸತಿಯಾಗಬೇಕಾಗುತ್ತದೆ. ತನ್ನ ಸಮುದಾಯದ ಸ್ತ್ರೀಯನ್ನು ಬಲಿಕೊಡುವುದರ ಮೂಲಕ ಮೇಲ್ಜಾತಿಯ ಪುರಷ ತನ್ನ ಪಾವಿತ್ರ್ಯವನ್ನುಪ್ರತಿಷ್ಠೆಯನ್ನು ಈಡೇರಿಸಿಕೊಳ್ಳುತ್ತಾನೆ. ಈ ಮೂಲಕ ಸಮಸ್ತ ಜನಸಮುದಾಯದ ಮೇಲಿನ ತನ್ನ ಹಕ್ಕನ್ನು ಸ್ಥಾಪಿಸಿಕೊಳ್ಳುತ್ತಾನೆ. ಇದು ಚಾರ್ಡೆ

ಮಾನಸಿಕ ಸಿದ್ಧಾಂತ ನೆಲೆಯ ವಿಸ್ತರಿಸಲ್ಪಡುವುದರಿಂದ ನಂತರ ಕೆಳಜಾತಿಯ ಪುರುಷರು ಸಹ ಬ್ರಾಹ್ಮಣ ಮಾದರಿಯನ್ನೇ ಅನುಸರಿಸಿದರು ಕೆಳಜಾತಿ ಮಹಿಳೆಯರು ಜಾತಿವ್ಯವಸ್ಥೆಯನ್ನು ಕಾಪಾಡಲು ತನ್ನ ಜಾತಿಪುರುಷರಿಗೆ ನಿಷ್ಠೆಯಿಂದ ಇರಬೇಕು ಹಾಗೆಯೇ ಮೇಲ್ಜಾತಿ ಪುರುಷನಿಗೆ ಕೆಳಜಾತಿ ಮಹಿಳೆಯರು ಸೊತ್ತಾಗಿರಬೇಕು. ಅಂದರೆ ತನ್ನ ಜಾತಿ ಪುರುಷನಿಗೆ ಹೆಂಡತಿಯಾದರೆ, ಮೇಲ್ಜಾತಿ ಪುರುಷರಿಗೆ ದೇವದಾಸಿ, ಲೈಂಗಿಕ ತೃಷೆ ತೀರಿಸುವ ವಸ್ತು ಆಗಬೇಕು. ಹಾಗಾಯೇ ಮೇಲ್ಜಾತಿ ಮಹಿಳೆಗೆ ದಾಸಿಯಾಗಿರಬೇಕು, ಅದು ಆಧುನಿಕ ಕುಟುಂಬಗಳಲ್ಲಿ ಮನೆ ಕೆಲಸ ಮಾಡುವವರ ರೂಪಪಡೆಯುತ್ತದೆ. ಹಾಗಾಗಿ ಅಂತರಜಾತಿ ವಿವಾಹದ ಮೂಲಕ ಇವುಗಳ ಒಳಗಿನ ಶ್ರೇಣೀಕರಣ ಕಡಿದು ಹೋಗುತ್ತದೆ. ಈ ಮೂಲಕ ಮಹಿಳೆ ಸಮಸ್ಯೆಗಳು ಪರಿಹಾರವಾಗುತ್ತವೆ ಎಂದು ಗ್ರಹಿಸಬಹುದು. ಅದ್ದರಿಂದಲೇ ಅಂಬೇಡ್ಕರ್ ಜಾತಿಹೋರಾಟವನ್ನು ಸಂಘಟಿಸುತ್ತಿದ್ದಾಗಲೂ ದಲಿತ ಮಹಿಳೆ ಸಮಾನಂತರ ಬ್ರಾಹ್ಮಣ ಮಹಿಳೆರ ಸಮಸ್ಯೆ ಪರಿಕಲ್ಪನೆಯಲ್ಲಿ ಪರಿಗಣಿಸುತ್ತಾರೆ. ಈ ಹಿನ್ನಲೆ ಜಾತಿ ನಿರ್ಮೂಲನೆಯಿಂದ ಮಹಿಳಾ ಸಮಸ್ಯೆಗೆ ಪರಿಹಾರ ಎಂಬುದನ್ನು ಪ್ರಸ್ತುತಪಡಿಸಬಹುದು.

ಈ ಹಿನ್ನಲೆಯಲ್ಲಿ ವಿವಾಹ ಸಂಸ್ಥೆಯನ್ನು ಪ್ರಶ್ನಿಸಿದೆ ಉಳಿಸಿಕೊಂಡರು. ಅಂದರೆ ಜಾತಿ ಶ್ರೇಣೀಕರಣ ಕಡಿತಗೊಳಿಸಿ ಲಿಂಗಾಧಾರಿತ ಶ್ರೇಣೀಕರಣಗಳನ್ನು ವ್ಯವಸ್ಥೆ ಜಾತಿಯಾಗಿಸತೊಡಗಿದರು ದಲಿತ ಮಹಿಳೆಯರ ವಿವಾಹದ ಕಡೆ ಗಮನಹರಿಸಬೇಕು ಎಂಬುದ ಅಂಬೇಡ್ಕರ್ ನಿಲುವು. ಈ ಕುರಿತು ಅವರು "1936 ರಲ್ಲಿ ಶೋಷಣೆಗೊಳಪಟ್ಟ ದೇವದಾಸಿ, ಜೋಗತಿ, ಪತ್ರಿಜೆ ಆರಾಧನೆ ಮುಂತಾದ ವರ್ಗಗಳ ಮಹಿಳೆಯರ ಸಮಾವೇಶವು ಮುಂಬಯಿಯ ದಾಮೋದರ್ ಧಾಕರ್ಸಿ ಅಂಗಣದಲ್ಲಿ ನಡೆಯಿತು. ಆ ಸಂದರ್ಭದ ಅಂಬೇಡ್ಕರ್ ಮಾತುಗಳು ಮಹತ್ವವಾದುದು. ನಮ್ಮೊಂದಿಗೆ ನೀವು ನಿಮ್ಮ ಧರ್ಮವನ್ನು ಬದಲಾಯಿಸಿಕೊಳ್ಳುತ್ತಿರೋ, ಇಲ್ಲವೋ ಎಂಬ ಅಂಶ ನನಗೆ ಮುಖ್ಯವಲ್ಲ. ಆದರೆ ನೀವೂ ನಮ್ಮೊಂದಿಗೆ ಬಾಳಬೇಕಾದರೆ ನಿಮ್ಮ ಅವಮರ್ಯಾದೆಯ ಜೀವನವನ್ನು ಬಿಟ್ಟುಬಿಡಬೇಕು. ಪಾಶ್ಚಾತ್ಯಪದ್ಧತಿಗೆ ಎಳೆಯುವಂತಹ ಯಾವುದೇ ಪರಿಸರವಿಲ್ಲದೆ ನೀವು ಇತರ ವರ್ಗದ ಮಹಿಳೆಯರಂತೆ ವಿವಾಹವಾಗಿ ಗೃಹಕೃತ್ಯಗಳನ್ನು ತೊಡಗಬೇಕು ಎಂದು ನಾನು ನಿಮ್ಮನ್ನು ಒತ್ತಾಯಿಸುತ್ತೇನೆ" (ಅಂಬೇಡ್ಕರ್; ಉದ್ಧೃತ: ಅರವಿಂದಮಾಲಗತಿ: ೧೯೯೧; ಪು-೧೪೬) ಎನ್ನುತ್ತಾರೆ.

ಒಟ್ಟಿನಲ್ಲಿ ಮೂಲ ಜಾತಿಚಿಂತಕರಾದ ಅಂಬೇಡ್ಕರ್ ಮಹಿಳಾ ಪ್ರಶ್ನೆ ಜಾತಿವ್ಯವಸ್ಥೆಯ ಒಳಗೆ ಗ್ರಹಿಸಿದರು. ಅಂದರೆ ಅಸ್ಪೃಶ್ಯತೆಯನ್ನು ಜಾತಿವ್ಯವಸ್ಥೆಯೊಂದಿಗೆ ಗುರುತಿಸಿದಂತೆ ಮಹಿಳೆ ಸಮಸ್ಯೆಯನ್ನು ಆಯಾ ಜಾತಿ ಪಿತೃಪ್ರಧಾನತೆಯೊಂದಿಗೆ ಗುರುತಿಸಿ ತಾತ್ವಿಕರಿಸಿದರು ವಿಸ್ತರಿಸಲಿಲ್ಲ. ಅಂದರೆ ಮಹಿಳೆ ಸಮಸ್ಯೆಯನ್ನು ಏಕರೂಪಗೊಳಿಸಿ ಬ್ರಾಹ್ಮಣ ಪಿತೃಪ್ರಧಾನತೆಯೊಂದಿಗೆ ಮುಖಾಮುಖಿಯಾಗಿಸಿದರು ಆದರೆ. ಆಯಾ ಜಾತಿ ಪಿತೃಪ್ರಧಾನತೆಗಳನ್ನು ಮುಖಾ-ಮುಖಿ

ಆಗಿಸುವಲ್ಲಿ ಉದಾರಿಕರಿಸುತ್ತಾರೆ. ತಮ್ಮ ಪಿತೃಪ್ರಧಾನ ಗುಣಲಕ್ಷಣಗಳನ್ನು ಗುರುತಿಸುವುದಿಲ್ಲ ಎನ್ನಬಹುದು. ಹಾಗಾಗಿ ಮಹಿಳಾ ಸಮಸ್ಯೆಯನ್ನು ಅಂತರಜಾತಿ ವಿವಾಹದ ಮೂಲಕ ಬಗೆಹರಿಸಬಹುದು ಎಂದು ಗ್ರಹಿಸಲಾಯಿತು. ಅದ್ದರಿಂದ ಇದು ಮಹಿಳಾ ಪ್ರಶ್ನೆಯನ್ನು ಏಕರೂಪಿ ನೆಲೆಯಲ್ಲಿ ಗುರುತಿಸುವ ಕ್ರಮ ವಸಾಹತು ಸಂದರ್ಭದ ಪ್ರಭಾವವನ್ನು ತೋರಿಸುತ್ತದೆ. ಅಲ್ಲದೆ ಪಿತೃಪ್ರಧಾನತೆ ಕೇಂದ್ರವಾದ ವಿವಾಹ ಸಂಬಂಧಿ ಲಿಂಗಾಧಾರಿತ ಶ್ರೇಣೀಕರಣಗಳ ಕುರಿತಂತೆ ಚರ್ಚೆಗಳನ್ನು ಅಪ್ರಸ್ತುತವಾಗಿಸುತ್ತದೆ. ಜೊತೆಗೆ ಜಾತಿವ್ಯವಸ್ಥೆಯಲ್ಲಿ ಪಿತೃಪ್ರಧಾನತೆಯನ್ನು ಆಧರಿಸಿ ಸ್ತ್ರೀಯರ ಕುರಿತ ವಾದಗಳ ಅಗತ್ಯತೆಯನ್ನು ಪ್ರತಿಬಿಂಬಿಸುತ್ತದೆ.

ಅಂಬೇಡ್ಕರ್ ಒಪ್ಪುವ "ವಿವಾಹವು ಸ್ತ್ರೀ-ಪುರುಷರನ್ನು ಪ್ರತ್ಯೇಕ ಜಾತಿಯಾಗಿಸುತ್ತದೆ." ಇದರ ಬಗ್ಗೆ ಸ್ತ್ರೀವಾದ ಅನೇಕ ತಕರಾರುಗಳಿವೆ. ಏಕೆಂದರೆ ಇದು ಸ್ತ್ರೀದಾಸ್ಯದ ಪ್ರಶ್ನೆಯನ್ನು ವಿವಾಹ ಸಂಸ್ಥೆಯಿಂದ ವಿವರಿಸಬಯಸುತ್ತದೆ. ಅಂದರೆ ಶತಮಾನಗಳಿಂದ ಸಮಾಜದಲ್ಲಿ ಅಸ್ತಿತ್ವ ಉಳಿಸಿಕೊಂಡಿರುವ ವಿವಾಹ ಸಂಸ್ಥೆ ಹೆಣ್ಣು-ಗಂಡುಗಳ ಲೈಂಗಿಕತೆಯನ್ನು ಈಡೇರಿಸುತ್ತದೆ. ಆದರೆ ಇದು ಸ್ತ್ರೀ-ಪುರಷರನ್ನು ಸೇರಿಸುವುದಕ್ಕೆ ಅಷ್ಟೇ ಸೀಮಿತವಾಗದೆ ಅವರ ದೇಹ, ಬುದ್ಧಿ, ಮನಸ್ಸಿನಲ್ಲಿ ಪ್ರಧಾನ ಅಧೀನತೆಯನ್ನು ನಿರ್ಮಿಸಿದೆ. ಹಾಗಾಗಿ ಇದು ಲಿಂಗಾಧಾರಿತ ಶ್ರೇಣೀಕರಣಗಳನ್ನು ಉಳಿಸಿ ಬಿಟ್ಟಿದೆ. ಆದ್ದರಿಂದ ಸ್ತ್ರೀವಾದ ಮತ್ತು ಅದರ ಪ್ರಸ್ಥಾನಗಳು ಈ ಕುರಿತು ಅನೇಕ ವಾದಗಳನ್ನು ಹೂಡುತ್ತವೆ.

ಸ್ತ್ರೀವಾದಿಗಳ ಪ್ರಕಾರ ವಿವಾಹವೇ ಮಹಿಳೆಯ ಎಲ್ಲ ಸಮಸ್ಯೆಗಳ ಮೂಲ. ಈ ಕುರಿತು ಜ್ಯೂಲಿಯಟ್ ಹೇಳಿಕೆ ಗಮನಾರ್ಹವಾದುದು. "ಸ್ತ್ರೀ ಜಗತ್ತಿನೊಳಗೆ ಹೆಂಗಸಿನಿಂದಲೇ ಪೋಷಿತರಾಗುವ ಅವರಿಗೆ ಮುಖ್ಯ ಗುರಿ ಎಂದು ತೋರಿರುವುದು. ಮದುವೆ ಅಂದರೆ ವಾಸ್ತವಿಕವಾಗಿ ಗಂಡಸಿಗೆ ಅಧೀನವಾಗುವುದು" ಎಂದು ವ್ಯಾಖ್ಯಾನಿಸಿದ್ದಾಳೆ. (ಜ್ಯೂಲಿಯೆಟ್, ಉದೃತ: ಸಿಮೊನ್ ದ ಬೋವಾ: ೨೦೦೭; ಪು-೪೪) ಇದರ ರಾಚನಿಕ ನೆಲೆಗಿಂತ ಅದರ ಅಂತಸತ್ವವನ್ನು ಪ್ರತಿರೋಧಿಸುವ ಸಿ ಮೋನಾ ದ ಬೋವಾ "ಹೆಂಗಸು ಗಂಡಿಸಿನೊಡನೆ ಸಂಬಂಧ ಹೊಂದಿರುವ ಮದುವೆ ಆಕೆಯ ಅಧೀನಸ್ಥಿತಿಗೆ ಕಾರಣವಲ್ಲ ಆಕೆ ಮದುವೆ ಸಂಬಂಧಕ್ಕೆ ಮಾತ್ರ ಕಟ್ಟು ಬಿದ್ದಿರುವುದೇ ಅದಕ್ಕೆ ಮುಖ್ಯ ಕಾರಣ" ಎನ್ನುತ್ತಾಳೆ (ಸಿಮೊನ್ ದ ಬೋವಾ: ೨೦೦೭; ಪು-೫೭)

ಒಟ್ಟಿನಲ್ಲಿ ವಿವಾಹ ಹೆಣ್ಣನ್ನು ಗಂಡಿಗೆ ಅಧೀನತೆ ಅಷ್ಟೆ ಒಳಪಡಿಸಿದೆ. ಅದು ನಿರಂತರವಾಗಿರಲು ಸ್ತ್ರೀ-ಪುರುಷರನ್ನು ಪ್ರತ್ಯೇಕವಾಗಿಸುವ ಲಿಂಗಾಧಾರಿತ ತಾರತಮ್ಯವನ್ನು ಸೃಷ್ಟಿಸುತ್ತದೆ. ಈ ಕಾರಣಕ್ಕಾಗಿಯೇ ಪ್ರಪಂಚದಲ್ಲಿ ಹೆಣ್ಣು ಎನ್ನುವುದೇ ಒಂದು ಪ್ರತ್ಯೇಕ ಸಮುದಾಯವಾಗಿ ಗುರುತಿಸಿಕೊಳ್ಳುತ್ತಿದೆ. ತಮ್ಮ ವಿಸ್ಮೃತಿಯನ್ನು ಶೋಧನೆಗೆ ಒಳಪಡಿಸಲು ತಹತಹಿಸುತ್ತಿವೆ.

ಆದ್ದರಿಂದ ಸಮಾಜದ ಪರಿಗಣನೆಯಲ್ಲಿ ಹೆಣ್ಣು ಎಂಬುದು ಒಂದು ಪ್ರತ್ಯೇಕ ಜಾತಿ ಆಗಿದೆ. ಮಹಿಳೆಯರೇನೂ ಹೀಗೆ ಪ್ರತ್ಯೇಕ ಜಾತಿಯಾಗಿ ಉಳಿಯಲು ಬಯಸುವುದಿಲ್ಲವಾದರೂ ಇದೊಂದು ಸಾಮಾಜಿಕ ವಾಸ್ತವವಂತೂ ಆಗಿದೆ. ಎಂದ ಮೇಲೆ ಈ ಪ್ರಶ್ನೆ ಮಹಿಳಾ ಸಮುದಾಯದಿಂದ ಅಸ್ತಿತ್ವದ ಪ್ರಶ್ನೆಯು ಹೌದು. ಜಗತ್ತಿನ ಬಹುತೇಕ ಸಮುದಾಯಗಳಲ್ಲಿ ಹೆಣ್ಣು ಸಮುದಾಯದಿಂದ ಪ್ರತ್ಯೇಕವಾಗಿ ಉಳಿಯಲು ಸಾಧ್ಯವಿಲ್ಲ ಒಂದು ವೇಳೆ ಉಳಿದರೂ ಸ್ತ್ರೀಜಾತಿಯನ್ನು ಪ್ರತ್ಯೇಕಿಸಿರುವುದು ಅಧೀನ ದರ್ಜೆಯನ್ನು ನಿಗಧಿಪಡಿಸುವ ಹುನ್ನಾರವಾಗಿಯೇ ಕಾರ್ಯನಿರತವಾಗಿವೆ. ಹೆಣ್ಣಿಗೇನೂ ತನ್ನ ಪಾಡು ತನಗೆ ಎಂಬಂತೆ ಪುರುಷನಿಂದ ವಿಮೋಚನೆಯೇನೂ ದೊರೆಯುವುದಿಲ್ಲ.

ಪಿತೃಪ್ರಧಾನ ಸಮಾಜವು ರೂಢಿಸಿಕೊಂಡ ಈ ಕ್ರಮವನ್ನು ಮುಂದುವರೆಸಿ ಸ್ತ್ರೀಜಾತಿಯನ್ನು ಒಂದಾಗಿ ಪರಿಭಾವಿಸಿ ಸ್ತ್ರೀ ವಾದವನ್ನು ನಿರ್ವಚಿಸುವ ಕ್ರಮವು ಅತ್ಯಂತ ಪ್ರಸಿದ್ಧವಾದುದೇ ಆಗಿದೆ. ಸ್ತ್ರೀಜಾತಿಯಲ್ಲಿ ಒಂದಾಗಬೇಕು ಎಂಬ ನೆಲೆಯಲ್ಲಿ ಜಾತಿ ಪರಿಕಲ್ಪನೆಯನ್ನೊಂದು ಗುಣಾತ್ಮಕ ಪರಿಕಲ್ಪನೆಯಾಗಿ ಬಳಸಲಾಗಿದೆ. ಸ್ತ್ರೀವಾದದೊಳಗೆ ಭಿನ್ನತೆಯ ಪ್ರಶ್ನೆ ತಲೆದೋರುವವರೆಗೆ ಈ ಪರಿಕಲ್ಪನೆ ಅಭಾದಿತವಾಗಿ ಬಳಕೆಗೊಂಡದ್ದೂ ಇದೆ. ಜಾತಿಯೆಂಬುದನ್ನು ಸಮಾನ ಗುಣಲಕ್ಷಣಗಳ ಸಮೂಹವನ್ನು ನಿರ್ವಚಿಸುವ, ಬೆಸೆಯುವ ಪರಿಭಾಷೆಯಾಗಿ ಗುರುತಿಸಿಕೊಂಡು ಜೈವಿಕವಾಗಿ ಪುರುಷರಿಗಿಂತ ಭಿನ್ನವಾದ ಹಾಗೂ ಸ್ತ್ರೀಯರಿಗೆಲ್ಲ ಸಮಾನವಾದ ಗುಣಲಕ್ಷಣವನ್ನು ಹೊಂದಿರುವ ಸ್ತ್ರೀ ಸಮೂಹವು ಒಂದು ಜಾತಿಯಾಗಿ ರೂಪುಗೊಂಡು ಸಮಾನತೆಗಾಗಿ ರಾಜಕೀಯ ಹೋರಾಟವೊಂದನ್ನು ಜಾಗತಿಕ ಮಟ್ಟದಲ್ಲಿ ರೂಪಿಸಲು ಸಾಧ್ಯ ಎಂಬ ನಂಬಿಕೆಯ ಮೇಲೆ ಸ್ತ್ರೀಯನ್ನೊಂದು ಏಕೀಕೃತ ಘಟಕವಾಗಿ ಭಾವಿಸುವ ಕ್ರಮವು ಆಧುನಿಕ ಚಿಂತನೆಯ ಭಾಗವಾಗಿತ್ತು. ಈ ಚಿಂತನಾಕ್ರಮ ಮಹಿಳೆಯು ಒಂದು ಜಾತಿಯೆಂಬುದಾಗಿ ಸ್ವೀಕರಿಸುವ ಮೂಲಕ ಜಾತಿ ಮತ್ತು ಮಹಿಳೆ ಪ್ರಶ್ನೆಯನ್ನು ಒಗ್ಗೂಡಿಸಲೆತ್ನಿಸಿತು.

ಆದರೆ ಆಧುನಿಕೋತ್ತರ ಚಿಂತನೆಯ ಸಂದರ್ಭವು ಜಾಗತಿಕ ಮಟ್ಟದಲ್ಲಿ ಸ್ತ್ರೀಯನ್ನೊಂದು ಜಾತಿಯಾಗಿ ಪರಿಭಾವಿಸುದರಲ್ಲಿ ಭಾರತೀಯ ನೆಲೆಯಲ್ಲಿದರೂ ಅದು ಸಾಧ್ಯವಾಗುವುದೇ ಎಂಬ ಪ್ರಶ್ನೆಯನ್ನು ಮುಂದಿಟ್ಟಿತು. 'ಸ್ತ್ರೀಜಾತಿ' ಎಂಬ ಪರಿಕಲ್ಪನೆಯಿಂದಾಗಿ ಪುರುಷ ಜಾತಿಯನ್ನು ನಿರ್ವಚನೆಗೊಳ್ಳುವುದರಲ್ಲಿ ಯಶಸ್ವಿಯಾದರೂ. ಅದು ಸ್ತ್ರೀಯನ್ನೊಂದು ಏಕೀಕೃತ ಘಟಕವಾಗಿ ನಿರ್ವಚಿಸಿಕೊಡುವುದರಲ್ಲಿ ಸೋಲುತ್ತದೆ ಎಂಬುದು ಇಲ್ಲಿನ ಮಹತ್ವದ ಪ್ರಶ್ನೆ. ಏಕೆಂದರೆ ಮಹಿಳೆ ಎಂಬುದು ಕೇವಲ ಜೈವಿಕ ಘಟಕವಲ್ಲ. ಅದೊಂದು ಸಾಮಾಜಿಕ, ರಾಜಕೀಯ ಘಟಕವಾಗಿದೆ. ಇದು ಹಲವು ಸಾಮಾಜಿಕ ಸಂಸ್ಥೆಗಳ ಪ್ರಭಾವ ಒತ್ತಡಗಳಿಗೆ ಒಳಗಾಗುತ್ತಲೇ ರೂಪುಗೊಂಡಿದೆ. ಹಾಗೂ ಈ ಎಲ್ಲಾ ಸಂಸ್ಥೆಗಳ ಪ್ರಭಾವದಿಂದ ಸ್ತ್ರೀ

ಮುಕ್ತವಾಗಿಲ್ಲ ಅಥವಾ ಅದರ ಪ್ರಭಾವ ಸ್ತ್ರೀಯರ ಮೇಲೆ ಏಕ ಪ್ರಕಾರವಾಗಿ ಅದುದಲ್ಲ ಅದರಲ್ಲೂ ಭಾರತೀಯ ಸಂದರ್ಭದಲ್ಲಿ ಗಮನಿಸಲೇಬೇಕಾದ ಜಾತಿ ಎಂಬ ಅಮೂರ್ತಸಂಸ್ಥೆ ಇದೆ. ಇಂತಹ ಜಾತಿವ್ಯವಸ್ಥೆಯ ಪ್ರಭಾವದಿಂದ ಪಿತೃಪ್ರಧಾನತೆಯೊಳಗಿನ ಎಲ್ಲಾ ಮಹಿಳೆಯರು ಒಂದೇ ಬಗೆಯ ಶೋಷಣೆಯ ಅನುಭವವನ್ನು ಹೊಂದಿರುವುದಿಲ್ಲ. ಬಹುರೂಪದಲ್ಲಿ ಅಡಗಿವೆ. ಜೊತೆಗೆ ಅವು ಹಲವು ಸಾಮಾಜಿಕ, ರಾಜಕೀಯ ಸಂಗತಿಗಳನ್ನು ಒಳಗೊಂಡಿವೆ. ಅಂದರೆ ಸ್ತ್ರೀಯನ್ನೊಂದು ಜಾತಿಯಾಗಿ ಪರಿಭಾವಿಸುವುದು 'ಮಿಥ್' ಆಗಿರುತ್ತದೆ. ಈ ಅಂಶವನ್ನು ಗಮನಿಸಿಯೇ ಭಾರತೀಯ ಚಿಂತನಾಕ್ರಮ ೧೯೮೦ ರ ನಂತರದಲ್ಲಿ ಮಹಿಳೆಯನ್ನೊಂದು ಜಾತಿಯಾಗಿ ಪರಿಭಾವಿಸುವುದಕ್ಕೆ ಬದಲಾಗಿ ಮಹಿಳೆ ಮತ್ತು ಜಾತಿ ಎಂಬ ನೆಲೆಯ ಚಿಂತನೆಯುತ್ತ ಆಸಕ್ತವಾಗಿದೆ.

ಆದರೆ ಅಂಬೇಡ್ಕರ್ ಚಿಂತನೆ ವಿವಾಹ ಬಗೆ ಪ್ರಶ್ನೆ ಎತ್ತದೆ ಜಾತಿವ್ಯವಸ್ಥೆಗೆ ಕಾರಣವಾಗಿರುವ ಸ್ವಜಾತಿ ವಿವಾಹದ ಕುರಿತು ವಿಶ್ಲೇಷಣೆ ಮಾಡುತ್ತ ಮಹಿಳೆಯರ ಸಮಸ್ಯೆಗಳನ್ನು ಏಕರೂಪಗೊಳಿಸಿ ಪರಿಹರಿಸಲು ಪ್ರಯತ್ನಿಸಿತು. ಅಂದರೆ ಎಲ್ಲ ಮಹಿಳೆಯರ ಸಮಸ್ಯೆಯನ್ನ ಬ್ರಾಹ್ಮಣ ಪಿತೃ ಪ್ರಧಾನತೆಯೊಂದಿಗೆ ಮುಖಾ-ಮುಖಿಯಾಗಿಸಿತು. ಹಾಗಾಗಿ ಭಾರತೀಯ ಮಹಿಳೆಯ ಆಯಾ ಜಾತಿ ಪಿತೃಪ್ರಧಾನತೆಯೊಂದಿಗೆ ತಾತ್ವಿಕವಾಗಿ ಗುರುತಿಸಿಕೊಂಡರು ವಿಸ್ತಾರಗೊಳ್ಳಲಿಲ್ಲ. ಈ ಮೂಲಕ ಅದು ಅಂತರ್ ಜಾತಿ ವಿವಾಹ ಎಂಬ ಪರಿಹಾರಕ್ರಮ ಜಾತಿಯಲ್ಲಿ ಮಹಿಳೆಯರ ಅನುಭವಿಸುವ ಶೋಷಣೆಗಳನ್ನು ಕಡಿತಗೊಳಿಸಿ ವಿವಾಹ ಸಂಸ್ಥೆಯೊಂದಿಗೆ ಸೇರಿಕೊಳ್ಳಲು ನೆರವಾಗುತ್ತದೆ.

ಒಟ್ಟಿನಲ್ಲಿ ಮಹಿಳೆ ಮತ್ತು ಜಾತಿ ಸಂಬಂಧಿ ವಿಷಯಗಳು ವಸಾಹತು ಸಂದರ್ಭ ಭಿನ್ನವಾದ ನೆಲೆಯ ಪ್ರಸ್ತುತಗೊಂಡರು. ವಸಾಹತು ಚಿಂತನಾಕ್ರಮ ಜಾತಿ ಸಮಸ್ಯೆಯ ಕಡಿತಗೊಳಿಸಿ ಮಹಿಳಾ ಪ್ರಶ್ನೆ ಮಹಿಳಾ ಸಮಸ್ಯೆಯಾಗಿ ಏಕರೂಪಿನೆಲೆಯ ಪ್ರಸ್ತುತ ಪಡಿಸಿತು. ಆದರೆ ಅವುಗಳನ್ನು ಪಿತೃಪ್ರಧಾನತೆಯೊಂದಿಗೆ ಮುಖಾಮುಖಿಯಾಗಿಸದೇ ವಸಾಹತು ಸಂದರ್ಭಕ್ಕೆ ಮಾತ್ರ ಎತ್ತಿದ ಪ್ರಶ್ನೆಗಳಾಗಿದ್ದವು. ಹಾಗೆಯೇ ವಸಾಹತು ಚಿಂತನಾಕ್ರಮಗಳ ಉತ್ಪನ್ನಗಳಾದ ದೇಶಿ ಸುಧಾರಣಾವಾದಿಗಳ ಮೊದಲನೆ ಮಾದರಿ ಸ್ತ್ರೀ ಸುಧಾರಣೆಯಲ್ಲಿ ಜಾತಿ ಪ್ರಶ್ನೆ ಅಲಕ್ಷ್ಯವಾಗಿಸಿತು. ಅಂದರೆ ಮಹಿಳೆಯರು ಮತ್ತು ಜಾತಿಗಳು ಕುರಿತ ಪ್ರಶ್ನೆಗಳನ್ನು ಪ್ರತ್ಯೇಕವಾಗಿ ಪರಿಭಾವಿಸಿದವು. ಬ್ರಾಹ್ಮಣ ಸ್ತ್ರೀ ಅನುಭವಿಸುತ್ತಿರುವ ಸತಿಪದ್ಧತಿ ಯಂತಹ ಸಮಸ್ಯೆಗಳನ್ನು ಬ್ರಾಹ್ಮಣ ಸಮಾಜದ ಅಂತರಿಕ ಸಮಸ್ಯೆಯಾಗಿಯೇ ಪ್ರಸ್ತುತಪಡೆಯಿತು. ಆದರೆ ಎರಡನೆಯ ಮಾದರಿಯಲ್ಲಿ ಮಹಿಳೆಯರು ಮತ್ತು ಜಾತಿಗಳನ್ನು ಪ್ರಶ್ನೆಗಳನ್ನು ಕುರಿತು ಒಗ್ಗೂಡಿಸುವ ಪ್ರಯತ್ನ ನಡೆದವು. ಅಂದರೆ ಮಹಿಳೆಯ ಸಮಸ್ಯೆ ಸಂದರ್ಭದಲ್ಲಿ ಜಾತಿವ್ಯವಸ್ಥೆ

ಮಹತ್ವದ ಪಾತ್ರವಹಿಸುತ್ತದೆ. ಉದಾಹರಣೆ ಮಹಿಳೆಯರು ವೈಧವ್ಯ ಎಂಬ ಸಾಮಾಜಿಕ ನಿಯಮಗಳನ್ನು ಮುರಿಯುವ ಮೂಲಕವೇ ಆಯಾ ಸಮುದಾಯಕ್ಕೆ ಮಹಿಳೆ ಅಪವಿತ್ರಳೆನಿಸಿ, ಅಸ್ಪೃಶ್ಯಗಳಾಗುತ್ತಾಳೆ. ಅದ್ದರಿಂದ ಅಸ್ಪೃಶ್ಯತೆಯು ಅಪವಿತ್ರತೆಯನ್ನು ಅಪವಿತ್ರತೆಯು, ಅಸ್ಪೃಶ್ಯತೆಯನ್ನು ನಿಷ್ಪನ್ನಗೊಳಿಸುವ ಮೂಲಕವೇ ಜಾತಿಶ್ರೇಣೀಕರಣದ ಎಲ್ಲ ಹಂತಗಳು ಸ್ತ್ರೀಯನ್ನು ಶೋಷಿಸುತ್ತದೆ. ಗಾಂಧೀಜಿಯವರು ಮಹಿಳೆ ಮತ್ತು ಜಾತಿ ಪ್ರಶ್ನೆಗಳನ್ನು ರಾಷ್ಟ್ರೀಯ ಚಳುವಳಿಯೊಂದಿಗೆ ತಳುಕುಹಾಕಿದರಲ್ಲದೆ ಮಾತ್ರವೆ ಮಹಿಳಾ ಪ್ರಶ್ನೆ ಪ್ರಸ್ತುತವಾಗಿಸಿದರು. ಆದರೆ ಅಂಬೇಡ್ಕರ್ ಅವರು ಮಹಿಳಾ ಸಮಸ್ಯೆಯನ್ನು ಜಾತಿ ಒಳಗೆ ಗ್ರಹಿಸಿದರು. ಅಲ್ಲದೆ ಅವು ಏಕರೂಪಿಯಾದವು ಜಾತಿ ನಿರ್ಮೂಲನೆಯಿಂದ ಮಹಿಳಾ ಸಮಸ್ಯೆಯನ್ನು ಬಗೆಹರಿಸಬಹುದು. ಈ ಮೂಲಕ ಅಂಬೇಡ್ಕರ್ ಬ್ರಾಹ್ಮಣ ಪಿತೃಪ್ರಧಾನತೆ ಒಳಗೆ ಇಟ್ಟು ಅಸ್ಪೃಶ್ಯತೆಯನ್ನು ಹಾಗೂ ಮಹಿಳಾ ಸಮಸ್ಯೆಗಳೆರಡನ್ನು ಬಿಡಿಸಲು ಪ್ರಯತ್ನಿಸಿದರು.

## ಉಲ್ಲೇಖಗಳು


೦೧. ಡಿ.ಆರ್.ನಾಗರಾಜ, ೨೦೦೨, ಶಕ್ತಿಶಾರದೆಯ ಮೇಳ; ಅಕ್ಷರ ಪ್ರಕಾಶನ, ಹೆಗ್ಗೋಡು, ಪು-೧೪

೦೨. ಎಂ.ಉಷಾ, ೨೦೦೫; ಮಹಿಳೆ ಮತ್ತು ಜಾತಿ; ಒಂದು ಸೈದ್ಧಾಂತಿಕ ಗ್ರಹಿಕೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೧೭

೦೩. Louis Dumont, 1972 Homo Hiearchicus; Granada Publishing Limeted

೦೪. ಜೆರ್ಲ್ಡಿನಾ ಫೋರ್ಬ್ಸ್; ೨೦೦೮; ಆಧುನಿಕ ಭಾರತದಲ್ಲಿ ಮಹಿಳೆ; ಡಾ.ಎಚ್.ಎಸ್.ಶ್ರೀಮತಿ; ಪು-೨೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೩೦

೦೫. ಅದೇ, ಪು-೩೦

೦೬. ಅದೇ, ಪು-೩೧

೦೭. ಅದೇ, ಪು-೨೦

೦೮. Pasth Chalterjee, the nationalist resoultion of the women's question (Ed) Kumkum Sangari, sudesh Vaid -Recasting women Kali for women New Delhi-1989

೦೯. ಎಂ.ಉಷಾ, ೨೦೦೫; ಮಹಿಳೆ ಮತ್ತು ಜಾತಿ; ಒಂದು ಸೈದ್ಧಾಂತಿಕ ಗ್ರಹಿಕೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೩೦

೧೦. ಹ. ಸೋಮಶೇಖರ್, ೨೦೦೭; ಮಹಿಳಾ ಚಳುವಳಿ ಸಾಮಾಜಿಕ & ಸಾಂಸ್ಕೃತಿಕ ಹಿನ್ನಲೆ, ವಿಸ್ಮಯ, ಪ್ರಕಾಶನ, ಬೆಂಗಳೂರು, ಪು-೧೨೪

೧೧. ಅದೇ, ಪು-೧೩೦

೧೨. ಅದೇ, ಪು-೧೩೫

೧೩. ಮುರುಳಿಧರ ಜಗತಾಪ; ೨೦೦೦; ಸಮಾಜ ಸುಧಾರಕ ಮಹಾತ್ಮ ಫುಲೆ; ಪು-೩೯

೧೪. ಅದೇ, ಪು-೬೬

೧೫. ಅದೇ, ಪು-೬೫

೧೬. ಅದೇ, ಪು-೮೦

೧೭. ಅದೇ, ಪು-೨೦

೧೮. ಸಂ.ವಿರೂಪಾಕ್ಷಿ ಪೂಜಾರಹಳ್ಳಿ;೨೦೦೭; ಪೆರಿಯಾರರ ವಿಚಾರಧಾರೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೩೮

೧೯. ಮದುಕೀಶ್ವರ; ೧೯೯೩; ಗಾಂಧೀಜಿ ಮತ್ತು ಮಹಿಳೆಯರು, ಜನಪದ ಸೇವಾ ಟ್ರಸ್ಟ್, ಮೇಲುಕೋಟೆ, ಪು-೬,೧೬

೨೦. ಅದೇ, ಪು-೯

೨೧. ಡಾ.ಬಾ.ಸಾ.ಅಂ.ಬ.ಭಾ: ೧೯೯೦: ಸಂ-೧: ಪು-೦೯,೧೦

೨೨. ಅದೇ, ಪು-೧೦

೨೩. ಅದೇ, ಪು-೧೧

೨೪. ಅದೇ, ಪು-೮,೯

೨೫. ಅದೇ, ಪು-೧೧,೧೪

೨೬. ಅದೇ, ಪು-೧೨

೨೭. ಅದೇ, ಪು-೧೩,೧೫

೨೮. ಅದೇ, ಪು-೧೬

೨೯. ಅದೇ, ಪು-೧೬,೨೧

೩೦. ಅರವಿಂದ ಮಾಲಗತಿ; ೧೯೯೯, ಡಾ.ಅಂಬೇಡ್ಕರ್ ವಿಚಾರಧಾರೆ; ಕನ್ನಡ ಸಂಸ್ಕೃತಿ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, ಪು-೧೪೬

೩೧. ಸಿಮೋನ್ ದ ಬೋವಾ; ೨೦೦೭; ದ ಸೆಕೆಂಡ್ ಸೆಕ್ಸ್; ಡಾ.ಎಚ್.ಎಸ್.ಶ್ರೀಮತಿ; ಅಧ್ಯಯನ ಮಂಡಲ, ಬೆಂಗಳೂರು, ಪು-೪೪

೩೨. ಅದೇ, ಪು-೫೫

ಅಧ್ಯಾಯ - ನಾಲ್ಕು

# ಮಹಿಳೆ, ಜಾತಿ ಶ್ರೇಣೀಕರಣ: ವೈದಿಕ ಧರ್ಮ

ಪ್ರಸ್ತುತ ಅಧ್ಯಾಯದಲ್ಲಿ ಮಹಿಳೆ, ಜಾತಿ ಶ್ರೇಣೀಕರಣ ಕುರಿತು ಧರ್ಮ ಸಂಬಂಧಿ ಅಂಬೇಡ್ಕರ್ ಅಲೋಚನೆಗಳನ್ನು ಕ್ರೋಢಿಕರಿಸುವ, ಸ್ತ್ರೀಯ ನೆಲೆಯಿಂದ ಚರ್ಚಿಸುವ ಉದ್ದೇಶವಿದೆ. ಅಂಬೇಡ್ಕರ್ ಭಾರತೀಯ ಸಮಾಜವನ್ನು ಅಸಮಾನತೆ ಮತ್ತು ತಾರತಮ್ಯ ರಹಿತ ಸಮಾಜವೆಂದು ವರ್ಗೀಕರಿಸಿಕೊಳ್ಳುತ್ತಾರೆ. (ಡಾ.ಬಾ.ಸಾ.ಅಂ.ಬ.ಭಾ: ೧೯೯೯, ಪು-೫೩) ತಾರತಮ್ಯ ರಹಿತ ಸಮಾಜವನ್ನು ಆದಿವಾಸಿಯರ ನೀತಿ ನಿಯಮಗಳು, ವೇದ ಕಾಲೀನ ಮನೋಭಾವವನ್ನು ಆಧರಿಸಿ ಚರ್ಚಿಸಿದರೆ, ಅಸಮಾನತೆಯ ಸಮಾಜವನ್ನು ಬರ್ಬರ ನಾಗರಿಕ ಸಮಾಜವೆಂದು ಖಂಡಿಸುತ್ತಾರೆ. ಅಲ್ಲದೇ ವೈದಿಕ ಚಿಂತನೆಗಳಿಂದ ಸಮಾಜವು ಬರ್ಬರ ಸ್ಥಿತಿಗೆ ತಲುಪಿಸಿದೆ ಎಂದು ಚರ್ಚಿಸುವುದು ಅವರ ಅಧ್ಯಯನಗಳಲ್ಲಿ ಕಂಡುಬರುತ್ತದೆ.

ಧರ್ಮವು ಮಾನವ ಸಮಾಜದ ಬಹಳ ಮುಖ್ಯವಾದ ಲಕ್ಷಣವಾಗಿದೆ ಎಂಬುದನ್ನು ಗುರುತಿಸುವ ಅಂಬೇಡ್ಕರ್ "ಸಮಾಜಶಾಸ್ತ್ರ ಅಧ್ಯಯನಗಳು ಪ್ರಸ್ತುತ ಸಮಾಜವನ್ನು ಆಧುನಿಕ ಮತ್ತು ಆಧುನಿಕ ಪೂರ್ವವೆಂದು ವಿಂಗಡಿಸಿ, ಆಧುನಿಕ ಪೂರ್ವಸಮಾಜ ಧರ್ಮಕೇಂದ್ರಿತವಾಗಿತ್ತು ಎಂಬುದನ್ನು ದಾಖಲಿಸಿಕೊಳ್ಳುತ್ತಾರೆ." (ಜಾರ್ಜ್ ಸ್ಪಿಟ್‌ಲೀಜ್; ೨೦೦೬, World is Plat, Oxpord Press, p-40) ಆದರೆ ಕೈಗಾರಿಕಾ ಕ್ರಾಂತಿಯ ಅವಿಷ್ಕಾರದೊಂದಿಗೆ ಗುರುತುಗೊಳ್ಳುವ ಆಧುನಿಕ ಸಮಾಜ ಹಲವು ವಿಚಾರಗಳಲ್ಲಿ; ಮಾನವ ಸಮಾಜದ ಸಂದರ್ಭದಲ್ಲಿ ಆದ ಪಲ್ಲಟ, ಪರಿವರ್ತನೆಗಳನ್ನು ಪರಿಶೀಲಿಸುತ್ತಾ ಲಿಂಗ ಮತ್ತು ಜಾತಿ ಸಂದರ್ಭದಲ್ಲಿ ಆಧುನಿಕ

ಪರಿವರ್ತನೆಗಳು ನಿರ್ಲಿಪ್ತವಾಗಿವೆಂದು ಭಾವಿಸುತ್ತಾರೆ. ಜೊತೆಗೆ ಮಾನವ ಸಮಾಜದ ಸಾಮಾಜಿಕ ನಂಬಿಕೆಗಳು, ಆಚರಣೆಗಳು, ಮೌಲ್ಯಗಳು, ಜೀವನಕ್ರಮ, ಹುಟ್ಟು ಇತ್ಯಾದಿಗಳೆಲ್ಲವು ಧರ್ಮದ ಪರಿಪೇಕ್ಷ್ಯದಲ್ಲಿ ಸುತ್ತುವುದಾಗಿದೆ. ಧಾರ್ಮಿಕ ಸಂಸ್ಥೆಯು ಇಡೀ ಸಮಾಜದ ಕೇಂದ್ರದಲ್ಲಿದ್ದು ಅದನ್ನು ನಡೆಸುತ್ತಿರುತ್ತದೆ. ಧಾರ್ಮಿಕೇತರವಾದ ಯಾವುದೇ ಸಂಸ್ಥೆ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳುವುದಕ್ಕಾಗಲೀ ವಿಸ್ತರಣೆಗೊಳ್ಳುವುದಕ್ಕಾಗಲೀ ಅಧಿಕಾರ ಸ್ಥಾನವನ್ನು ಹೊಂದುವುದಕ್ಕಾಗಲೀ ಈ ಎಲ್ಲದಕ್ಕೂ ಧರ್ಮದ ಅನುಮೋದನೆ ಅತ್ಯಗತ್ಯವಾಗಿರುತ್ತದೆ.

"ವೈದಿಕ ಧರ್ಮಕೇಂದ್ರೀಕೃತವಾದ ಸಂಪ್ರದಾಯಕತೆ ವ್ಯಕ್ತಿಸ್ವಾತಂತ್ರ್ಯ, ವಿಚಾರವಂತಿಕೆ, ಸ್ವಾನುಭವ ಇತ್ಯಾದಿ ಪರಿಕಲ್ಪನೆಗಳನ್ನು ಉದ್ಧಟತನವಾಗಿ ಭಾವಿಸುತ್ತದೆ. ವ್ಯಕ್ತಿಗತ ಅಭಿಪ್ರಾಯಗಳು, ವರ್ತನೆಗಳು ಸಮಾಜದಲ್ಲಿ ಅರಾಜಕತೆಯನ್ನು ಉಂಟುಮಾಡುತ್ತದೆ. ಸಾಮಾಜಿಕ ಬಂಧವನ್ನು, ಮೌಲ್ಯವನ್ನು ಶಿಥಿಲಗೊಳಿಸುತ್ತವೆ ಎಂಬ ಹಿನ್ನಲೆಯಲ್ಲಿ ಅವುಗಳನ್ನು ನಿರ್ಬಂಧಿಸುತ್ತದೆ. ನಿರ್ಬಂಧಗಳನ್ನು ಕಡ್ಡಾಯವಾಗಿ ನಿರಂತರವಾಗಿಸುವ ಸಲುವಾಗಿ ದೈವದ ಕುರಿತ ಭೀತಿ, ಧರ್ಮದ ಕಟ್ಟುಪಾಡುಗಳನ್ನು ಬಿಗಿಗೊಳಿಸುತ್ತಾ ಅದರ ಸುತ್ತ ಮೂಢನಂಬಿಕೆ, ಪವಾಡ ಇತ್ಯಾದಿಗಳನ್ನು ನಿರ್ಮಿಸುತ್ತದೆ. ಇದರ ಪರಿಣಾಮವಾಗಿ ಸಮಾಜವೆಂಬುದು ಜಡತೆಯನ್ನು ಸ್ಥಗಿತತೆಯನ್ನು ಮೈಗೂಡಿಸಿಕೊಂಡಿದೆ. ಅದುವೇ ಸಮಾಜ ಪ್ರಧಾನ ಲಕ್ಷಣವಾಗಿದೆ. ಬದಲಾವಣೆಗಳನ್ನು ಇಲ್ಲವೇನೂ ಎಂಬುವಷ್ಟು ನಿಧನಾಗತಿ ಆವರಿಸುತ್ತದೆ. ಇದು ಸಾಮಾಜಿಕ ಸ್ತರಗಳ ನಡುವಿನ ಕೊಡುಕೊಳ್ಳುವಿಕೆ, ಸಾಮಾಜಿಕ ಸಂಸ್ಥೆಗಳ ನಡುವಿನ ಸಂವಾದ ಎಲ್ಲವೂ ನಿರ್ಬಂಧಿತವಾದುದಾಗಿರುತ್ತದೆ. ಸಮಾಜದ ಎಲ್ಲಾ ಹಂತದ ಚಟುವಟಿಕೆಗಳು ಧರ್ಮದ ಪರವಾನಿಗೆ ಹಿಡಿದೇ ವ್ಯವಹರಿಸಬೇಕಾಗಿರುತ್ತದೆ. ಯಾರೊಂದಿಗೆ ಊಟೋಪಚಾರ, ಯಾರೊಡನೆ ಒಡನಾಟ, ಯಾರೊಂದಿಗೆ ವಿನೋದ, ಯಾರೊಂದಿಗೆ ಲೈಂಗಿಕ ಸಂಪರ್ಕ ಇತ್ಯಾದಿಗಳೆಲ್ಲವು ಧಾರ್ಮಿಕ ವಿಧೇಯಕಗಳಿಗೆ ಬದ್ಧವಾಗಿರುತ್ತದೆ." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೯)

ಸಮಾಜದಲ್ಲಿ ಧರ್ಮ ಮತ್ತು ನೀತಿಶಾಸ್ತ್ರದ ಕಾರ್ಯಕ್ಷೇತ್ರ ವಿಸ್ತೃತವಾದುದಾಗಿರುವುದರಿಂದಲೇ "ಮೂಲಭೂತವಾಗಿ ಧರ್ಮವು ಇಹದ ಬದುಕಿನಾಚೆಗಿನ ಕುರಿತದ್ದಾದರೂ, ಲೌಖಿಕ ನಿವೃತ್ತಿಯನ್ನು ಸ್ವಯಂ ಘೋಷಿಸಿಕೊಂಡಿರೂ, ಶುದ್ಧ ಸಾಮಾಜಿಕ ಸಂಸ್ಥೆಯಾಗಿಯೇ ವರ್ತಿಸುತ್ತದೆ. ಲೌಕಿಕ ಕುರಿತ ತನ್ನ ಅನಾಸಕ್ತಿಯನ್ನು ಪದೇ ಪದೇ ಉಚ್ಚರಿಸುತ್ತಲೇ ಲೌಕಿಕದ ಪ್ರತಿಯೊಂದು ನಡೆಯನ್ನು ನಿಯಂತ್ರಿಸಲು ಹೊರಡುತ್ತದೆ. ಪ್ರತಿಯೊಬ್ಬ ಮನುಷ್ಯನ ಹುಟ್ಟಿನಿಂದ ಹಿಡಿದು ಸಾಯುವವರೆಗಿನ ಎಲ್ಲ ಘಟ್ಟಗಳು ತನ್ನ ಸಮ್ಮುಖದಲ್ಲೇ ಹಾದು ಹೋಗುವಂತೆಯೂ, ಎಲ್ಲಾ ಸಾಮಾಜಿಕ ಸಂಸ್ಥೆಗಳು ತನಗೆ ನಿಷ್ಠವಾಗಿದ್ದುಕೊಂಡೇ ತಮ್ಮ ಕೆಲಸಗಳಲ್ಲಿ

ನಿರತವಾಗುವಂತೆ ಏರ್ಪಡಿಸಿಕೊಳ್ಳುತ್ತದೆ. ಅದಕ್ಕೆ ಪೂರಕವಾಗುವಂತೆ ಶಿಕ್ಷಣ, ನೀತಿ ಸಂಹಿತೆ, ಮೌಲ್ಯ ವ್ಯವಸ್ಥೆಗಳನ್ನು ರೂಪಿಸುವುದಲ್ಲದೆ ದೈವದ ಕುರಿತ ಭಯಬೀತಿಯನ್ನು ವಿಶೇಷವಾಗಿ ಬೆಳೆಸುತ್ತದೆ." (ಡಾ.ಬಾ.ಸಾ.ಅಂ.ಬ.ಭಾ: ೧೯೯೯, ಸಂ-೩: ಪು-೩೩) ಆದುದರಿಂದಲೇ ಪ್ರಾಚೀನ ಸಮಾಜದಲ್ಲಿ ಶಿಕ್ಷಣವೆಂದರೆ ಧಾರ್ಮಿಕ ಶಿಕ್ಷಣವೆಂದು, ವಿವಾಹದಂತಹ ಸಾಮಾಜಿಕ ಒಪ್ಪಂದವು ದೈವಸಂಕಲ್ಪಿತ ಪವಿತ್ರ ಬಂಧವೆಂದು ಪರಿಭಾವಿಸಲ್ಪಡುತ್ತದೆ. ಧರ್ಮಕ್ಕೆ ಪ್ರಶ್ನಾತೀತವಾಗಿ ತಲೆಬಾಗುವ ಪ್ರತಿಯೊಂದು ಅಂಶವು ಮೌಲ್ಯವಾಗಿಯೂ, ಧರ್ಮದ ಅಧಿಕಾರವನ್ನು ಪ್ರಶ್ನಿಸುವ ಎಲ್ಲಾ ಪ್ರಯತ್ನಗಳು ಸಮಾಜ ಘಾತಕ ನಡುವಳಿಕೆಗಳಾಗಿ ದಂಡನೆಗೆ ಒಳಗಾಗುತ್ತವೆ ಎಂದು ಅಂಬೇಡ್ಕರ್ ವಿವರಿಸುತ್ತಾರೆ.

ಈ ಹಿನ್ನಲೆಯಲ್ಲಿ ಆಧುನಿಕ ಕಾಲದಲ್ಲಿ ಮಾತ್ರ ಕಾನೂನನ್ನು ಧರ್ಮದಿಂದ ಪ್ರತ್ಯೇಕಿಸಲಾಗಿದೆ. ಎಲ್ಲಾ ಪ್ರಾಚೀನ ಸಮಾಜದಲ್ಲಿಯೂ ಧರ್ಮ ಮತ್ತು ಕಾನೂನು ಒಂದೇ ಆಗಿದ್ದವು ಎಂಬುದಕ್ಕೆ ಪ್ರೊ॥ ಮ್ಯಾಕ್ಸ್ ಮುಲ್ಲರ್ ಅಧ್ಯಯನಗಳನ್ನು ಸಾಕ್ಷಿಕರಿಸುತ್ತಾರೆ. ಆದ್ದರಿಂದಲೇ ಜೀವನ ಪ್ರತಿಯೊಂದು ಸಂಬಂಧ ಮತ್ತು ಪ್ರತಿಯೊಂದು ಸಂಸ್ಥೆಯ ಹಿಂದೆ ಅಂತರ್ಗತವಾಗಿ ಬೆಂಬಲ ನೀಡುವ ದೈವ ಪ್ರಭಾವವೇ ಧರ್ಮವಾಗಿದೆ ಎಂದು ಭಾವಿಸುತ್ತಾರೆ. ಆಧುನಿಕ ಕಾಲದಲ್ಲಿ ಮಾತ್ರ ಧರ್ಮ ಮತ್ತು ನೀತಿಶಾಸ್ತ್ರದ ನಡುವೆ ವ್ಯತ್ಯಾಸವನ್ನು ಮತ್ತೆ ಮಾಡಲಾಗಿದೆ. ಆದರೆ ಧರ್ಮ ಮತ್ತು ನೀತಿಶಾಸ್ತ್ರ ಬಿಡಿಸಲಾಗದಂತೆ ಒಂದಕ್ಕೊಂದು ಬಂಧಿಸಲ್ಪಟ್ಟಿವೆ. ಧರ್ಮ ಮತ್ತು ನೀತಿಶಾಸ್ತ್ರ ಸಾರಭೂತವಾಗಿ ಪ್ರಾಯೋಗಿಕವಾದವು ಎನ್ನುವ ಅಂಬೇಡ್ಕರ್ ಧರ್ಮ ಒಂದು ಪ್ರೇರಣಾಶಕ್ತಿಯಾಗಿದೆ. ಅದು ನೈತಿಕ ಸಂಕಲ್ಪವನ್ನು ನಾನಾ ರೀತಿಯಲ್ಲಿ ಬಲಪಡಿಸುತ್ತದೆ. ಅಂದರೆ ಸಾವಿನ ನಂತರ ಪುಣ್ಯದ ಫಲವನ್ನು ಪಾಪದ ಶಿಕ್ಷೆಯನ್ನು ವಿಧಿಸುವ ಒಂದು ಯೋಜನೆಯಾಗಿ ಧರ್ಮ ಅನೇಕ ವೇಳೆ ತನ್ನ ರೂಪಪಡೆಯುತ್ತದೆ. ಅದು ಕೆಲವೇಳೆ ದೈವದ ಕಟ್ಟಾಜ್ಞೆಗಳೆಂಬ ನೀತಿ ನಿಯಮಗಳನ್ನು ಮಾಡುತ್ತದೆ. ಆದುದರಿಂದ ಮಾನವ ಸಮಾಜವನ್ನು ಧರ್ಮಕೇಂದ್ರಿತ ಎನ್ನುವ ಅವರು ಭಾರತವು ಹಿಂದೂ ಧರ್ಮ ಆಧಾರಿತ ಸಮಾಜ ಎಂಬುದನ್ನು ನಿರಕರಿಸುತ್ತಾರೆ. ಹಿಂದೂ ಎಂಬುದು ಒಂದು ಅಲ್ಲ ಅದು ಹಲವು ಜಗತ್ತುಗಳಿಂದ ಕೂಡಿದೆ ಎಂದು ಹೇಳುತ್ತಾ ಹಿಂದೂ ಎಂಬ ಪರಿಕಲ್ಪನೆಯನ್ನು ಪ್ರಶ್ನಿಸುತ್ತಾರೆ."(ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩ ಪು-೬೦೦) ಈ ಪ್ರಶ್ನೆಗಳು ಬಹುರೂಪಿ ತಿಳುವಳಿಕೆಯನ್ನು ಮೂಡಿಸುತ್ತವೆ. ಅಂದರೆ ಅವು ಈ ಬಹುರೂಪಿ ಚಿಂತನಾಕ್ರಮವನ್ನು ಪ್ರಸ್ತುತ ಪಡಿಸುತ್ತವೆ.

ಭಾರತೀಯ ಸಮಾಜದಲ್ಲಿ ಧರ್ಮಸಂಬಂಧಿಸಿದ ಪ್ರೇರಣಾಶಕ್ತಿಯನ್ನು ಅವೈದಿಕ ಮತ್ತು ವೈದಿಕ ಎಂದು ವಿಂಗಡಿಸಿಕೊಳ್ಳುವ ಅಂಬೇಡ್ಕರ್ "ಪ್ರಸ್ತುತ ಭಾರತೀಯ ಸಮಾಜದ ಲಿಂಗ,

ಜಾತಿ ಅಸಮಾನತೆಗೆ ವೈದಿಕ ಧರ್ಮವೇ ಮೂಲವಾಗಿದೆ. ಇಂತಹ ಅಸಮಾನತೆಯನ್ನು ಸಮರ್ಥಿಸುವ ವೈದಿಕ ಧರ್ಮದ ತಾತ್ವಿಕತೆಯನ್ನು 'ನ್ಯಾಯ ಮತ್ತು ಉಪಯುಕ್ತತೆ' ಎಂಬ ಪರೀಕ್ಷೆಯ ಮೂಲಕ ಚರ್ಚಿಸುತ್ತಾರೆ." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೯೨೧) ಅವರ ಪ್ರಕಾರ "ನ್ಯಾಯ ಎಂಬುಗು ನೈತಿಕ ವ್ಯವಸ್ಥೆಯೊಂದರ ಅಡಿಪಾಯದಂತಿರುವ ಎಲ್ಲಾ ನಿಯಮಗಳ ಸಾರಸಂಗ್ರಹದಂತಿದೆ. ಸಮಾನತೆ ಮತ್ತು ಸುಸಂಗತ ಪರಿಹಾರದ ತತ್ವವನ್ನು ನ್ಯಾಯಪರತೆ ಎತ್ತಿಹಿಡಿಯುತ್ತದೆ. ಕಾನೂನು ಮತ್ತು ನಿಯಮಗಳು ಸರಿಯಾದುದು ಮತ್ತು ಋಜುಮಾರ್ಗಗಳು ಸಮಾನತೆಯ ಮೌಲ್ಯಕ್ಕೆ ಸಂಬಂಧಪಡುತ್ತವೆ. ಎಲ್ಲಾ ಮನುಷ್ಯರೂ ಸಮಾನವೆನ್ನುವುದಾದರೆ ಎಲ್ಲರೂ ಒಂದೇ ಮೂಲಕ್ಕೆ ಸೇರಿರುತ್ತಾರೆ. ಮತ್ತು ಸಾರ ಸಂಗ್ರಹದಲ್ಲಿ ಒಂದೇ ಆಗಿದ್ದಾರೆ. ಆದುದರಿಂದ ಮೂಲಭೂತಹಕ್ಕುಗಳು ಸಮಾನ ಸ್ವಾತಂತ್ರಗಳಿಗೆ ಎಲ್ಲರೂ ಬದ್ಧರಾಗಿದ್ದಾರೆ ಸಂಗ್ರಹವಾಗಿ ಹೇಳುವುದಾದರೆ ಸ್ವತಂತ್ರ, ಸಮಾನತೆ ನ್ಯಾಯವೆಂಬುದು ಮತ್ತೊಂದು ಹೆಸರಾಗಿದೆ." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೩೫,೩೬) ಎಂದು ಅಂಬೇಡ್ಕರ್ ನ್ಯಾಯದ ಪರೀಕ್ಷೆಯನ್ನು ಅರ್ಥೈಸುವುದು ಕಂಡುಬರುತ್ತದೆ.

ಸಾಮಾಜಿಕ ಅಸಮಾನತೆಗೂ ವೈದಿಕ ತಾತ್ವಿಕತೆಗಳೆರಡರ ನಡುವೆ ಸಹಸಂಬಂಧವಿದೆ ಎಂದು ಭಾವಿಸುವ ಅಂಬೇಡ್ಕರ್ ಈ ಕುರಿತ ವಿವರಣೆ ಮಹತ್ವವಾದುದು " ಮಹಿಳೆ ಮತ್ತು ದಲಿತರನ್ನು ಶುದ್ಧರಾಗುವುದನ್ನು ತಡೆಯುತ್ತದೆ. ದೇವರ ಸಮೀಪ ಹೋಗಬಯಸುವ ಇವರನ್ನು ನಿಷೇಧಿಸುವುದು ಇಷ್ಟೇ ಅಲ್ಲ ಮನುಷ್ಯತ್ವವನ್ನೇ ಮಹಿಳೆ-ಮಹಿಳೆಯ ನಡುವೆ, ಪುರುಷ-ಪುರುಷರ ನಡುವೆ, ಮಹಿಳೆ-ಪುರುಷನ ನಡುವೆ ಇರುವುದನ್ನು ನಿರಾಕರಿಸುತ್ತದೆ. ಮನುಷ್ಯರ ವ್ಯಕ್ತಿತ್ವವನ್ನು ಉದ್ದೇಶಪೂರ್ವಕವಾಗಿ ಹೀನಾಯಗೊಳಿಸುವುದನ್ನು ಅದು ಸಮರ್ಥಿಸುತ್ತದೆ. ಜಾತಿ ಪದ್ಧತಿ ಅಧ್ಯಯನಗಳೇ ಉಲ್ಲೇಖಿಸುವಂತೆ ಜಾತಿಪದ್ಧತಿಯಲ್ಲಿ ನಾಲ್ಕು ಮೂಲ ವರ್ಗಗಳನ್ನು ಪಕ್ಕಕ್ಕಿಟ್ಟರೆ ಉಳಿದವರೆಲ್ಲ ನೀಚ ಮೂಲದವರು. ಅವರೆಲ್ಲ ನಾಲ್ಕು ಮೂಲ ವರ್ಣಗಳ ಹೆಣ್ಣುಗಂಡಿನ ನಡುವೆ ಆದ ವ್ಯಭಿಚಾರದಿಂದ ಹುಟ್ಟಿದವರು. ಅಂದರೆ ನಾಲ್ಕು ಮೂಲ ವರ್ಣಗಳ ಜನರ ಸಡಿಲತೆ ಮತ್ತು ಅನೈತಿಕ ಜೀವನ ಮಿತಿಮೀರಿರಬೇಕು ಏಕೆಂದರೆ ಅಸಂಖ್ಯಾತ ಜಾತಿಗಳ ಅಗಣಿತ ಹುಟ್ಟುಗಳಿಗೆ ವಿವರಣೆ ಹೇಗೆ ಸಾಧ್ಯ?... ಮನು ಈ ಕ್ರೂರ ಆಪಾದನೆ ಮಾಡುವಾಗ ಒಂದು ಕ್ಷಣ ನಿಂತು ಯೋಚಿಸಲಿಲ್ಲ ಎಂದು ಭಾವಿಸುವ ಅಂಬೇಡ್ಕರ್ ನಾಲ್ಕು ಮೂಲ ವರ್ಣಗಳ ಹೆಣ್ಣುಗಂಡುಗಳ ಬಗೆಗೆ ಪಡುವ ಸಂಶಯವು ಉದ್ದೇಶ ಪೂರ್ವಕವಾದುದು ಚಂಡಾಲರು-ಅಸ್ಪೃಶ್ಯರ ಮೊದಲ ಹೆಸರು-ಬ್ರಾಹ್ಮಣ ಹೆಣ್ಣು ಮತ್ತು ಶೂದ್ರ ಗಂಡಸಿನ ಸಂತತಿ ಎನ್ನುವುದಾದರೆ ಇಷ್ಟೊಂದು ಬಹುಸಂಖ್ಯಾತ ಚಂಡಾಲರ ಹುಟ್ಟನ್ನು ವಿವರಿಸಲು ಒಂದು ದಾರಿ ಉಳಿದಿದೆ; ಪ್ರತಿಯೊಬ್ಬ ಬ್ರಾಹ್ಮಣ ಹೆಂಗಸು ಹಾದರಗಿತ್ತಿ

ಅಥವ ಸೂಳೆ ಆಗಿರಬೇಕು; ಪ್ರತಿಯೊಬ್ಬ ಶೂದ್ರ ಗಂಡಸು ಸಂಪೂರ್ಣವಾಗಿ ವ್ಯಭಿಚಾರದ ಜೀವನ ನಡೆಸಿರಬೇಕು ಎನ್ನುತ್ತಾರೆ. (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೫೪) ಇದು ಪಿತೃಪ್ರಧಾನತೆ ಹೆಣ್ಣನ್ನು ದೇಹಕೇಂದ್ರಿತವಾಗಿ ನೋಡುವುದನ್ನು ಪ್ರತಿನಿಧಿಸುತ್ತದೆ. ಇದು ಜಾತಿ ಪದ್ಧತಿಯಲ್ಲಿ ಲಿಂಗಾಧಾರಿತ ಶ್ರೇಣೀಕರಣ ಉಂಟುಮಾಡುತ್ತದೆ ಎಂದು ಇದನ್ನು ವಿವರಿಸಲು ಅಂಬೇಡ್ಕರ್ ತಾರತಮ್ಯದಿಂದ ಕೂಡಿದ ಅಸಮಾನತೆ ಸಮಾಜವೆಂಬ ಪರಿಕಲ್ಪನೆಯನ್ನು ಪರಿಚಯ ಪಡಿಸುತ್ತಾರೆ. ಈ ಕುರಿತ ಅವರ ವಿಶ್ಲೇಷಣೆ ಗಮನಾರ್ಹವಾದುದು "ಹಿಂದೂ ಸಮಾಜವು ನಿಂತಿರುವುದು ತಾರತಮ್ಯವಿರುವ ಅಸಮಾನತೆಯ ತಳಹದಿಯ ಮೇಲೆ ಅಸಮಾನತೆ ಮೇಲೆ ನಿಂತಿರುವ ಸಮಾಜ ವ್ಯವಸ್ಥೆಗೂ ಅದರ ತಳಪಾಯದಲ್ಲೇ ವ್ಯತ್ಯಾಸಗಳಿವೆ. ಮೊದಲನೆಯದು ದುರ್ಬಲ, ಹಾಗಾಗಿ ಅದು ತನ್ನಿಂದ ತಾನೇ ಮುಂದುವರೆದುಕೊಂಡು ಹೋಗಲಾರದು. ಆದರೆ ಎರಡನೇಯದು ತನ್ನನ್ನು ತಾನೇ ರಕ್ಷಿಸಿ ಮುಂದುವರಿಸಿಕೊಳ್ಳಬಹುದು. ಅಸಮಾನತೆಯನ್ನು ಆಧರಿಸಿದ ವ್ಯವಸ್ಥೆಯಲ್ಲಿ ಕೆಳವರ್ಗಗಳು ಒಟ್ಟಾಗಿ ವ್ಯವಸ್ಥೆಯನ್ನು ಕಿತ್ತೊಗೆಯಲು ಸಾಧ್ಯ ಏಕೆಂದರೆ ಕೆಳವರ್ಗದ ಯಾರಿಗೂ ಅದನ್ನು ಹಾಗೇ ಮುಂದುವರೆಸುವ ಆಸಕ್ತಿ ಇರುವುದಿಲ್ಲ. ಆದರೆ ತಾರತಮ್ಯವುಳ್ಳ ಅಸಮಾನತೆಯ ಮೇಲೆ ನಿಂತಿರುವ ಸಮಾಜ ವ್ಯವಸ್ಥೆಯಲ್ಲಿ ಶೋಷಿತ ಜನರೆಲ್ಲ ಒಟ್ಟಾಗಿ ಉಳಿದವರನ್ನು ಎದುರಿಸುವ ಸಾಧ್ಯತೆ ಇಲ್ಲವೇ ಇಲ್ಲ. ತಾರತಮ್ಯವುಳ್ಳ ಅಸಮಾನತೆಯಲ್ಲಿ ಉಚ್ಚರು ಅಥವಾ ನೀಚರು ಆಗಿದ್ದಾಗ ಮಾತ್ರ ಅವರಿಗೆ ಸಾಧಾರಣವಾದ ಕ್ರಿಯೆ ಹುಟ್ಟುವುದು ಸಾಧ್ಯ. ತಾರತಮ್ಯವುಳ್ಳ ಅಸಮಾನತೆ ವ್ಯವಸ್ಥೆಯಲ್ಲಿ ಉಚ್ಚಉತ್ತಮರು (ಬ್ರಾಹ್ಮಣ) ಇದ್ದಾರೆ. ಅವರ ಕೈಗೆ ಉಚ್ಚ ಮಧ್ಯಮರು (ಕ್ಷತ್ರಿಯ) ಹಾಗೂ ಅವರ ಕೆಳಗೆ ನೀಚರಿದ್ದಾರೆ. ಇವರೆಲ್ಲರಿಗೂ ಉಚ್ಚ ಉತ್ತಮರ ಬಗ್ಗೆ ಅಸಮಾಧಾನವಿದೆ. ಮತ್ತು ಅವರನ್ನು ಉರುಳಿಸುವ ಹಂಬಲವಿದೆ. ಆದರೆ ಅವರೆಲ್ಲ ಒಟ್ಟಾಗುವುದಿಲ್ಲ. ಉಚ್ಚ ಮಧ್ಯಮರು, ಉಚ್ಚ ಉತ್ತಮರನ್ನು ನಿವಾರಿಸಬಯಸುತ್ತಾರೆ. ಆದರೆ ಅವರು ಉಚ್ಚ, ನೀಚ, ನೀಚ ಕನಿಷ್ಠರೊಂದಿಗೆ ಸೇರ ಬಯಸುವುದಿಲ್ಲ. ಹಾಗೆ ಸೇರಿದರೆ ಅವರು ತಮ್ಮೊಂದಿಗೆ ಕೂಡಿ ಸಮಾನರಾಗುತ್ತಾರೆಂಬ ಭಯವಿದೆ. ಉಚ್ಚರಿಗೆ ಉಚ್ಚ ಮಧ್ಯಮರನ್ನು ಕೆಡವಬೇಕೆಂದಿದೆ. ಆದರೆ ಅವರು ನೀಚ, ನೀಚ ಕನಿಷ್ಠರೊಂದಿಗೆ ಕೈಗೂಡಿಸುವುದಿಲ್ಲ. ಕಾರಣ ಅವರು ಮೇಲೆ ಬಂದು ತಮ್ಮ ಸ್ಥಾನಮಾನಗಳಿಸಿ ಬಿಡುತ್ತಾರೆಂಬ ಭಯ. ನೀಚನಿಗೆ ಉಚ್ಚ, ಉಚ್ಚಮಧ್ಯಮ, ಉಚ್ಚಉತ್ತಮರನ್ನು ಕೆಳಗಿಳಿಯವ ಹಂಬಲವಿದೆ. ಆದರೆ ನೀಚ ಕನಿಷ್ಟನೊಂದಿಗೆ ಸೇರಿದರೆ ನೀಚ ಕನಿಷ್ಠನ ಸ್ಥಾನಮಾನ ಹೆಚ್ಚಾಗಿ ಆತ ತನಗೆ ಸಮಾನಾಗುತ್ತಾನೆಂಬ ಭಯದಿಂದ ಅವನೊಡನೆ ಸೇರಲು ಸಿದ್ದನಿಲ್ಲ. ತಾರತಮ್ಯವುಳ್ಳ ಅಸಮಾನತೆ ಸಮಾಜ ವ್ಯವಸ್ಥೆಯಲ್ಲಿ ಈ ವ್ಯವಸ್ಥೆಯ ಗೋಪುರದ ಅತ್ಯಂತ ಕೆಳಗಿರುವ

ಒಂದು ವರ್ಗ ಎನ್ನುವಂತಿಲ್ಲ. ವಿಶೇಷ ಗೌರವ ಸ್ಥಾನಮಾನಗಳಲ್ಲಿ ತಾರತಮ್ಯವಿದೆ ಅಷ್ಟೇ ಅಲ್ಲ ನೀಚವರ್ಗವು ನೀಚ ಕನಿಷ್ಟರಿಗೆ ಹೋಲಿಸಿದರೆ ಸ್ಥಾನಮಾನವುಳ್ಳ ವರ್ಗವೇ. ಹೀಗೆ ಪ್ರತಿವರ್ಗಕ್ಕೂ ಅದರ ಸ್ಥಾನಮಾನ ಇರುವುದರಿಂದ ಪ್ರತಿವರ್ಗವು ಈ ಸಮಾಜ ವ್ಯವಸ್ಥೆಯನ್ನು ಹೀಗೆ ಮುಂದುವರೆಸಲು ಬಯಸುತ್ತದೆ.

ಲಿಂಗತಾರತಮ್ಯ ಮತ್ತು ಅಸ್ಪೃಶ್ಯತೆಯೆನ್ನುವುದು ಮಹಿಳೆಯರಿಗೆ ಅಸ್ಪಶ್ಯರಿಗೆ ಒಂದು ದುರದೃಷ್ಟವಾಗಿರಬಹುದು. ಆದರೆ ಹಿಂದೂಗಳಿಗೆ, ಪುರುಷರಿಗೆ ಅದು ಖಂಡಿತವಾಗಿಯೂ ಒಂದು ಅದೃಷ್ಟವೇ. ಅಂದರೆ ಎಲ್ಲರಿಗೂ ಸಮಾನ ಅಸ್ತಿತ್ವವಿರುವುದನ್ನು ಬಯಸುವುದಿಲ್ಲ. ಅವರು ಕೇವಲ ಅಸ್ತಿತ್ವವಿರುವವರು ಮತ್ತು ಉಳಿದವರು ಅಸ್ತಿತ್ವ ಹೀನರು ಆಗಿರುವಂಥ ಶ್ರೇಣೀಕೃತ ಸಮಾಜ ಬಯಸುತ್ತಾರೆ. ಅಸ್ಪೃಶ್ಯರು, ಮಹಿಳೆಯರು, ಅಸ್ತಿತ್ವ ಹೀನರು ಇದರಿಂದಾಗಿ ಹಿಂದೂಗಳಿಗೆ ಪುರುಷರಿಗೆ ಒಂದು ಅಸ್ತಿತ್ವ ದೊರಕುತ್ತದೆ. ಅಸ್ಪೃಷ್ಯತೆಯ ವ್ಯವಸ್ಥೆ ಹಿಂದೂಗಳ ಸಹಜ ಹೆಗ್ಗಳಿಕೆಯನ್ನು ಉಳಿಸಿ ಬೆಳೆಸುತ್ತದೆ. ತಾವು ದೊಡ್ಡವರೆಂಬ ಧರ್ಮವನ್ನು ಅವರಿಗೆ ತಂದುಕೊಡುತ್ತದೆ. ಹಿಂದೂಗಳು ಅದರಲ್ಲೂ ಮುಖ್ಯವಾಗಿ ಬಹುಸಂಖ್ಯಾತ ಕ್ಷುದ್ರ ಹಿಂದೂಗಳು ಅಸ್ಪಶ್ಯತೆಯನ್ನು ಬಿಡಲು ಸಿದ್ಧರಿಲ್ಲದಿರುವುದಕ್ಕೆ ಇದು ಒಂದು ಮುಖ್ಯ ಕಾರಣ.

ಲಿಂಗಾಧಾರಿತ ಶ್ರೇಣೀಕರಣ ಮಾಯವಾಗುವುದು ಒಟ್ಟಾರೆ ಹಿಂದೂ ಸಮಾಜದಲ್ಲಿ ಮುಖ್ಯವಾಗಿ ಜಾತಿಪದ್ಧತಿ ಪೂರ್ಣ ನಿರ್ನಾಮವಾದಾಗ ಮಾತ್ರ ಇದು ಆಗಲು ಸಾಧ್ಯವೇ? ಯಾವುದೇ ಸಂಘಟನೆ ಉಳಿದುಕೊಳ್ಳುವುದು ಒಂದಲ್ಲ ಒಂದು ರೀತಿಯ ಅನುಮೋದನೆಯಿಂದ. ಒಂದು ಸಂಘಟನೆಗೆ ಮೂರು ಮೂಲಗಳಿಂದ ಅನುಮೋದನೆ ದೊರಕುತ್ತದೆ. 'ಕಾನೂನಿಂದ, ಸಮಾಜದಿಂದ, ಮತ್ತು ಧರ್ಮದಿಂದ' ಈ ಅನುಮೋದನೆಯ ಶಕ್ತಿ ಅಸಂಘಟನೆಯ ಜೀವಂತಿಕೆಯನ್ನು ನಿರ್ಧರಿಸುತ್ತದೆ. ಜಾತಿಪದ್ಧತಿಯ ಹಿಂದಿರುವ ಅನುಮೋದನೆಯ ಸ್ವರೂಪ ಎಂಥಹದ್ದು? ದುರದೃಷ್ಟವಶಾತ್ ಜಾತಿಪದ್ಧತಿಗೆ ಸಿಕ್ಕಿರುವುದು ಧಾರ್ಮಿಕ ಅನುಮೋದನೆ ಏಕೆಂದರೆ ವರ್ಣವ್ಯವಸ್ಥೆ ಹೊಸರೂಪವಾಗಿ ಬಂದ ಜಾತಿಪದ್ಧತಿಗೆ ವೇದಗಳ ಅನುಮೋದನೆ ದೊರಕಿದೆ. ವೇದಗಳು ಎಂದು ಸುಳ್ಳಾಗದ ಹಿಂದೂ ಧರ್ಮದ ಪವಿತ್ರ ಗ್ರಂಥಗಳಾಗಿವೆ. ದುರದೃಷ್ಟವಶಾತ್ ಹೀಗಾದರೆ ಎಂದು ಅಂಬೇಡ್ಕರ್ ಹೇಳುವುದಕ್ಕೆ ಕಾರಣ ಧಾರ್ಮಿಕ ಅನುಮೋದನೆ ದೊರೆತ ಯಾವುದೇ ವ್ಯವಸ್ಥೆಗೆ ಪವಿತ್ರ ಮತ್ತು ಸರ್ವಕಾಲೀನ ಗುಣಗಳು ಒದಗಿ ಬರುತ್ತವೆ. ಹಾಗಾಗಿ ಜಾತಿ ಪದ್ಧತಿಯ ಮಾಯವಾಗುವಂತದಲ್ಲವಾದರೆ ಇನ್ನು ಲಿಂಗಾಧಾರಿತ ಶ್ರೇಣೀಕರಣ ಮಾಯವಾಗುವ ಬಗೆ ಹೇಗೆ? ಎಂದು ಪ್ರಶ್ನಿಸುತ್ತಾರೆ. (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು) ಇದು ತಳ ಸಮುದಾಯದ ಅಧ್ಯಯನಗಳಿಗೆ ಚಿಂತನಾತ್ಮಕ ನೆಲೆಯನ್ನು ನೀಡುತ್ತದೆ. ಹೀಗೆ ಪ್ರಸ್ತುತ ಲಿಂಗ, ಜಾತಿ

ಅಸಮಾನತೆಗಳನ್ನು ತಾರತಮ್ಯವುಳ್ಳ ಪದ್ಧತಿಗೆ ವೈದಿಕ ಧರ್ಮವೇ ಮೂಲ ಎಂದು ಪರಿಭಾಷಿಸುವ ಅಂಬೇಡ್ಕರ್ ಇಂಥಹ ಅಸಮಾನತೆಯನ್ನು ಸಮರ್ಥಿಸುವ ವೈದಿಕ ಧರ್ಮದ ವಿಧೇಯಕಗಳನ್ನು, ಮತ್ತು ಒಗಟುಗಳಲ್ಲಿನ ಅತಾರ್ಕಿಕ ನೆಲೆಯಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಒರಿಯಂಟಲಿಸ್ಟ್ ಪ್ರಭಾವದಲ್ಲಿ ಪರಿಶೀಲಿಸುವುದು ಕಂಡು ಬರುತ್ತದೆ.

### ೪.೧ ಮಹಿಳೆ, ಜಾತಿ ಶ್ರೇಣೀಕರಣ : ಧಾರ್ಮಿಕ ವಿಧೇಯಕಗಳು

ಮಾನವ ಸಮಾಜದ ಆರಂಭದಲ್ಲಿ ಲಿಂಗ ಮತ್ತು ಜಾತಿ ಪದ್ಧತಿಯು ಏಣೀಶ್ರೇಣೀಕರಣಕ್ಕೆ ಒಳಪಟ್ಟಿರಲಿಲ್ಲ. ಅಂದರೆ ಪ್ರಧಾನ- ಅಧೀನ ಪರಿಕಲ್ಪನೆಗಳು ಅಸ್ತಿತ್ವದಲ್ಲಿ ಇರಲಿಲ್ಲ. ಆದರೆ ಇತಿಹಾಸದ ಒಂದು ಹಂತದಲ್ಲಿ ಲಿಂಗ ಮತ್ತು ಜಾತಿ ಪದ್ಧತಿಯು ತಾರತಮ್ಯವನ್ನು ಮೈಗೂಡಿಸಿಕೊಂಡ ನಂತರ ತಮ್ಮೊಳಗಿದ್ದ ಮುಕ್ತಚಾಲನೆಯನ್ನು ಕಳೆದುಕೊಂಡವು. ಆಗ ಅಧಿಕಾರ ಕೇಂದ್ರೀಕರಣವು ಬಲಗೊಂಡಿತು. ಈ ಮೂಲಕ ಲಿಂಗ ಮತ್ತು ಜಾತಿಗಳಲ್ಲಿ ಶೋಷಕ - ಶೋಷಿತ ಎಂಬ ಎರಡು ಘಟಕಗಳಾಗಿ ವಿಭಜನೆಗೊಂಡಂತೆ ಅದನ್ನು ಜಾರಿಗೊಳಿಸಲು ಧರ್ಮದ ಅಗತ್ಯ ಕಂಡು ಬಂದಿತು. ಹಾಗೆಯೇ ಸಾಮಾಜಿಕ ವ್ಯವಸ್ಥೆಯ ಕೇಂದ್ರದಲ್ಲಿ ಉಳಿಯಲು ಧರ್ಮವು ಅವುಗಳಿಗೆ ಪರವಾನಿಗೆ ನೀಡುವುದು ಅನಿವಾರ್ಯವಾಯಿತು. ಧಾರ್ಮಿಕ ಅಧಿಕಾರವು ಮೇಲ್ಜಾತಿ ಪುರುಷನ ಕೈಸೇರುವ ಮೂಲಕ ಧಾರ್ಮಿಕ ಸಂಸ್ಥೆ ಪುರುಷನ ಮುಖವಾಣಿಯಾಯಿತು. ಪಿತೃಪ್ರಧಾನತೆಯ ಎಲ್ಲಾ ಮೌಲ್ಯಗಳು, ಆಚರಣೆಗಳು, ಪುನಸ್ಕಾರಗಳು, ಧಾರ್ಮಿಕ ವಿಧೇಯಕಗಳಾಗಿ ನಿರೂಪಿತವಾದವು ಈ ಧೋರಣೆಯನ್ನು ಪ್ರಸ್ತುತ ಪಡಿಸುವ ವೈದಿಕ ಧರ್ಮ ಚಿಂತನೆಗಳನ್ನು ಸಂಗ್ರಹದ ಕೃತಿಗಳನ್ನು ಅಂಬೇಡ್ಕರ್ ಚರ್ಚಿಸುತ್ತಾರೆ.

ಅಂಬೇಡ್ಕರ್ ಪ್ರಕಾರ "ಮನುಸ್ಮೃತಿ ಅಸ್ಪೃಶ್ಯತೆ ಪ್ರತಿಪಾದನೆಯನ್ನೇ ತನ್ನ ಧ್ಯೇಯವಾಗಿ ಹೊಂದಿತ್ತು ಅದು ಅಲ್ಲಿಗೆ ಮುಗಿಯದೇ ಸ್ತ್ರೀಯನ್ನು ಶೂದ್ರತಿಶೂದ್ರರಾಗಿ ಪರಿಭಾಷಿಸಿತು ಎನ್ನುತ್ತಾರೆ." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೩೭) ಆದ್ದರಿಂದಲೇ ಅವರು ಮಹಿಳೆಯರ ಬಗ್ಗೆ ಮಾತನಾಡುವಾಗ ಪದೇ ಪದೇ ಮನುಸ್ಮೃತಿಯನ್ನು ಪ್ರಸ್ತಾಪಿಸುತ್ತಿದ್ದರು, ಕಟುವಾಗಿ ಖಂಡಿಸುತ್ತಿದ್ದರು. ಕೊನೆಗೆ ಬಹಿರಂಗವಾಗಿ ಸುಟ್ಟರು. ಮನು ಅಸ್ಪೃಶ್ಯರಿಗೆ ಮಾಡಿದ ಅನ್ಯಾಯಕ್ಕಿಂತ ಕಡಿಮೆಯಾದುದ್ದನ್ನು ಸ್ತ್ರೀಯರಿಗೆ ಮಾಡಿಲ್ಲ ಎಂದು ನಿಷ್ಪಕ್ಷವಾಗಿ ಸಾರಿದರು. ಮಹಿಳೆಯರ ವಿಚಾರದಲ್ಲಿ ಮನುವನ್ನು ಕಟಕಟೆಯಲ್ಲಿ ನಿಲ್ಲಿಸಿ ಪ್ರಶ್ನಿಸುವ ಗಟ್ಟಿಬರಹದ ಮಾದರಿಯಾಗಿ 'ಸ್ತ್ರೀ ಮತ್ತು ಪ್ರತಿಕ್ರಾಂತಿ' ಎಂಬ ಲೇಖನವನ್ನು ನೋಡಬಹುದು.

ಈ ಲೇಖನದಲ್ಲಿ ಮನು ಶೂದ್ರರ ಮೇಲೆ ಮೃದುವಾಗಿದ್ದಕ್ಕಿಂತ ಸ್ತ್ರೀಯರ ಮೇಲೆ ಮೃದುವಾಗಿದ್ದನೆನ್ನುವುದು ಕಷ್ಟ. ಹೆಣ್ಣಿನ ಮೇಲೆ ಕೀಳು ಅಭಿಪ್ರಾಯದಿಂದಲೇ ಅವನು

ಆರಂಭಿಸುತ್ತಾನೆ ಎಂಬ ನೇರ ಆಪಾದನೆಯೊಂದಿಗೆ ಆರಂಭಿಸುವ ಅಂಬೇಡ್ಕರ್ ಆಧಾರ ಸಮೇತ ಎಳೆ ಎಳೆಯಾಗಿ ಆತ ಪ್ರತಿಪಾದಿಸಿದ ಸ್ತ್ರೀ ವಿರೋಧಿ ನಿಲುವುಗಳನ್ನು ಬಯಲುಗೆಳೆಯಲು ಮನು ಹೆಣ್ಣಿನ ಮೇಲೆ ಹೇರಿದ ವಿಧೇಯಕಗಳ ಪಟ್ಟಿಯನ್ನು ಕೊಡುತ್ತಾರೆ. ಅವುಗಳೆಂದರೆ:

೧."೨೧೩ ಈ ವಿಶ್ವದಲ್ಲಿ ಪುರುಷರನ್ನು ಭ್ರಷ್ಟಗೊಳಿಸುವುದು ಸ್ತ್ರೀಯ ಸ್ವಭಾವ ಆದ್ದರಿಂದ ವಿವೇಕಿಗಳು ಹೆಣ್ಣಿನ ಜೊತೆ ಏಕಾಂಗಿಯಾಗಿರುವುದಿಲ್ಲ.

೨.೨೧೪ ಸ್ತ್ರೀಯ ಈ ಜಗತ್ತಿನಲ್ಲಿ ಮೂರ್ಖನನ್ನು ಹಾದಿತಪ್ಪಿಸುವುದಲ್ಲದೆ, ವಿದ್ಯಾವಂತ ಪುರುಷರನ್ನೂ ಹಾದಿ ತಪ್ಪಿಸಿ ತನ್ನ ಆಸೆ ಆಮಿಷಗಳ ದಾಸರನ್ನಾಗಿ ಮಾಡುತ್ತಾಳೆ.

೨. ೨೧೫ ಯಾರೊಬ್ಬರಾಗಲೀ ಏಕಾಂತವಾದ ಸ್ಥಳದಲ್ಲಿ ತನ್ನ ತಾಯಿಯೊಡನಾಗಲೀ, ಸಹೋದರಿಯೊಡನಾಗಲೀ, ಪುತ್ರಿಯೊಡನಾಗಲೀ ಒಂಟಿಯಾಗಿ ಕುಳಿತಕೊಳ್ಳಬಾರದು. ಎಷ್ಟೇ ಬುದ್ಧಿವಂತನು ಕಲಿತವನೂ ಆದರೂ ಸಹ ಇಂದ್ರಿಯಗಳು ಬಹಳ ಶಕ್ತಿಯುತವಾದ್ದರಿಂದ.

೯.೧೪ ಸ್ತ್ರೀಯರು ಸೌಂದರ್ಯವನ್ನಾಗಲೀ, ವಯಸ್ಸನ್ನಾಗಲೀ ಲೆಕ್ಕಿಸರು ಸುಂದರನಾಗಿದ್ದರು, ಕುರೂಪಿಯಾಗಿದ್ದರೂ, ಪುರುಷ ಎಂಬ ಮಾತ್ರದಿಂದಲೇ ತಮ್ಮನ್ನು ತಾವು ತೆತ್ತುಕೊಳ್ಳಬಲ್ಲರು.

೧೧.೧೫ ಈ ಜಗತ್ತಿನಲ್ಲಿ ಅವರನ್ನು ಎಷ್ಟೇ ಜಾಗ್ರತರಾಗಿ ನಡೆಸಿಕೊಂಡರೂ ಪುರುಷರ ಬಗೆಗಿನ ಆಸಕ್ತಿಯಿಂದ, ಕೋಪಮಿಶ್ರಿತ ಸ್ವಭಾವದಿಂದ ಸ್ವಾಭಾವಿಕವಾದ ಹೃದಯ ಹೀನತೆಯಿಂದ ಅವರು ತಮ್ಮ ಗಂಡಂದರಿಗೆ ಅವಿಧೇಯರಾಗಿ ವರ್ತಿಸುವರು.

೯.೧೬ ಸೃಷ್ಟಿಕರ್ತನು ಅವರಲ್ಲಿ ತುಂಬಿರುವ ಇಂಥ ಅವಗುಣಗಳ ದೆಸೆಯಿಂದ ಪುರುಷನಾದವನು ಅವರನ್ನು ಸದಾಕಾಲವೂ ಜೋಪಾನವಾಗಿಡಲು ಸಾಹಸಪಡಬೇಕು.

೯.೧೭ ಮನುವು ಹೇಳುತ್ತಾನೆ. ಸೃಷ್ಟಿಕರ್ತನು ಅವರನ್ನು ಸೃಷ್ಟಿಸಿದಾಗಲೇ ಸ್ತ್ರೀಯರು ಶಯ್ಯೆಯ ಬಗ್ಗೆ, ಪೀಠದ ಬಗ್ಗೆ ಆಭರಣಗಳ ಬಗ್ಗೆ ಒಲವನ್ನು ಹಾಗೂ ಮಲೀನ ಆಕಾಂಕ್ಷೆಗಳಾದ ಅಪ್ರಾಮಾಣಿಕತೆ ಹೊಟ್ಟೆಕಿಚ್ಚು ಹಾಗೂ ಹೀನ ಚಾರಿತ್ರ್ಯವನ್ನು ಹೊಂದಿದವರಾಗಿದ್ದಾರೆ." (ಉ.ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೧೬,೬೧೭)

"ಮನುವಿನ ಈ ಮೇಲ್ಕಂಡ ಅಂಶಗಳು ಮಹಿಳೆ ತುಚ್ಛಸ್ಥಾನದಲ್ಲಿರುವುದನ್ನು ತೋರಿಸುತ್ತವೆ. ಎಂದು ಅಂಬೇಡ್ಕರ್ ಅರ್ಥೈಸುವುದು ಕಂಡುಬರುತ್ತದೆ. ಯಾವುದೇ ಸಂದರ್ಭಗಳಲ್ಲಿಯೂ ಸ್ತ್ರೀಯರ ಸ್ವತಂತ್ರರಾಗಿರಕೂಡದು ಎಂದು ಮನು ಹೇಳುತ್ತಾನೆ.

೯.೨ "ದಿನರಾತ್ರೀ ಸ್ತ್ರೀಯು ಪುರುಷನ ಹಾಗೂ ಅವನ ಕುಟುಂಬದ ಅವಲಂಬಿಯಾಗಿರತಕ್ಕದ್ದು. ಸ್ತ್ರೀಯರು ಇಂದ್ರಿಯ ಸಂತೋಷವನ್ನು ಬಯಸುವುದಾದರೆ ಒಬ್ಬರ ಅಧೀನಕ್ಕೊಳಪಡಬೇಕು.

೦.೩. ಅವಳ ತಂದೆಯು ಬಾಲ್ಯದಲ್ಲೂ ಪತಿಯ ಯೌವ್ವನದಲ್ಲಿಯೂ ಪುತ್ರರು ಮುಪ್ಪಿನಲ್ಲಿಯೂ ಆಕೆಯನ್ನು ಸಂರಕ್ಷಿಸಬೇಕು. ಯಾವುದೇ ಕಾಲದಲ್ಲಿ ಆಕೆಗೆ ಸ್ವಾತಂತ್ರವನ್ನು ಕೊಡತಕ್ಕದ್ದಲ್ಲ.

೯.೫ ಕೆಡಬಹುದಾದ ವಿಷಯಗಳಿಂದ ಆಕೆಯನ್ನು ಯಾವಾಗಲೂ ಪಾರು ಮಾಡುವ ಬಗ್ಗೆ ಕಾವಲಿರಬೇಕು. ಅವರನ್ನು ಹತೋಟಿಯಲ್ಲಿಡದಿದ್ದರೆ, ಅವರು ಎರಡು ಕುಟುಂಬಗಳಿಗೆ ದುಃಖವನ್ನುಂಟು ಮಾಡುವರು.

೯.೬ ಎಲ್ಲಾ ಜಾತಿಯವರ ಆದ್ಯ ಕರ್ತವ್ಯವೆಂದರೆ, ದುರ್ಬಲ ಗಂಡಂದಿರನ್ನು ಸೇರದಂತೆ ಅವರ ಹೆಂಡತಿಯನ್ನು ಕಾಪಾಡುವುದು.

೫.೧೪೮ ಹುಡುಗಿಯಾಗಲಿ, ಯೌವ್ವನದಲ್ಲಿ ತರುಣಿಯಾಗಲೀ, ಮುದುಕಿಯಾಗಲಿ, ತನ್ನ ಸ್ವಂತ ಮನೆಯಲ್ಲಿಯೇ ಅದರೂ ಯಾವುದನ್ನೂ ಸ್ವತಂತ್ರವಾಗಿ ಮಾಡಬಾರದು.

೫.೧೪೮ ಬಾಲ್ಯದಲ್ಲಿ ಸ್ತ್ರೀ ತಂದೆಗೂ ಯೌವ್ವನದಲ್ಲಿ ಪತಿಗೂ, ಪತಿಯ ಮರಣ ನಂತರ ಪುತ್ರರಿಗೂ ಅಧೀನಳಾಗಿರಬೇಕೇ ಹೊರತು ಯಾವ ಕಾಲದಲ್ಲೂ ಸ್ವತಂತ್ರಳಾಗಿರತಕ್ಕದ್ದಲ್ಲ.

೫.೧೪೯ ತನ್ನ ತಂದೆಯಿಂದಾಗಲೀ ಪುತ್ರರಿಂದಾಗಲೀ ಬೇರ್ಪಟ್ಟು ಪತ್ರೇಕವಾಗಿರುವ ಬಗ್ಗೆ ಆಕೆ ಎಂದಿಗೂ ಯೋಚಿಸಬಾರದು ಹಾಗೆ ಮಾಡಿದಲ್ಲಿ ಆಕೆ ಎರಡೂ ಅಂದರೆ ತನ್ನ ಸ್ವಂತ ಹಾಗೂ ಪತಿಯ ಕುಟುಂಬಗಳಿಗೆ ಕಂಟಕಪ್ರಾಯಳಾಗುವಳು. (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೧೭)

ಸ್ತ್ರೀಗೆ ವಿಚ್ಛೇದನ ಹಕ್ಕು ಎಂದಿಗೂ ಇಲ್ಲ. ಇದನ್ನು ಸಮರ್ಥಿಸುತ್ತಾ ಮನುವಿನ ವ್ಯಾಖ್ಯಾನ ಹೀಗಿದೆ:

೯.೪೫. "ಪತಿಯು ತನ್ನ ಪತ್ನಿಯೂ ಸೇರಿದಂತೆ ಒಬ್ಬನೇ ಆಗುವನು ಅಂದರೆ ಒಮ್ಮೆ ಸ್ತ್ರೀ ವಿವಾಹಿತಳಾದರೆ ಎಂದಿಗೂ ಇಬ್ಬರ ನಡುವೆ ಸಂಬಂಧ ಬೇರ್ಪಡೆಯಾಗುವುದು ಸಾಧ್ಯವಿಲ್ಲ." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೧೮)

"ಮನುವು ವಿವಾಹ ವಿಚ್ಛೇದನದ ಬಗ್ಗೆ ಹೇಳಿರುವ ಹೇಳಿಕೆಗಳ ಹಿಂದೆ ಇರುವ ಉದ್ದೇಶಗಳು ಬೇರೆಯೇ ಇರಬಹುದು. ಆದರೆ ಹಿಂದೂ ಮೂಲಭೂತ ವಾದಿಗಳು ಈ ಇಡೀ ಕತೆಯನ್ನು ತಮ್ಮ ಆಲೋಚನೆಯ ಧಾಟಿಗೆ ಅನುಕೂಲ ಕಲ್ಪಿಸಿಕೊಂಡು ಮನುವು ವಿವಾಹವನ್ನು ಪವಿತ್ರ ಬಂಧನವೆಂದು ಭಾವಿಸಿದ್ದರಿಂದ ವಿಚ್ಛೇಧನಕ್ಕೆ ಅವಕಾಶ ನೀಡಿರಲಿಲ್ಲವೆಂದು ವಾದಿಸುವರು. ಅಂಬೇಡ್ಕರರ ಇದನ್ನು ವಿಭಿನ್ನವಾಗಿ ವ್ಯಾಖ್ಯಾನಿಸುತ್ತಾರೆ. ಮನುವಿನ ವಿಚ್ಛೇದನಕ್ಕೆ ವಿರುದ್ಧವಾದ ನಿಯಮವು ಭಿನ್ನ ಆಶಯವನ್ನು ಹೊಂದಿದೆ. ಅದೇನೆಂದರೆ ಪುರುಷನನ್ನು ಸ್ತ್ರೀಯೊಂದಿಗೆ ಬಂಧಿಸಿರುವುದಾಗಿರದೇ ಸ್ತ್ರೀಯನ್ನು ಪುರುಷನೊಂದಿಗೆ ಬಂಧಿಸಿ

ಸ್ವಾತಂತ್ರ ಕೊಡದಿರುವುದೇ ಆಗಿದೆ ಎಂದು ಅಂಬೇಡ್ಕರ್ ಅರ್ಥೈಸುತ್ತಾರೆ" (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೧೮)

ಮನುವು ಪುರುಷನು ತನ್ನ ಸ್ತ್ರೀಯನ್ನು ಬಿಡುವ ಬಗೆಗೆ ಎಂದಿಗೂ ತಡೆಯೊಡ್ಡಿಲ್ಲ. ಅವನು ಆಕೆಯನ್ನು ಬಿಡಲು ಅನುಮತಿಸಿರುವುದೇ ಅಲ್ಲದೇ ಆಕೆಯನ್ನು ಮಾರಲೂ ಸಹ ಅನುಮತಿಸಿದ್ದಾನೆ. ಆದರೆ ಅವನು ತಡೆ ಹಿಡಿದಿರುವುದೇನೆಂದರೆ ಪತ್ನಿಯೂ ಸ್ವತಂತ್ರಳಾಗುವುದನ್ನು ಎಂಬುದು ಅವನ ಹೇಳಿಕೆಯಿಂದ ಗೊತ್ತಾಗುತ್ತದೆ.

"೧,೪೬ ಮಾರಾಟದಿಂದಾಗಲಿ ಅಥವಾ ವಯಸ್ಸಿಗೋಸ್ಕರವಾಗಲಿ ಪತಿಯು ತನ್ನ ಪತ್ನಿಯಿಂದ ಬಿಡುಗಡೆ ಹೊಂದಬಹುದು. ಇದರ ಅರ್ಥವೇನೆಂದರೆ ಈ ರೀತಿ ಮಾರಾಟ ಮಾಡಲ್ಪಟ್ಟ ಅಥವಾ ಯಶಸ್ವಿಗಾಗಿ ತ್ಯಜಿಸಲ್ಪಟ್ಟರು ಪತ್ನಿ ಎನಿಸಿಕೊಳ್ಳಲಾರಳು.

ಆಸ್ತಿಯ ವಿಷಯದಲ್ಲಂತೂ ಮನುವು ಪತ್ನಿಯನ್ನು ಗುಲಾಮಳ ಸ್ಥಾನಕ್ಕೆ ಇಳಿಸಿದ್ದಾನೆ. ಪ್ರಸ್ತುತ ಪಡಿಸುತ್ತಾರೆ.

೯.೪೧೬ "ಹೆಂಡತಿ, ಮಗ ಮತ್ತು ಸೇವಕ ಈ ಮೂವರಿಗೂ ಪ್ರತ್ಯೇಕ ಆಸ್ತಿ ಎಂಬುವುದಿಲ್ಲ. ಅವರು ಗಳಿಸಿದ ಆಸ್ತಿಯು ಅವರು ಯಾರನ್ನು ಅವಲಂಬಿಸಿದ್ದಾರೋ ಅವರಿಗೆ ಸೇರಿರುತ್ತದೆ. ಆಕೆಯೂ ವಿಧವೆಯಾದರೆ ತನ್ನ ನಿರ್ವಹಣೆಯನ್ನು ಆ ಆಸ್ತಿಯಿಂದ ಮಾಡಿಕೊಳ್ಳಬಹುದು. ಆದರೆ ಆಕೆಯ ಪತಿಯ ಆಸ್ತಿಯು ಒಟ್ಟು ಕುಟುಂಬದ ಆಸ್ತಿಯಿಂದ ಪ್ರತ್ಯೇಕವಾಗಿರಬೇಕೆಂದು ಹೇಳಿದರೂ ಆಕೆ ಯಾವುದೇ ಸಂದರ್ಭಗಳಲ್ಲಿ ಆಸ್ತಿಗೆ ಸ್ವಾಮಿಯಾಗುವ ಹಕ್ಕನ್ನು ನೀಡಿರಲಿಲ್ಲ.

ಮನುವಿನ ಶಾಸ್ತ್ರ ನಿಯಮದ ಪ್ರಕಾರ ಸ್ತ್ರೀಯು ಕಠಿಣ ಶಿಕ್ಷೆಗಳಿಗೆ ಒಳಪಡಬಹುದು ಹಾಗೂ ಪತಿಯು ತನ್ನ ಪತ್ನಿಯನ್ನು ಹೊಡೆಯುವ ಹಕ್ಕನ್ನು ಹೊಂದಿರುತ್ತಾನೆ.

೮.೨೯೯ ಪತ್ನಿ, ಪುತ್ರ, ಸೇವಕ ವಿದ್ಯಾರ್ಥಿ ಹಾಗೂ ರಕ್ತಸಂಬಂಧಿಯಾದ ಸೋದರ ಇವರುಗಳು ಏನಾದರೂ ತಪ್ಪು ಮಾಡಿದರೆ ಇವರುಗಳನ್ನು ಚಾಟಿಯಿಂದಾಗಲೀ ಅಥವಾ ಬಿದಿರು ಕಡ್ಡಿಯಿಂದಾಗಲೀ ಹೊಡೆಯಬಹುದು." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೧೯) ಮನುವಿನ ನಿಯಮದಡಿಯಲ್ಲಿ ಸ್ತ್ರೀಗೆ ಜ್ಞಾನಾರ್ಜನೆಯ ಹಕ್ಕಿಲ್ಲ. ವೇದಾಭ್ಯಾಸವು ಸ್ತ್ರೀಗೆ ನಿಷಿದ್ಧ.

"೯.೧೮ ಸ್ತ್ರೀಗೆ ವೇದವನ್ನು ಅಭ್ಯಾಸ ಮಾಡುವ ಹಕ್ಕಿಲ್ಲ. ಆದ್ದರಿಂದ ಅವರಿಗೆ ಸಂಬಂಧಿಸಿದ ಸಂಸ್ಕಾರವನ್ನು ಮಾಡಿಕೊಳ್ಳಲು ವೇದಮಂತ್ರದ ಅಗತ್ಯವಿಲ್ಲ. ವೇದವನ್ನು ತಿಳಿದುಕೊಳ್ಳುವ ಹಕ್ಕು ಸ್ತ್ರೀಯರಿಗೆ ಇಲ್ಲವಾದ್ದರಿಂದ ಅವರಿಗೆ ಧರ್ಮದ ಬಗ್ಗೆ ತಿಳುವಳಿಕೆ ಇರಲು ಸಾಧ್ಯವಿಲ್ಲ. ಪಾಪವನ್ನು ತೊಳೆಯುವಲ್ಲಿ ವೇದಮಂತ್ರಗಳು ಸಹಾಯವಾಗುತ್ತವೆ.

ಸ್ತ್ರೀಯರು ವೇದಮಂತ್ರಗಳನ್ನು ಉಚ್ಚರಿಸಲಾರರಾದುದರಿಂದ ಅವರ ಪಾಲಿಗೆ ಅದು ಅಸತ್ಯವಾಗುತ್ತದೆ. ಬ್ರಾಹ್ಮಣ ಧರ್ಮದ ಪ್ರಕಾರ ಯಜ್ಞಯಾಗಾದಿಗಳ ಆಚರಣೆಯು ಧರ್ಮದ ಜೀವವಾಗಿದೆ. ಆದರೂ ಅವುಗಳನ್ನು ಆಚರಿಸಲು ಮನು ಸ್ತ್ರೀಯರಿಗೆ ಅವಕಾಶ ಕೊಡುವುದಿಲ್ಲ ಎಂದು ಅಂಬೇಡ್ಕರ್ ಆಧಾರಗಳನ್ನು ಸೀಡಿ ವ್ಯಾಖ್ಯಾನಿಸುತ್ತಾರೆ.

೧೧.೬೬ ಸ್ತ್ರೀಯರಿಗೂ ಸಹ ಸಂಸ್ಕಾರಗಳ ಆಚರಣೆ ಅಗತ್ಯ. ಆದರೆ ಅವರು ಅವುಗಳನ್ನು ವೇದ ಮಂತ್ರಗಳನ್ನುಚ್ಚರಿಸದೇ ನಡೆಸಿಕೊಳ್ಳಬಹುದು. ಯಜ್ಞ ಯಾಗಾದಿಗಳನ್ನು ಮಾಡುವಿಕೆಯು ಬ್ರಾಹ್ಮಣ ಸಂಸ್ಕೃತಿಯ ಆತ್ಮವಿದ್ದಂತೆ ಈ ಯಜ್ಞ ಯಾಗಾದಿಗಳಿಂದ ಸ್ತ್ರೀಯರನ್ನು ಮನು ನಿಷೇಧಿಸಿದನು.

೯.೨೬.೩೭ ವೇದಗಳಲ್ಲಿ ವಿವರಿಸುವ ನೈಮಿತ್ತಿಕ ಯಜ್ಞವನ್ನು ಸ್ತ್ರೀಯು ಆಚರಿಸಕೂಡದು. ಅವುಗಳನ್ನು ಆಚರಿಸಿದರೆ ಅವಳು ನರಕದಲ್ಲಿ ಬೀಳುವಳು. ಇಂಥಹ ನೈಮಿತ್ತಿಕ ಯಜ್ಞಗಳನ್ನು ಮಾಡಲು ಸ್ತ್ರೀಯನ್ನು ತಡೆದು, ಅವುಗಳನ್ನು ಬ್ರಾಹ್ಮಣ ಪುರೋಹಿತನ ಮೂಲಕ ಮಾಡಿಸಬಹುದೆಂದು ಮನುವು ಹೇಳಿದ್ದಾನೆ.

೪.೨೦೫.೨೦೬ ಬ್ರಾಹ್ಮಣನಾದವನು ಸ್ತ್ರೀಯಿಂದ ಮಾಡಲ್ಪಟ್ಟ ಯಜ್ಞ ಕಾರ್ಯದಲ್ಲಿ ಆಕೆಯಿಂದ ತಯಾರಿಸಲ್ಪಟ್ಟ ಆಹಾರವನ್ನು ಭುಂಜಿಸಕೂಡದು. ಸ್ತ್ರೀಯಿಂದ ಮಾಡಲ್ಪಟ್ಟ ಯಜ್ಞವು ಅಪೂರ್ಣವಾದುದು ಹಾಗೂ ದೇವರಿಂದ ಸ್ವೀಕಾರವಾಗದಂತಹದು. ಆದ್ದರಿಂದ ಅವರುಗಳು ಅದರಿಂದ ದೂರವಿರತಕ್ಕದ್ದು.

ಕೊನೆಯಲ್ಲಿ ಸ್ತ್ರೀಯ ಬಾಳಿನ ಆದರ್ಶವನ್ನು ಕುರಿತಂತೆ ಮನುವು ಆಕೆಯ ಸ್ಥಾನವನ್ನು ಕುರಿತು ವಿವರಿಸುತ್ತಾನೆ. ಅವನ ಮಾತುಗಳಲ್ಲಿಯೇ ಇದನ್ನು ಹೇಳುವುದಾದರೆ,

೫.೧೫೧ ಯಾರಿಗೆ ಅವಳ ತಂದೆಯು ಅವಳನ್ನು ಕೊಡುತ್ತಾನೋ ಅವನ ಅನುಮತಿಗೊಳಪಟ್ಟು, ತಂದೆಯ ಅನುಮತಿಗೊಳವಿಟ್ಟು ಸಹೋದರನ ಅಧೀನಕೊಳಪಟ್ಟು ಅವರು ಬದುಕಿರುವಷ್ಟು ಕಾಲವು ಬಾಳಬೇಕು. ಅವರೇನಾದರೂ ಮರಣಿಸಿದರೆ, ಅವರನ್ನು ನೆನಪಿನಲ್ಲಿಯೂ ಹಳಿಯಬಾರದು.

೫. ೧೫೪ ವರ್ಚಸ್ಸಿಯಲ್ಲದಿದ್ದರು ಅಥವಾ ತನ್ನ ಸುಖವನ್ನು ಬೇರೆಡೆ ಪಡೆಯುವಂಥವನಾಗಿದ್ದರೂ ಅಥವಾ ಸದ್ಗುಣಗಳಿಂದ ದೂರನಾಗಿದ್ದರೂ ಪತಿಯನ್ನೇ ತನ್ನ ಪಾಲಿನ ದೇವರೆಂದು ಭಾವಿಸಿ ಅರಾಧಿಸುವುದು ವಿಧೇಯಳಾದ ಪತ್ನಿಯ ಕರ್ತವ್ಯ.

೫.೧೫೫. ಯಾವುದೇ ಯಜ್ಞವನ್ನಾಗಲಿ, ವ್ರತವನ್ನಾಗಲಿ, ಉಪವಾಸವನ್ನಾಗಲೀ, ಪತಿಯನ್ನು ಬಿಟ್ಟು ಆಚರಿಸತಕ್ಕದ್ದಲ್ಲ. ಆಕೆ ಪತಿಗೆ ವಿಧೇಯಳಾಗಿದ್ದರೆ, ಅದೊಂದರಿಂದಲೇ ಆಕೆ ಸ್ವರ್ಗದಲ್ಲಿ ಉನ್ನತಸ್ಥಾನ ಹೊಂದಬಲ್ಲಳು.

೫.೧೫೩ ಪವಿತ್ರ ಮಂತ್ರಗಳ ಮೂಲಕ ಆಕೆಯನ್ನು ಕೈಹಿಡಿದ ಪತಿಯೂ ಯಾವಾಗಲೂ ತನಗೂ ತನ್ನ ಪತಿಗೂ ಸದಾಕಾಲವು ಆನಂದದ ಸೆಲೆಯಾಗಿ ಎಲ್ಲಾ ಋತುಗಳಲ್ಲೂ, ಈ ಜಗತ್ತಿನಲ್ಲೂಪರಲೋಕದಲ್ಲೂ ಸುಖ ಹೊಂದುತ್ತಾನೆ.

೫.೧೫೦. ಆಕೆಯೂ ಯಾವಾಗಲೂ ಸಂತೋಷದಿಂದಲೂ ಚಟುವಟಿಕೆಯುಳ್ಳವಳಾಗಿಯೂ, ಬುದ್ಧಿವಂತಾಳಾಗಿಯೂ ಇದ್ದು, ಪಾತ್ರೆ ಪದಾರ್ಥಗಳನ್ನು ಸ್ವಚ್ಛವಾಗಿಡುವುದರಲ್ಲೂ ಆರ್ಥಿಕ ವೆಚ್ಚವನ್ನು ಹತೋಟಿಯಲ್ಲಿಡುವುದರಲ್ಲೂ ಜಾಣೆಯಾಗಿರಬೇಕು." (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೨೦)

ಅಂಬೇಡ್ಕರರು ಇದನ್ನು ಹಿಂದೂಗಳು ತಮ್ಮ ಸ್ತ್ರೀಯರಿಗಾಗಿ ನಿರೂಪಿಸಿದ ಉಚ್ಚ ಆದರ್ಶವೇ? ಎಂದು ಪ್ರಶ್ನಿಸಿದ್ದಾರೆ.

ಈ ರೀತಿಯ ಸ್ತ್ರೀಯನ್ನು ದುರ್ಬಲಗೊಳಿಸುತ್ತ, ಮನುವು ಅವಳನ್ನು ಕೊಲ್ಲುವ ತಪ್ಪನ್ನು ಉಪಪಾತಕವೆನ್ನುತ್ತಾನೆ. ಅಂದರೆ ಅದು ದೊಡ್ಡ ತಪ್ಪಾಗಿರದೇ ಕೇವಲ ಸಣ್ಣ ತಪ್ಪಷ್ಟೇ ಎಂದು ಹೇಳುತ್ತಾನೆ.

"೯.೬೭. ಮದ್ಯಸೇವಿಸಿದವರು ಮಲಗಿದ ಹೆಣ್ಣು, ಶೂದ್ರರು ವೈಶ್ಯರು ಆತವಾ ಕ್ಷತ್ರಿಯರು ಹಾಗೂ ನಾಸ್ತಿಕರು ಇವರನ್ನು ಕೊಲ್ಲುವದೂ ಸಹ ಸಣ್ಣ ತಪ್ಪೆನ್ನುತ್ತಾನೆ. ಯಾರೇ ಆಗಲಿ ಶೂದ್ರ, ವೈಶ್ಯ, ಅಥವಾ ಕ್ಷತ್ರಿಯರನ್ನು ಕೊಲ್ಲುವುದು ಸಣ್ಣ ತಪ್ಪೆಂಬುದರ ಮನುವಿನ ಹೇಳಿಕೆ ಹಿನ್ನಲೆಯೆಂದರೆ, ಈ ಮೂಲಕ ಬ್ರಾಹ್ಮಣನು ಅತ್ಯಂತ ಉಚ್ಚನಾದವನೆಂದೂ ಅವನನ್ನು ಕೊಲ್ಲುವುದು ಮಾತ್ರ ಮಹಾ ಪಾತಕವಾಗುವುದೆಂಬುದನ್ನು ಸಾಧಿಸಲು ಈ ಮೂಲಕ ಯತ್ನಿಸಿದ್ದಾನೆ. ಮತ್ತು ಸ್ತ್ರೀಗೂ ಇದನ್ನು ಅಳವಡಿಸಿದ ಕಾರಣವೇನೆಂದರೆ ಮನುವಿನ ದೃಷ್ಟಿಯಲ್ಲಿ ಸ್ತ್ರೀಗೆ ಯಾವ ಬೆಲೆಯೂ ಕೂಡಾ ಇಲ್ಲ. (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಪು-೬೨೧)

ಮೇಲಿನ ಹೇಳಿಕೆಗಳು ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಕೆಳಗಿಳಿಸುವಲ್ಲಿ ವೈದಿಕ ಧರ್ಮ ಮತ್ತು ಆಸಂಬಂಧಿ ಚಿಂತನೆಗಳು ಕಾರಣ ಎಂಬ ನಿರ್ಧಾರಕ್ಕೆ ಬರುತ್ತಾರೆ. ಹಾಗೆಯೇ ಮನುವಿನ ಈ ನಿಯಮದಲ್ಲಿ ಹೊಸತೇನು ಇಲ್ಲ ಹಾಗೂ ಸ್ತ್ರೀಯರ ಬಗ್ಗೆ ಆತ ಹೊಸದಾಗಿ ಏನು ಹೇಳಿಲ್ಲ. ಭಾರತದಲ್ಲಿ ಹೆಣ್ಣು ಅಸ್ತಿತ್ವವನ್ನು ನಿರಾಕರಿಸುವುದು ಬ್ರಾಹ್ಮಣ್ಯದ ಉದ್ದೇಶವಾಗಿತ್ತು. ಮನುವಿಗೆ ಮುಂಚೆ ಅವರು ಅದನ್ನು ಕೇವಲ ಸಾಮಾಜಿಕ ತತ್ವವಾಗಿ ಅಳವಡಿಸಿಕೊಂಡಿದ್ದರು. ಮನುವು ಆ ಸಾಮಾಜಿಕ ತತ್ವಗಳನ್ನು ರಾಜ್ಯದ ನಿಯಮಗಳನ್ನಾಗಿ ಪರಿವರ್ತಿಸುವ ಕೆಲಸ ಮಾಡಿದನಷ್ಟೇ. ಎರಡನೆಯ ಸಂಗತಿ ಎಂದರೆ ಮಹಿಳೆಯರು ಮತ್ತು ಶೂದ್ರರ ಮೇಲೆ ಈ ದೌರ್ಬಲ್ಯಗಳನ್ನು ಹೇರುವುದರ ಮುಖಾಂತರ ಮನುವು ಮಹಿಳೆಯರ

ಮತ್ತು ದಲಿತರ ಎರಡು ಗುಂಪುಗಳಾಗಿ ವಿಂಗಡಿಸಿ ಬ್ರಾಹ್ಮಣ ಧರ್ಮದ ಅಧೀನತೆಗೆ ಒಳಪಡಿಸುವಂತಹದ್ದು ಕಂಡುಬರುತ್ತದೆ.

ಈ ಎಲ್ಲ ಸಂಗತಿಗಳು ವೈದಿಕ ಧರ್ಮ ಮಹಿಳೆಯ ಬಗ್ಗೆ ಜೀವ ವಿರೋಧಿ ನಿಲುವನ್ನೆ ತಳೆದಿದೆ. ಇಂತಹದನ್ನು ಹಿಂದೂ ಧರ್ಮ ಸ್ತ್ರೀಯರ ಉನ್ನತ ಆದರ್ಶವೆಂದು ಪರಿಗಣಿಸುತ್ತದೆ ಎಂದು ಅಂಬೇಡ್ಕರ್ ಹೇಳುತ್ತಾರೆ. ವೇದಕಾಲೀನ ಸಮಾಜವನ್ನು ತುಂಬಾ ಉದಾರವಾಗಿ ಕಂಡಂತಿದೆ. ಮನಸ್ಮೃತಿಯ ಪೂರ್ವದ ದಾಖಲೆಗಳು ಇಷ್ಟು ವಿಕ್ಷಿಪ್ತಕಾರಿಯಾದ ಮಾಹಿತಿಯನ್ನು ನೀಡಿರುವುದಿಲ್ಲವೆಂದಕ್ಕೆ ಆತ ಅಥರ್ವಣವೇದ, ಶೌತಸೂತ್ರ, ಅಸ್ತದಾಯಿ, ಮಹಾಭಾಷಾ ಇತ್ಯಾದಿಗಳನ್ನು ಪ್ರಸ್ತಾಪಿಸುತ್ತದೆ. ಹಾಗಾಗಿ ಈ ಲೇಖನದಲ್ಲಿ ಮನುವನ್ನು ವಿಮರ್ಶಿಸುವ ಸಂದರ್ಭದಲ್ಲಿ ಅಂಬೇಡ್ಕರ್ ಓರಿಯಂಟಲಿಸ್ಟ್ ಮನೋಭಾವವನ್ನು ಪ್ರಕಟಿಸುವುದು ಕಂಡುಬರುತ್ತದೆ. ಈ ಹಿನ್ನಲೆಯಲ್ಲಿ ಗಮನಿಸಬೇಕಾದ ಸಂಗತಿಗಳು ಈ ಕೆಳಗಿನಂತಿವೆ.

**ಒಂದು:** ವಸಾಹತುಶಾಹಿ ಹಿಡಿತವನ್ನು ಬಲಪಡಿಸುವುದಕ್ಕಾಗಿ ಐರೋಪ್ಯ ವಿದ್ಯಾಂಸರು ಬಳಸಿಕೊಂಡ ಬಗೆ. **ಎರಡು :** ವಸಾಹತುಶಾಹಿ ಹಿಡಿತದಿಂದ ಬಿಡಿಸಿಕೊಳ್ಳಲು ದೇಶಿ ವಿದ್ವಾಂಸರು ಬಳಸಿಕೊಂಡ ಬಗೆ. ಈ ಎರಡಕ್ಕಿಂತ ಭಿನ್ನವಾದ ಬಳಕೆದಾರಿಯನ್ನು ಅಂಬೇಡ್ಕರ್ ಅವಿಷ್ಕಾರಿಸಿಕೊಂಡರು. ಇವರು ಸಮಾಕಾಲೀನ ಭಾರತೀಯ ಸಮಾಜವು ಅಂತರ್ಗತರಾಗಿಸಿಕೊಂಡಿದ್ದ ವಸಾಹತುಶಾಹಿ ಗುಣವನ್ನು ಇಲ್ಲವಾಗಿಸುವ ಸಲುವಾಗಿ ಓರಿಯಂಟಲಿಸ್ಟ್ ಆಲೋಚನೆಗಳನ್ನು ಬಳಸಿಕೊಂಡಿದ್ದಾರೆ. ಅಂದರೆ ಅಸ್ಪೃಶ್ಯತೆ, ಸ್ತ್ರೀಯ ದುಸ್ಥಿತಿಗಳ ವಾಸ್ತವ ಸಮಾಜವನ್ನು ವಿರೋಧಿಸುವಾಗ, ಮನುವಿನಂತಹ ಜೀವವಿರುವ ವ್ಯಕ್ತಿತ್ವವನ್ನು ಖಂಡಿಸಿ ಭಾರತೀಯರನ್ನು ವೈಚಾರಿಕವಾಗಿಸುವ ಸಾಧನವಾಗಿ ಓರಿಯಂಟಲಿಸ್ಟ್ ದಾಖಲೆಗಳು ಕಂಡುಬರುತ್ತವೆ.

ಹೀಗೆ ವೈದಿಕ ಧರ್ಮವು ಸಮಾಜದ ಆಲೋಚನೆ ದೃಷ್ಟಿಕೋನವನ್ನೇ ಸ್ತ್ರೀಗೆ ವಿರುದ್ಧವಾಗಿ ನಿರೂಪಿಸಿತು. ಲಿಂಗಾಧಾರಿತ ಶ್ರೇಣೀಕರಣವು ದೈವ ನಿಯಮಕ ಎಂಬಂತೆ ಭಾವಿತವಾಗಿ ಅದಕ್ಕನುಗುಣವಾದ ಎಲ್ಲಾ ನಿರ್ದೇಶನಗಳು ಉಳಿದ ಸಾಮಾಜಿಕ ಸಂಸ್ಥೆಗಳಿಗೆ ದೊರೆತವು. ಪರಿಣಾಮವಾಗಿ ಧಾರ್ಮಿಕ ಸಂಸ್ಥೆಯನ್ನು ಒಳಗೊಂಡಂತೆ ವಿವಾಹ, ಕುಟುಂಬ, ಶಿಕ್ಷಣ, ರಾಜಕೀಯ, ಇತ್ಯಾದಿ ಎಲ್ಲಾ ಸಂಸ್ಥೆಗಳಲ್ಲೂ ಲಿಂಗಾಧಾರಿತ ಶ್ರೇಣೀಕರಣ ಮೈಚಾಚಿಕೊಂಡು ನಿಂತಿತು. ಸ್ತ್ರೀಯ ಕನಿಷ್ಠತೆಗೆ ಅವಳ ಜೈವಿಕತೆಯೇ ಕಾರಣ. ಅದು ದೈವ ನಿಯಮಕವಾದುದು. ಆದುದರಿಂದ ದೈವನಿಯಮಕತೆಗೆ ವಿರುದ್ಧವಾಗಿ ವರ್ತಿಸಿದರೆ, ಅದು ದೈವವಿರೋಧಿ ಧರ್ಮವಿರೋಧಿ ಸಂಗತಿಯಾಗುತ್ತದೆ. ಹೀಗೆ ಅಂತಿಮವಾಗಿ ಸಮಾಜದ ಎಲ್ಲಾ ಅಂಗಗಳಲ್ಲೂ ಪುರುಷನ ಅಧಿಕಾರವನ್ನು ಕೇಂದ್ರೀಕೃತಗೊಳಿಸಿ ಪಿತೃಪ್ರಧಾನ ಸಮಾಜವನ್ನು ಪ್ರಶ್ನಾತೀತವಾಗಿ ಸಂರಚಿಸಿತು. ಆದ್ದರಿಂದ ಸಮಾಜದಲ್ಲಿ ಅಧಿಕಾರ ಧರ್ಮದ

ನೆಲೆಯಲ್ಲಿಯೇ ಸಂರಚನೆಗೊಂಡಿದೆ ಎಂಬುದನ್ನು ಗಮನಿಸಿದಾಗ ಧರ್ಮ ಮತ್ತು ಪಿತೃಪ್ರಧಾನತೆ ಒಗ್ಗೂಡಿಕೆಯ ರಾಜಕಾರಣ ಅರ್ಥವಾಗುತ್ತದೆ. ತೋರಿಸುತ್ತದೆ. ಹಾಗಾಗಿ ಅಂಬೇಡ್ಕರ್ ಅವರು ವೈದಿಕ ಧರ್ಮವು ಭಾರತೀಯ ಅಸಮಾನತೆ ಮೂಲವೆಂದು ಭಾವಿಸುವಾಗ ಲಿಂಗಾಧಾರಿತ ಶ್ರೇಣೀಕರಣ ಸಮಸ್ಯೆಯನ್ನು ಬ್ರಾಹ್ಮಣ ಪಿತೃಪ್ರಧಾನತೆ ಒಳಗೆ ಪ್ರಸ್ತುತ ಗೊಳಿಸುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಅಂಬೇಡ್ಕರ್ ವೇದಕಾಲೀನ ಸಮಾಜವನ್ನು ತುಂಬಾ ಉದಾರವಾಗಿ ನೋಡುತ್ತಿರುವುದನ್ನು ಕಾಣಬಹುದು. ಅಂದರೆ ಲಿಂಗ, ಜಾತಿ ತಾರತಮ್ಯಕ್ಕೆ ಹೊರತಾದದ್ದು ಎಂದು ಪರಿಗಣಿಸುತ್ತಿರುವುದು ಗೊತ್ತಾಗುತ್ತದೆ. ಹಾಗಾಗಿಯೇ "ಸ್ವಜಾತಿ ವಿವಾಹ ವೇದಕಾಲದಲ್ಲಿ ಇರಲಿಲ್ಲ" (ಡಾ.ಬಾ.ಸಾ.ಅಂ.ಬ.ಭಾ: ೧೯೯೧, ಸಂ–೧, ಪು–೯) ಎನ್ನುವ ಮೂಲಕ ಇದು ಭಾರತೀಯರಿಗೆ ಹೊರಗಿನ ಸಂಗತಿ ಎನ್ನುವುದನ್ನು ಪ್ರಸ್ತುತ ಪಡಿಸುವ ಸಂದೇಶವೆ ವೇದಕಾಲೀನ ಸಮಾಜದಲ್ಲಿ ಜಾತಿಯ ಅಸ್ತಿತ್ವವನ್ನು ನಿರಾಕರಿಸುತ್ತದೆ. ಧರ್ಮಸಂಬಂಧದ ಕುರಿತು ಅಂಬೇಡ್ಕರ್ ಹೇಳಿಕೆಗಳೆಂದರೆ "ಅಂದಿನ ಧರ್ಮದಲ್ಲಿ ಮಹಿಳೆಯರ ಸಹಭಾಗಿತ್ವ ಇದ್ದು, ಅಥರ್ವಣವೇದದಲ್ಲಿ ಪ್ರಸ್ತಾಪಿದಂತೆ ಸ್ತ್ರೀ ಉಪನಯನ ಸಂಸ್ಕಾರಕ್ಕೆ ಅರ್ಹಳಾಗಿದ್ದಳು, ಬ್ರಹ್ಮಚರ್ಯವನ್ನು ಮುಗಿಸಿದ ನಂತರ ವಿವಾಹಕ್ಕೆ ಅರ್ಹಳಾಗಿರುತ್ತಿದ್ದಳು, ಶೃತಿಸೂತ್ರಗಳಿಂದ ಸ್ಪಷ್ಟಗೊಳ್ಳುವಂತೆ ಸ್ತ್ರೀವೇದ ಮಂತ್ರಗಳನ್ನು ಪುನರ್‌ಉಚ್ಚರಿಸುತ್ತಿದ್ದಳು ಮತ್ತು ಪಠಿಟಿಸುತ್ತಿದ್ದಳು, ಸ್ತ್ರೀ ಗುರುಕುಲಗಳಿಗೆ ಸೇರುತ್ತಿದ್ದಳು ಹಾಗೂ ದೇಶದ ಹಲವು ಶಾಖೆಗಳನ್ನು ಅಭ್ಯಾಸಿಸಿ ಮೀಮಾಂಸೆಯ ಪ್ರವೀಣಳಾಗುತ್ತಿದ್ದಳು. ಅಂದಿನ ಮಹಿಳೆ ಸಾರ್ವಜನಿಕ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದು, ಅತ್ಯಂತ ಕಠಿಣ ವಿಷಯಗಳಾದ ಧರ್ಮ, ತತ್ವಶಾಸ್ತ್ರ ಮತ್ತು ಆದಿ ಭೌತಿಕ ಶಾಸ್ತ್ರಗಳ ಬಗ್ಗೆ ಚರ್ಚಿಸುತ್ತಳೆಂಬ ಬಗೆಗೆ ಕಥೆಗಳನ್ನು : ಜನಕ ಮತ್ತು ಸುಲಭಾದ ನಡುವೆ ನಡೆದ ಸಾರ್ವಜನಿಕ ಚರ್ಚೆಯ ಕಥೆಗಳನ್ನು, ಯಜ್ಞವಲ್ಕ್ಯ ಮತ್ತು ಆಜ್ಞೆಯ ನಡುವಿನ; ಯಜ್ಞವಲ್ಕ ಮತ್ತು ಮೈತ್ರೇಯಿಯ ನಡುವಿನ ಮತ್ತು ಶಂಕರಾಚಾರ್ಯ ವಿಧರ್ಭಿಯರ ನಡುವಿನ ಸಂವಾದಗಳನ್ನು ಉಲ್ಲೇಖಿಸುವುದು ಕಂಡುಬರುತ್ತದೆ. ಈ ಮೂಲಕ ಭಾರತದ ಮಹಿಳೆಯರನ್ನು ವೇದಕಾಲೀನ ಸಮಾಜ ಒಂದು ಜೀವಿಯಂತೆ ನೋಡಲಾಗುತ್ತಿತ್ತು. ಪ್ರಕೃತಿ ದತ್ತವಾದ ಗೌರವ ಮತ್ತು ಮಹತ್ವ ಮಹಿಳೆಯರಿಗೆ ಲಭ್ಯವಾಗಿತ್ತು ಎಂದು ವ್ಯಾಖ್ಯಾನಿಸುತ್ತಾರೆ. (ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ–೪, ಪು–೬೨೩) ಹಾಗೆಯೇ ಸ್ವತಂತ್ರ ಭಾರತದಲ್ಲಿ ಸ್ತ್ರೀಯರಿಗೆ ದೊರೆಯಬೇಕಾದ ಹಕ್ಕಿಗೆ ಸಂಬಂಧಿಸಿದ "ಹಿಂದೂ ಕೋಡ್ ಬಿಲ್ಲಿನ" ಪ್ರಕರಣಗಳನ್ನು ಶಾಸ್ತ್ರೀಯ ದೃಷ್ಟಿಯಿಂದ ಚರ್ಚಿಸುವಾಗ ಸಹ ಅದರಲ್ಲಿ ಉಯ್ಯಾಲೆ ಮಾಡಿದ ಸತ್ತ ವ್ಯಕ್ತಿಯ ಆಸ್ತಿಪಾಸ್ತಿಗಳ ಹಂಚಿಕೆಗೆ ಸಂಬಂಧಿಸಿದ ನಿಯಮವನ್ನು ತಿಳಿಸುತ್ತಾ, ಪ್ರತಿಯೊಬ್ಬ ಮಗಳಿಗೆ ದೊರೆಯುವ ಆಸ್ತಿಯ ಭಾಗ ಪ್ರತಿಯೊಬ್ಬ

ಮಗನಿಗೆ ದೊರೆಯುವ ಆಸ್ತಿಯ ಭಾಗಕ್ಕೆ ಸರಿ ಸಮನಾಗಿರತಕ್ಕದ್ದು ಎಂಬುದಕ್ಕೆ ವೇದಕಾಲೀನ ಸಾಹಿತ್ಯದ ಗ್ರಂಥಗಳನ್ನು ಉಲ್ಲೇಖಿಸುತ್ತಾರೆ.

"ಋಗ್ವೇದದ (೨/೧೭/೭),(೩/೩೧/೧) ಇತ್ಯಾದಿ ಮಂತ್ರಗಳನ್ನು, ಮಹಾಭಾರತದ ಅನುಶಾಸನ ಪರ್ವದ(೮೮.೨೨) ವಿವರಣೆಯನ್ನು, ನಾರದ ಸ್ಮೃತಿಯಲ್ಲಿನ (೪೪/೪೭) ನಾರದ ಸಂಹಿತೆಯನ್ನು, ಬೃಹಸ್ಪತಿ ಸ್ಮೃತಿಯ(೨೬/೭೩೨) ಹೇಳಿಕೆಗಳನ್ನು ನೀಡಿ ಗಾರ್ಗಿ, ಸುಲಭಾ ಮೊದಲಾದವರಂತೆ ಜೀವನ ಪರ್ಯಂತ ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುತ್ತಾ ಸಮಾಜದ ಮತ್ತು ರಾಷ್ಟ್ರದ ಸೇವೆಗೆ ತನ್ನನ್ನು ಸಮರ್ಥಿಸಿಕೊಂಡಿರುವಂತಹ ಹೆಣ್ಣುಮಕ್ಕಳಿಗೆ ತಂದೆಯ ಸಂಪತ್ತಿನ ಮೇಲೆ ಗಂಡುಮಕ್ಕಳಿಗಿರುವಂತದ್ದೇ ಹಕ್ಕು ಇರುತ್ತದೆ. ಹಾಗೂ ಅವರಿಗೆ ತಮ್ಮ ಜೀವನ ನಿರ್ವಹಣೆಗಾಗಿ ಮಗನಿಗೆ ದೊರೆಯುವಷ್ಟೇ ಭಾಗದ ಆಸ್ತಿ ದೊರೆಯಬೇಕಾಗಿರುತ್ತದೆ. ಶಾರೀರಕ ದೋಷಗಳಿಂದಾಗಿ ಅವಳು ಅವಿವಾಹಿತಯಾಗಿಯೇ ಇರಬೇಕಾಗಿ ಬಂದಿದ್ದರು ತಂದೆಯ ಆಸ್ತಿಯಲ್ಲಿ ಅಂತಹ ಮಕ್ಕಳಿಗೆ ಪಾಲು ದೊರೆಯ ಬೇಕಾಗಿರುತ್ತದೆ." (ಡಾ.ಬಾ.ಸಾ.ಅಂ.ಬ.ಭಾ: ೨೦೦೪, ಸಂ-೧೪.೨, ಪು-೭೮೧)

"ತಂದೆಯ ಏಕೈಕ ಸಂತಾನವಾಗಿರುವ ಹೆಣ್ಣುಮಗಳಿಗೆ ಆಕೆಯ ತಾಯಿ ಬದುಕಿದ್ದಲ್ಲಿ, ತಂದೆಯ ಆಸ್ತಿಯ ಮೇಲೆ ಸಮಾನವಾದ ಹಕ್ಕಿರುತ್ತದೆ. ಹಾಗಿಲ್ಲವಾದಲ್ಲಿ ಅಂದರೆ ತಾಯಿ ತೀರಿಕೊಂಡಿದ್ದಲ್ಲಿ ಪೂರ್ಣ ಹಕ್ಕು ಆಕೆಯದೇ ಆಗಿರುತ್ತದೆ." (ಡಾ.ಬಾ.ಸಾ.ಅಂ.ಬ.ಭಾ: ೨೦೦೪, ಸಂ-೧೪.೨, ಪು-೭೮೫)

"ಅವಿವಾಹಿತೆಯಾಗಿರುವ ಕನ್ಯೆಯರಿಗೆ ತಂದೆಯ ಆಸ್ತಿಯಲ್ಲಿ ಸೋದರರ ಪಾಲಿನ ನಾಲ್ಕನೇ ಒಂದು ಭಾಗದಷ್ಟು ಆಸ್ತಿ ದೊರೆಯಬೇಕೆಂಬುದನ್ನು ಕ್ಯಾತಾಯನಿ, ದೇವಲ, ವಿಷ್ಣುರುದ್ರ, ಹರಿತ, ಮೊದಲಾದ ಬಹುಮಟ್ಟಿನ ಸ್ಮೃತಿಕಾರರು ಒಪ್ಪಿದ್ದಾರೆ. ಶುಕ್ರಚಾರ್ಯರು ಕನ್ಯೆಯರಿಗೆ ಗಂಡುಮಕ್ಕಳಿಗೆ ದೊರೆಯುವ ಅರ್ಧಭಾಗದಷ್ಟು ಪಿತ್ರಾರ್ಜಿತ ಆಸ್ತಿ ದೊರೆಯಬೇಕೆಂಬ ನಿಲುವಿನ ಪರವಾಗಿದ್ದಾರೆ ಎಂದು ಹೇಳುತ್ತಾರೆ. (ಡಾ.ಬಾ.ಸಾ.ಅಂ.ಬ.ಭಾ: ೨೦೦೪, ಸಂ-೧೪.೨, ಪು-೭೮೬,೮೭)

ವಿವಾಹಿತರಾಗಿರುವಂತ ಹೆಣ್ಣುಮಕ್ಕಳಿಗೂ ತಂದೆಯ ಆಸ್ತಿಯ ಮೇಲೆ ಹಕ್ಕು ಇರತಕ್ಕದ್ದು ಇತ್ಯಾದಿ ಆಧಾರಗಳನ್ನು ಪ್ರಸ್ತುತ ಪಡೆಸುತ್ತಾರೆ. ಈ ಎಲ್ಲಾ ಹೇಳಿಕೆಗಳನ್ನು ಗಮನಿಸಿದಾಗ, ಅಂಬೇಡ್ಕರ್ ಭಾರತೀಯರಲ್ಲಿರುವ ಜಾತಿ, ಲಿಂಗ ಅಸಮಾನತೆ ಪೌರಾತ್ಯ ಜನಸಮೂಹದಿಂದ ಆಮದಾದ ಸರಕು ಆಗಿದೆ ಎಂದು ನಿರೂಪಿಸುವುದು ಕಂಡುಬರುತ್ತದೆ. ಇದು ವಸಾಹತುಷಾಹಿ ಚಿಂತನಾಕ್ರಮದ ಬಹುದೊಡ್ಡ ಪ್ರಭಾವವನ್ನು ತೋರಿಸುತ್ತದೆ. ಈ ಪ್ರಭಾವಕ್ಕೊಳಗಾಗುವ ಅಂಬೇಡ್ಕರ್ ಭಾರತೀಯ ಸಂಸ್ಕೃತಿಯ ಬಗೆಗೆ ಉಂಟಾಗುವ ಗೌರವ, ಭಾವುಕತೆಗಳು ಆತನ

ಕಾಲದಲ್ಲಿರುವ ಅಗತ್ಯತೆಯನ್ನ ಪ್ರಸ್ತುತ ಪಡಿಸುತ್ತವೆ. ಅಂದರೆ ವೇದಕಾಲೀನ ಸಮಾಜವು ಲಿಂಗ ಜಾತಿ ತಾರತಮ್ಯ ರಹಿತವಾಗಿರುವುದನ್ನು ಅಷ್ಟೇ ಪ್ರಸ್ತುತ ಪಡಿಸಿರುವುದಿಲ್ಲ ಲಿಂಗಾಧಾರಿತ ಪಾತ್ರಗಳನ್ನು ಪಿತೃಪ್ರಧಾನ ಗುಣ ಲಕ್ಷಣಗಳನ್ನು ಪರೋಕ್ಷವಾಗಿ ಸಮರ್ಥಿಸಿಕೊಳ್ಳುವುದೇ ಆಗಿವೆ. ಇದನ್ನು ಇನ್ನೊಂದು ವಿಧಾನದಲ್ಲಿ ಹೇಳುವುದಾದರೆ, ವೇದಕಾಲೀನ ಸಮಾಜ ಆ ಕುರಿತ ವೈದಿಕ ಧರ್ಮವನ್ನು ಕಪ್ಪು-ಬಿಳುಪು, ಹೆಣ್ಣು-ಗಂಡು, ಭಾವುಕತೆ-ವೈಚಾರಿಕತೆ ಎಂಬ ನೆಲೆಯಲ್ಲಿನ ವರ್ಗೀಕರಣವು, ಪ್ರಧಾನ ಅಧೀನ ಪರಿಕಲ್ಪನೆಗಳನ್ನು ಸಮರ್ಥಿಸುವಂತಾಗಿದೆ. ಇದು ಆದಿವಾಸಿ ನಂತರದ ಸಮಾಜವನ್ನು ಅಂದರೆ ವೈದಿಕ ಧರ್ಮವನ್ನು ತಾರತಮ್ಯದಿಂದ ಕೂಡಿದ ಅಸಮಾನತೆಯ ಸಮಾಜ ಎಂಬುದನ್ನು ನಿರ್ಧರಿಸುತ್ತದೆ. ಅಲ್ಲದೇ ಅಸಮಾನತೆಯ ತಳಪಾಯದಲ್ಲಿ ವೈದಿಕ ಧರ್ಮ ಪ್ರಸ್ತುತಗೊಂಡಿರುವುದನ್ನು ತೋರಿಸುತ್ತದೆ.

### ೪.೨. ದೇವಿಯರು ; ಹಿಂದಿನ ಅಜೆಂಡಾಗಳು

ವೈದಿಕ ಸಮಾಜವು ಹುಟ್ಟು ಹಾಕಿದ ಅನಿಷ್ಟಗಳನ್ನು ಉಗ್ರವಾಗಿ ಖಂಡಿಸುವ ಅಂಬೇಡ್ಕರ್ ಸ್ತ್ರೀಯರ ವಿಚಾರ ಬಂದಾಗ ವೇದಕಾಲೀನ ಸಂದರ್ಭದೊಂದಿಗೆ ಮೃದುವಾಗಿದ್ದಾರೆಯೇ ಎಂಬ ಪ್ರಶ್ನೆಯನ್ನು ಪರಿಶೀಲಿಸುವ ಸಂದರ್ಭದಲ್ಲಿ ಇನ್ನು ಕೆಲವು ಬರಹಗಳನ್ನು ಅಂದರೆ 'ದೇವರುಗಳನ್ನು ಪದಾಚ್ಯುತಿಗೊಳಿಸಿ, ದೇವಿಯರನ್ನೇಕೆ ಮೇಲೇರಿಸಿದರು?' ಎಂಬ ಲೇಖನವನ್ನು ಗಮನಿಸಲೇಬೇಕು.

ಈ ಲೇಖನದಲ್ಲಿ ಪ್ರಪಂಚದ ನಾನಾ ಸಮುದಾಯದಲ್ಲಿ ದೇವರ ಆರಾಧಾನೆ ಸಾಮಾನ್ಯ ಸಂಗತಿ. ಆದರೆ ದೇವಿಯರ ಆರಾಧನೆ ನಿರಾಧಾರ ಏಕೆಂದರೆ ದೇವರು ಮದುವೆಯಾಗುವುದಿಲ್ಲ ಎಂಬುದಕ್ಕೆ ಏಸುವನ್ನು ಉದಾರಿಸುತ್ತಾರೆ. ಇದರಿಂದ ಭಾರತೀಯ ಸಮಾಜವನ್ನು ಪ್ರತ್ಯೇಕಿಸಿ, ಹಿಂದೂಗಳ ಸಂದರ್ಭದಲ್ಲಿ ದೇವರು, ದೇವಿಯರ ಪೂಜೆ ಇರುವುದನ್ನು ಒಪ್ಪಿಕೊಳ್ಳುತ್ತಾರೆ. ಸರಸ್ವತಿ, ಲಕ್ಷ್ಮೀ, ದುರ್ಗಾ, ಪಾರ್ವತಿ, ಕಾಳಿ, ಇತ್ಯಾದಿಗಳನ್ನು ಹೆಸರಿಸುತ್ತಾರೆ. ಈ ಎಲ್ಲರೂ ಬೇರೆ ಬೇರೆ ದೇವಿಯರಲ್ಲ ಒಂದೇ ದೇವಿಯ ಬೇರೆ ಬೇರೆ ಹೆಸರುಗಳಿವು ಎಂದು ಹೇಳುವ ಮೂಲಕ ಪಾರ್ವತಿ ಮತ್ತು ದುರ್ಗೆಯರನ್ನು ಎರಡು ಮುಖ್ಯ ದೇವಿಯರಾಗಿ ವರ್ಗೀಕರಿಸಿಕೊಂಡು ಪಾರ್ವತಿದೇವಿಯನ್ನು ವೈದಿಕ ದೇವಿಯಾಗಿ, ದುರ್ಗಾದೇವಿಯನ್ನು ಪೌರಾಣಿಕ ದೇವಿಯಾಗಿ ಗುರುತಿಸಿಕೊಳ್ಳುತ್ತಾರೆ. ಈ ಮೂಲಕವೇ ವೈದಿಕ ಮತ್ತು ಪೌರಾಣಿಕ ನಡುವಿನ ವ್ಯತ್ಯಾಸ ಮತ್ತು ವೈರುಧ್ಯಗಳನ್ನು ಪ್ರಸ್ತುತ ಪಡಿಸುತ್ತಾರೆ. ಅಂದರೆ "ವೈದಿಕ ದೇವಿಯರ ಪೂಜೆ, ಕೇವಲ ಹೆಸರಿಗಷ್ಟೇ ಪೂಜೆ, ದೇವತೆಗಳ ಹೆಂಡಂದಿರು ಎಂಬ ಒಂದೇ ಕಾರಣದಿಂದ ಅವರನ್ನು ಪೂಜಿಸಲಾಗುತ್ತಿತ್ತು. ಆದರೆ ಪೌರಾಣಿಕ ದೇವಿಯರ ಪೂಜೆಗೆ ಬೇರೆಯೇ ಆದ ಕಾರಣವಿತ್ತುಜ. ಅವರಿಗೆ ತಮ್ಮ ಯೋಗ್ಯತೆಯಿಂದಾಗಿ ಪೂಜೆಯನ್ನು

ಮಾಡಿಸಿಕೊಳ್ಳುವ ಹಕ್ಕಿತ್ತೇ ಹೊರತ್ತು ಅವರು ದೇವರುಗಳ ಹೆಂಡಂದಿರೆಂಬ ಕಾರಣದಿಂದಲ್ಲ. ವೈದಿಕ ದೇವಿಯರು ಎಂದು ರಣರಂಗಕ್ಕೆ ಹೋಗಲಿಲ್ಲ. ಮತ್ತು ಯಾವ ಶೌರ್ಯದ ಕೆಲಸವನ್ನು ಮಾಡಲಿಲ್ಲ ಎಂಬುದೇ ಈ ವ್ಯತ್ಯಾಸಕ್ಕೆ ಕಾರಣ. ಆದರೆ ಪೌರಾಣಿಕ ದೇವಿಯರು ರಣರಂಗಕ್ಕೆ ಹೋದರಲ್ಲದೇ ಮಹಾಶೌರ್ಯದ ಕೆಲಸಗಳನ್ನು ಮಾಡಿದರು. ಅವರಿಗೆ ಸಂದ ಪೂಜೆ ಹೆಸರಿಗಷ್ಟೇ ಮಾಡಿದ ಪೂಜೆಯಲ್ಲ. ಅವರ ಪೂಜೆಗೆ ಅವರ ಶೌರ್ಯದ ಮತ್ತು ಗಮನಾರ್ಹ ಕೆಲಸಗಳ ಆಧಾರವಿತ್ತು ಎಂಬುದಕ್ಕೆ ಮಾರ್ಕಂಡೇಯ ಪುರಾಣದ ದುರ್ಗಾ ಮತ್ತು ಅಸುರರ ನಡುವಿನ ಯುದ್ಧದ ಪ್ರಸಂಗಗಳನ್ನು ಸಾಕ್ಷಿಕರಿಸುತ್ತಾರೆ." (ಡಾ.ಬಾ.ಸಾ.ಅಂ.ಬ.ಭಾ: ೧೯೯೫, ಸಂ-೪, ಪು-೧೨೯)

ಈ ಹಿನ್ನಲೆಯಲ್ಲಿ ವೈದಿಕ ಐಡಿಯಾಲಿಜಿಗೆ ತನ್ನದೇ ಆದ ಪ್ರಶ್ನೆಗಳನ್ನು ಮುಂದಿಡುತ್ತಾರೆ. ವೈದಿಕ ಸಾಹಿತ್ಯ ತುಂಬೆಲ್ಲಾ ರಾಕ್ಷಸರೊಡನೆ ಮಾಡಿದ ಯುದ್ಧಗಳ ಪ್ರಸ್ತಾಪವಿದೆ. ಆದರೆ ರಾಕ್ಷಸರೊಡನೆ ಮಾಡಿದ ಯುದ್ಧಗಳೆಲ್ಲ ಕೇವಲ ದೇವತೆಗಳೇ ಇದ್ದು. ವೈದಿಕ ದೇವಿಯರು ಅವುಗಳಲ್ಲಿ ಯಾವೊಂದರಲ್ಲೂ ಭಾಗಿಯಾಗಿವುದುಕಂಡು ಬರುವುದಿಲ್ಲ. ಈ ವಿಷಯದಲ್ಲಿ ಪೌರಾಣಿಕ ದೇವಿಯರು ಭಿನ್ನವಾಗಿದ್ದಾರೆ. ವೈದಿಕ ಕಾಲಗಳಲ್ಲಿದ್ದಂತೆ ಪೌರಾಣಿಕ ಕಾಲಗಳಲ್ಲೂ ಅಸುರರೊಡನೆ ಯುದ್ಧಗಳಾದವು ಆದರೆ ಒಂದು ವ್ಯತ್ಯಾಸವಿದೆ. ವೈದಿಕ ಕಾಲದಲ್ಲಾದ ಯುದ್ಧಗಳಲ್ಲಿ, ಸೆಣಸಲು ದೇವರುಗಳನ್ನು ಬಿಟ್ಟರೆ, ಪೌರಾಣಿಕ ಕಾಲದಲ್ಲಾದ ಯುದ್ಧಗಳಲ್ಲಿ ಸೆಣೆಸಲು ದೇವಿಯರನ್ನು ಬಿಡಲಾಯಿತು. ವೈದಿಕ ಕಾಲದಲ್ಲಿ ದೇವರುಗಳು ಮಾಡಿದುದ್ದನ್ನು ಪೌರಾಣಿಕ ದೇವಿಯ ಏಕೆ ಮಾಡಲಾಯಿತು. ಬ್ರಹ್ಮ,ವಿಷ್ಣು, ಮಹೇಶ್ವರ ಎಂಬ ದೇವರುಗಳು, ಪೌರಾಣಿಕ ಕಾಲದಲ್ಲೂ ಇದ್ದರು. ರಾಕ್ಷಸರನ್ನು ಎದುರಿಸಲು ಅವರಿದ್ದರು, ದೇವಿಯರನ್ನು ಈ ಕೆಲಸಕ್ಕೆ ಅವರನ್ನು ಏಕೆ ನೇಮಿಸಲಾಯಿತು.?" (ಡಾ.ಬಾ.ಸಾ.ಅಂ.ಬ.ಭಾ: ೨೦೦೪, ಸಂ-೧೪,೨, ಪು-೧೩೪)

"ಎರಡನೇ ಪ್ರಶ್ನೆಯೆಂದರೆ ದೇವರುಗಳನ್ನು ಬೇರ್ಪಡಿಸಿ ದೇವಿಯರ ಪೂಜೆಯನ್ನೇ ಏಕೆ ಪ್ರಾರಂಭಿಸಲಾಯಿತು ಎಂಬುದನ್ನು ತರ್ಕದ ನೆಲೆಯಿಂದ ಪರಿಶೀಲಸುವುದಾದರೆ, ಪ್ರತಿಯೊಬ್ಬ ದೇವನಿಗೂ ಶಕ್ತಿ ಇರುವುದಾದರೆ, ವೈದಿಕ ದೇವರೆಲ್ಲರಿಗು ಶಕ್ತಿ ಇರಬೇಕಾಗಿತ್ತು. ಆದರೆ ಈ ಸಿದ್ಧಾಂತವನ್ನು ವೈದಿಕ ದೇವರುಗಳು ತಮ್ಮ ಹೆಂಡತಿಯರಿಗೇಕೆ ಅನ್ವಯಿಸಲಿಲ್ಲ.? ಐತಿಹಾಸಿಕ ದೃಷ್ಟಿಯಿಂದ ನೋಡಿದರೆ ಪೌರಾಣಿಕ ದೇವರುಗಳಿಗೆ ಶಕ್ತಿ ಇತ್ತು ಎಂಬುದಕ್ಕೆ ಯಾವ ಸಮರ್ಥನೆಯೂ ಇಲ್ಲ. ಆದುದರಿಂದಲೇ ಪ್ರಾಯಶಃ ದೇವರು ರಾಕ್ಷಸರಿಂದ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲಿಲ್ಲವೆಂದು ಕಾಣುತ್ತದೆ. ಹಾಗಾಗಿ ಅವರು ತಮ್ಮ ಹೆಂಡತಿಯನ್ನು ರಕ್ಷಣೆಗಾಗಿ ಯಾಚಿಸಬೇಕಾಯಿತು. ಹಾಗಾಗಿ ಇಂತಹ ಹೇಡಿ ದೇವರುಗಳಿಗೆ ಶಕ್ತಿ ಇರಲು

ಹೇಗೆ ಸಾಧ್ಯ ಅವರಲ್ಲಿಯೇ ಅದು ಇಲ್ಲದಿದ್ದಾಗ ಅದನ್ನು ತಮ್ಮ ಹೆಂಡತಿಯರಿಗೆ ಕೊಡಲು ಹೇಗೆ ಸಾಧ್ಯ? ದೇವಿಯರಿಗೆ ಶಕ್ತಿ ಇರುವ ಕಾರಣಕ್ಕಾಗಿಯೆ ಅವರನ್ನು ಪೂಜಿಸಬೇಕು ಎಂದು ಹೇಳುವುದು 'ವೈದಿಕ ಧರ್ಮ ಸಂಬಂಧದಲ್ಲಿ ಇದು ಒಂದು ಒಗಟು ಆಗಿದೆ. ಅಷ್ಟೇ ಅಲ್ಲ, ಅದು ಒಂದು ವಿರೋಧಭಾಸವು ಆಗಿದೆ. ಆದ್ದರಿಂದ ಶ್ರೇಷ್ಟತೆಗೆ ಸಂಬಂಧಿಸಿದ ಹೊಸಧೋರಣೆಯೊಂದನ್ನು ಮಾರುಕಟ್ಟೆಗೆ ತರಲೋಸ್ಕರ ಬ್ರಾಹ್ಮಣರು ದೇವಿಯರ ಪೂಜೆಯನ್ನು ಪ್ರಾರಂಭಿಸಿ ದೇವರುಗಳನ್ನು ನಿಕೃಷ್ಟಗೊಳಿಸಿರಬಹುದು." ಎಂದು ಹೇಳಬಹುದು. (ಡಾ.ಬಾ.ಸಾ.ಅಂ.ಬ.ಭಾ: ೨೦೦೪, ಸಂ-೧೪,೨, ಪು-೧೩೬,೧೩೭)

ಇದು ಇತಿಹಾಸದ ಉದ್ದಕ್ಕೂ ವೈದಿಕ ಸಂಸ್ಕೃತಿಯು ತನ್ನ ಯಜಮಾನ್ಯವನ್ನು ಉಳಿಸಿ ಬೆಳೆಸಿಕೊಳ್ಳುವುದಕ್ಕೆ ಅನುಸರಿಸಿದ ಸಾಂಸ್ಕೃತಿಕ ಮಾದರಿಯೊಂದನ್ನು ಪ್ರಸ್ತುತ ಪಡಿಸುತ್ತದೆ. ಹಿಂದೂ ಸಮಾಜದ ಮಹಿಳೆಯು ಹೊಂದಿದ್ದ ಲೌಕಿಕಾಧಿಕಾರಗಳು ಒಂದೊಂದಾಗಿ ನಿಷೇದಗೊಳ್ಳುತ್ತಾ ಬಂದದ್ದು ಅದಕ್ಕೆ ಬದಲಾಗಿ ಆಲೌಕಿಕ ನೆಲೆಯಲ್ಲಿ ಕಾಯ್ದಿಡುವ, ಸಶಕ್ತಿಗೊಳಿಸುವ ಪ್ರಯತ್ನಗಳು ನಡೆದುದರ ಕುರಿತು ವಿವರಿಸುತ್ತಾರೆ. ಬ್ರಾಹ್ಮಣ್ಯವು ಮೊದಲುಗೊಂಡು ದೇವರನ್ನು ಆರಾಧಿಸುತ್ತಿದ್ದು, ಕ್ರಮೇಣ ಅವರನ್ನು ಕೈಬಿಟ್ಟು ವೈದಿಕೇತರ ಸಮಾಜದ ಮಾತೃ ದೇವತೆಗಳನ್ನು ಪ್ರಧಾನವಾಗಿಸಿಕೊಂಡರು ಅಥವಾ ಅವರನ್ನು ತಮ್ಮ ಗಂಡು ದೈವಗಳ ಹೆಂಡರಾಗಿಸಿಕೊಂಡಿತು. ಈ ದೈವ ಸಂಕರದ ಮೂಲಕ ವೈದಿಕೇತರ ಸಮಾಜದ ಮೇಲೆ ಹಿಡಿತ ಸಾಧಿಸಲು ಅವಕಾಶ ಏರ್ಪಡಿಸಿಕೊಂಡಿದ್ದನ್ನು ಪ್ರಸ್ತುತ ಪಡಿಸುತ್ತಾರೆ. ಈ ಮೂಲಕವೇ ಅಂಬೇಡ್ಕರ್ ವೈದಿಕ ಸಮಾಜದ ಕರಾಳ ಸ್ವರೂಪವನ್ನು ಬಹಿರಂಗಪಡಿಸಲು ಯತ್ನಿಸಿದರು. ಈ ಸಮಾಜವು ಹೆಣ್ಣು, ಅಸ್ಪೃಶ್ಯದ ವಿಷಯದಲ್ಲಿ ಹೇಗೆ ಭೇದರಾಜಕಾರಣವನ್ನು ಅನುಸರಿಸುತ್ತದೆ ಎಂಬುದನ್ನು ತಿಳಿಪಡಿಸುತ್ತಾ ಅದರ ವಿರುದ್ಧದ ಪ್ರತಿಕ್ರಾಂತಿಗಾಗಿ ಬೌದ್ಧಿಕ ಚಿಂತನೆಯನ್ನು, ಸಾಮಾಜಿಕ ಆಂದೋಲನದ ಮೂಲಕ ಪ್ರಯೋಗಕ್ಕಿಳಿಸುವುದು ಪ್ರಸ್ತುತ ಅಗತ್ಯವೆಂಬುವನ್ನು ತಿಳಿಸುತ್ತದೆ.

ಒಟ್ಟಿನಲ್ಲಿ ಅಂಬೇಡ್ಕರ್ ಭಾರತೀಯ ಸಮಾಜದ ಅಸಮಾನತೆಯಲ್ಲಿ ವೈದಿಕ ಧರ್ಮದ ಮಹತ್ವವನ್ನು, ಹೊಣೆಗಾರಿಕೆಯನ್ನು ವಿವರಿಸುತ್ತಾರೆ. ಆಗ ವೇದಕಾಲೀನ ಸಮಾಜ ಲಿಂಗ, ಜಾತಿ ತಾರತಮ್ಯಕ್ಕೆ ಹೊರತಾದುದ್ದು ಎಂಬುದನ್ನು ಪ್ರಸ್ತುತ ಪಡಿಸುತ್ತಾರೆ. ಈ ಎರಡು ಸಂಗತಿಗಳು ಲಿಂಗಾಧಾರಿತ ಶ್ರೇಣೀಕರಣ ಹಾಗೂ ವೈದಿಕ ಪಿತೃಪ್ರಧಾನತೆಯೊಂದಿಗೆ ಗುರುತು ಗೊಳ್ಳುವುದಲ್ಲದೇ ವೇದಕಾಲೀನ ಪಿತೃಪ್ರಧಾನತೆಯ ಪ್ರಶ್ನೆಯನ್ನು ತನ್ನ ಕಾಲದ ಸಂದರ್ಭದಲ್ಲಿ ಕೈಬಿಡುವುದನ್ನು ಕಾಣುತ್ತೇವೆ.

## ಉಲ್ಲೇಖಗಳು


೦೧. ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು-೧೨೯

೦೨. ಜಾರ್ಜ್ ಸ್ಟಿಟ್‌ಲೀಜ್; ೨೦೦೬, World is Plat, Oxpord Press, p-೪೦

೦೩. ಡಾ.ಬಾ.ಸಾ.ಅಂ.ಬ.ಭಾ: ೧೯೯೪, ಸಂ-೩, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು-೬೯

೦೪, ಅದೇ, ಪು-೩೩

೦೫, ಅದೇ, ಪು-೪೯೧,೬೦೦

೦೬, ಅದೇ, ಪು-೯,೨೧

೦೭, ಅದೇ, ಪು-೩೫,೩೬

೦೮, ಅದೇ, ಪು-

೦೯, ಅದೇ, ಪು-೩೭

೧೦, ಅದೇ, ಪು-೬೧೬,೬೧೭

೧೧, ಅದೇ, ಪು-೬೧೭

೧೨, ಅದೇ, ಪು-೬೧೭

೧೩, ಅದೇ, ಪು-೬೧೮

೧೪, ಅದೇ, ಪು-೬೧೯

೧೫, ಅದೇ, ಪು-೬೨೦

೧೬, ಅದೇ. ಪು-೬೧೭

೧೭, ಅದೇ, ಪು-೬೨೧

೧೮. ಡಾ.ಬಾ.ಸಾ.ಅಂ.ಬ.ಭಾ: ೧೯೯೧, ಸಂ-೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು.೯

೧೯. ಡಾ.ಬಾ.ಸಾ.ಅಂ.ಬ.ಭಾ: ೧೯೯೫, ಸಂ-೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು-೧೨೯

೨೦. ಡಾ.ಬಾ.ಸಾ.ಅಂ.ಬ.ಭಾ: ೨೦೦೪, ಸಂ-೧೪, ಭಾಗ-೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು-೭೮೧

೨೧, ಅದೇ, ಪು-೭೮೫

೨೨, ಅದೇ, ಪು-೭೮೬, ೭೮೭

೨೩, ಅದೇ, ಪು-೧೩೪

೨೪, ಅದೇ, ಪು-೧೩೬, ೧೩೭

ಅಧ್ಯಾಯ–ಐದು

# ಮಹಿಳೆ ಮತ್ತು ಅಧಿಕಾರ ವ್ಯವಸ್ಥೆ; ಅಂಬೇಡ್ಕರ್ ಸಂದರ್ಭ

## ಅಧ್ಯಾಯ–ಐದು

# ಮಹಿಳೆ ಮತ್ತು ಅಧಿಕಾರ ವ್ಯವಸ್ಥೆ; ಅಂಬೇಡ್ಕರ್ ಸಂದರ್ಭ

ಪ್ರಸ್ತುತ ಅಧ್ಯಾಯವು ಮಹಿಳೆ ಸಂಬಂಧಿಸಿದಂತೆ ಅಧಿಕಾರ ವ್ಯವಸ್ಥೆಯ ಅಂಬೇಡ್ಕರ್ ಗ್ರಹಿಕೆಗಳನ್ನು ಪ್ರಸ್ತುತಪಡಿಸುತ್ತದೆ. ಅಂದರೆ ಸ್ವತಂತ್ರ ಪೂರ್ವ ಮತ್ತು ಸ್ವತಂತ್ರ ನಂತರ ಭಾರತದ ಅಭಿವೃದ್ಧಿಯಲ್ಲಿ ಸ್ತ್ರೀ ಪುರುಷ ನಿರ್ವಹಣೆಯ ಅಧಿಕಾರ ವಲಯದ ಪಾತ್ರ ಮಹತ್ವದ್ದು, ಶತಶತಮಾನಗಳಿಂದ ಪಿತೃಪ್ರಧಾನತೆಯು ಮಹಿಳೆ ಮತ್ತು ದಲಿತ ಸಮುದಾಯಗಳು ಈ ವಲಯದಿಂದ ನಿರಾಕರಿಸಲ್ಪಟ್ಟದ್ದಿತ್ತು. ಅದರ ಸಹಭಾಗಿತ್ವ ಬಯಸಿ ಅನೇಕ ಹೋರಾಟಗಳ ಸಂಘಟಿತವಾದವು. ಇಂತಹ ಸಂಕೀರ್ಣ ಸಂದರ್ಭ ತಳಸಮುದಾಯದ ಕೆಲವು ಪ್ರತಿನಿಧಿಗಳಿಗೆ ಭಾರತದ ಅಧಿಕಾರ ವ್ಯವಸ್ಥೆಯಲ್ಲಿ ಅವಕಾಶ ಕಲ್ಪಿತವಾದವು. ಅಂತಹ ಜವಾಬ್ದಾರಿಯುತ ಹುದ್ದೆಗಳನ್ನು ನಿರ್ವಹಿಸುತ್ತಿದ್ದವರಲ್ಲಿ ಅಂಬೇಡ್ಕರ್ ಗಮನಿಸಲೇಬೇಕಾದರು. ಆ ಸಂದರ್ಭದಲ್ಲಿ ಮಹಿಳೆ ಸಂಗತಿಗಳ ಬಗೆಗಿನ ಅಂಬೇಡ್ಕರ್ ಗ್ರಹಿಕೆಗಳನ್ನು ಕೃಢೀಕರಿಸಿ ಮಹಿಳೆ ನೆಲೆಯಿಂದ ಪರಿಶೀಲಿಸುವುದು ಈ ಅಧ್ಯಾಯನದ ಉದ್ದೇಶವಾಗಿದೆ. ಇದನ್ನು ಮೂರು ಭಾಗಗಳಲ್ಲಿ ಚರ್ಚಿಸಲಾಗುವುದು.

### ೫.೧ ಮಹಿಳೆ ಮತ್ತು ಸಂವಿಧಾನತ್ಮಾಕ ಹಕ್ಕುಗಳು

ಮಹಿಳೆ ಮತ್ತು ಜಾತಿ ವಿಷಯಗಳು ಹಲವು ತಿದ್ದುಪಡೆಯನ್ನು ಪಡೆದವು. ಅವುಗಳೇ ಈ ಅಧ್ಯಾಯದ ವಸ್ತುವಾಗಿವೆ. ವಸಾಹತುಶಾಹಿ ಅನುಭವ, ಆಧುನಿಕ ಶಿಕ್ಷಣದಿಂದ ಹೊಸ ತಿಳುವಳಿಕೆ ಪಡೆದುಕೊಂಡ ಭಾರತೀಯ ಸಮಾಜ ಸುಧಾರಕರು ಭಾರತದ ಬೇರೆ ಬೇರೆ

ಭಾಗಗಳಲ್ಲಿ ಸ್ತ್ರೀ ಸುಧಾರಣೆ ಮತ್ತು ಅಸ್ಪೃಶ್ಯತಾ ನಿವಾರಣೆ ಕುರಿತು ಹಲವು ಕಾರ್ಯಕ್ರಮಗಳನ್ನು ಕೈಗೊಂಡಿರುವುದು ಗಮನಾರ್ಹವಾಗಿದೆ. ಆದರೆ ರಾಷ್ಟ್ರೀಯ ಚಳುವಳಿ ತೀವ್ರತೆ ಮತ್ತು ರಾಜಕೀಯ ಸ್ವತಂತ್ರ ತುರ್ತು ಅವುಗಳನ್ನು ಪಕ್ಕಕ್ಕೆ ಸರಿಸಿತು. ಅಲ್ಲದೆ ಸ್ವಾತಂತ್ರ ಆಂದೋಲನವನ್ನು ತನ್ನ ಪ್ರಾಥಮಿಕ ಆದ್ಯತೆಯನ್ನಾಗಿ ಸ್ವೀಕರಿಸಿತು. ಇಂತಹ ಸಂಕೀರ್ಣ, ಸಂದಿಗ್ಧ ಸ್ಥಿತಿಯಲ್ಲಿ ಜಾತಿ ವಿರುದ್ಧ ಹೋರಾಟವನ್ನು ಅಂಬೇಡ್ಕರ್ ಪ್ರಬಲಗೊಳಿಸಿದರು.

ಈ ಕಡೆ ಸಾರ್ವತ್ರಿಕ ಚುನಾವಣೆಯಲ್ಲಿ ಆಯ್ಕೆಗೊಂಡ ಸದಸ್ಯರು ಸರ್ಕಾರ ರಚಿಸಿದರು. ಹಾಗೆಯೇ ಅವರು ಸ್ವತಂತ್ರ ಭಾರತವು ಸುವ್ಯವಸ್ಥಿತವಾಗಿ ನಡೆಯಲು ಅಗತ್ಯವಾದ ಭಾರತ ಸಂವಿಧಾನ ರಚನೆಗೆ ಎಲ್ಲ ಪೂರ್ವ ತಯಾರಿ ಮಾಡಿಕೊಳ್ಳುತ್ತಿದ್ದರು. ಇದರ ಆಹ್ವಾನ ಅಂಬೇಡ್ಕರ್‌ಗೂ ಬಂದಿತು. ಸ್ವಾತಂತ್ರ ಚಳುವಳಿಯ ಪ್ರಮುಖ ನಾಯಕರೊಂದಿಗಿನ ಹಲವಾರು ಭಿನ್ನಾಭಿಪ್ರಾಯಗಳ ನಡುವೆಯೇ ಅಂಬೇಡ್ಕರ್ ಅದಕ್ಕೆ ಸ್ಪಂದಿಸಿದರು. ಬ್ರಿಟಿಷ್ ದಾಸ್ಯದಿಂದ ಮುಕ್ತಗೊಂಡ ಭಾರತ ಸ್ವಾತಂತ್ರ್ಯ ಪೂರ್ವದ ಕನಸುಗಳನ್ನು ನನಸಾಗಿಸುವ ಹಿನ್ನಲೆಯಲ್ಲಿ ಅಂಬೇಡ್ಕರ್ ನೇತೃತ್ವದಲ್ಲಿ ಹೊಸ ಸಮಾಜಕ್ಕೊಂದು ಹೊಸ ನೀತಿ ಸಂಹಿತೆ ರೂಪಿಸಲು ಹೊರಟರು. ಹಾಗಾಗಿ ಅಂಬೇಡ್ಕರ್ ಸಂವಿಧಾನ ರಚನಾ ಕರಡು ಸಮಿತಿಯ ಅಧ್ಯಕ್ಷರಾದರು. ಜೊತೆಗೆ ಸ್ವತಂತ್ರ್ಯ ಪೂರ್ವದಲ್ಲಿ ನಡೆಯುತ್ತಿದ್ದ ಮಹಿಳಾ ಚಳುವಳಿಗಳು ಮತದಾನ ಹಕ್ಕೊತ್ತಾಯ ಬೇಡಿಕೆಯೊಂದಿಗೆ ರಾಷ್ಟ್ರೀಯ ಹೋರಾಟದ ತುರ್ತುನ್ನು ಸ್ವೀಕರಿಸಿದವು. ಇವು ಅನಂತರ ಅದರಲ್ಲಿ ವಿಲೀನವಾದವು. ಇದರ ಪರಿಣಾಮವೇ ಸ್ವಾತಂತ್ರ್ಯ ಭಾರತದ ಸಂವಿಧಾನ ರಚನೆ ಕೆಲಸದಲ್ಲಿ ಹದಿನಾಲ್ಕು ಜನ ಮಹಿಳಾ ಸದಸ್ಯರೂ ಸೇರ್ಪಡೆಗೊಂಡರು. ಅವರುಗಳೆಂದರೆ, ಅಮ್ಮು ಸ್ವಾಮಿನಾಥನ್, ದಾಕ್ಷಾಯಣಿ ವೇಲಾಯುಧನ್, ದುರ್ಗಾಬಾಯಿ, ದೇಶಾಮುಖಾ, ಹಂಸಮೆಹ್ತ, ಮಾಲತಿಚೌದರಿ, ಸುಚೇತಕೃಪಲಾನಿ, ವಿಜಯಲಕ್ಷ್ಮೀ ಪಂಡಿತ್, ಪೂರ್ಣಿಮಾ ಬ್ಯಾನರ್ಜಿ, ಕಮಲಾಚೌದರಾಣಿ, ಬೇಗಂ ಅಜೀಚಾರ ರೆಸೆಲ್, ಸರೋಜಿನಿ ನಾಯ್ಡು, ಬೇಗಂ ಜಹನಾರ – ಷಾ, ನವಾಜ್ ಲೀಲಾರಾಯ್ ಮತ್ತು ಇಕ್ರ ಮುಲ್ಲಾ ಇತ್ಯಾದಿ ಸದಸ್ಯರನ್ನು ಒಳಗೊಂಡ ಸಮಿತಿಯು ಅಂಬೇಡ್ಕರ್ ನೇತೃತ್ವದಲ್ಲಿ ಸಂವಿಧಾನ ರಚನೆಯ ಕೆಲಸ ಮಾಡಿತು.

ಈ ಸಮಿತಿಯು ಆಧುನಿಕ ಸಮಾಜದ ಆದರ್ಶಗಳಾದ ಸ್ವಾತಂತ್ರ್ಯ, ಸಮಾನತೆ, ಸಹೋದರತ್ವವನ್ನು ಭಾರತದಲ್ಲಿ ಕಸಿಗೊಳಿಸಲು ಬೇಕಾದ ವಿಧಿಗಳನ್ನು ನಿರೂಪಿಸಿತು. ಆದ್ದರಿಂದಲೇ ಭಾರತದ ಸಂವಿಧಾನವು ಅಳವಡಿಸಿಕೊಂಡಿರುವ ಕಲ್ಯಾಣರಾಜ್ಯ ಮತ್ತು ಸಾಮಾಜಿಕ ನ್ಯಾಯಾಧಾರಿತ ಸಮಾನತೆಯ ಸಮಾಜದ ಪರಿಕಲ್ಪನೆಗಳು ಅಂಚಿನ ವರ್ಗದಲ್ಲಿ

ಬದುಕುತ್ತಿರುವ ಮಹಿಳೆಯರಿಗೆ, ದಲಿತರಿಗೆ ಅತ್ಯಂತ ಉಪಯುಕ್ತವಾಗಿವೆ. ಅದರಲ್ಲಿಯೂ ಭಾರತದ ಸಂವಿಧಾನವು ಎತ್ತಿಹಿಡಿದ ಅಂಶಗಳಲ್ಲಿ ಸಮಾನತೆಯು ಅತ್ಯಂತ ವಿಶಿಷ್ಟವಾದ ಅಂಶವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಪಾಶ್ಚಾತ್ಯ ಸಮಾಜವು ಗ್ರಹಿಸುವ ಸಮಾನತೆಯ ಅರ್ಥ ಸಮಾನತೆಯ ಸ್ತರದಿಂದಲೇ ಆರಂಭಗೊಳ್ಳುವುದು. ಅಂದರೆ ಭಾರತೀಯ ಸಮಾಜ, ಪಾಶ್ಚಿಮಾತ್ಯ ಸಮಾಜಕ್ಕಿಂತ ಭಿನ್ನವಾಗಿದ್ದು, ವರ್ಣ, ಜಾತಿ ಹಾಗೂ ವರ್ಗಗಳನ್ನು ಆಧರಿಸಿ ಅಸಮಾನತೆಯ ಸ್ತರಗಳು ಸೃಷ್ಟಿಯಾಗಿವೆ. ಹಾಗಾಗಿ, ಇಲ್ಲಿ ಪಶ್ಚಿಮದ ಬಗೆಯ ಸಮಾನತೆಯ ಗ್ರಹಿಕೆ ಅರ್ಥಹೀನವಾದುದು, ಅಪಾಯಕಾರಿಯಾದುದು ಆಗಿಬಿಡಬಹುದು. ಭಾರತದಂತಹ ಸಮಾಜದಲ್ಲಿ 'ಸಾಮಾಜಿಕ ನ್ಯಾಯ' ಎಂಬ ಪರಿಕಲ್ಪನೆಯನ್ನು ರೂಢಿಸಿಕೊಳ್ಳದ ಸಮಾನತೆ ಮಾತು ಅಸಮಾನತೆಯನ್ನು ಹಾಗೆ ಉಳಿಸಿಕೊಳ್ಳುವುದು. ಅಷ್ಟೇ ಅಲ್ಲ ಅದು ಅಮಾನವೀಯವಾದ ಪೈಪೋಟಿಯನ್ನು ಪ್ರೋತ್ಸಾಹಿಸುತ್ತದೆ. "Live by Competetion" ಎಂಬ ಮೌಲ್ಯ ಸಂಪ್ರದಾಯಿಕ ಸಮಾಜದ ಎಲ್ಲ ಅನಿಷ್ಟಗಳನ್ನು ಇನ್ನೂ ತೀವ್ರಗೊಳಿಸುವ ಅಂಶವಾಗುತ್ತದೆ." (ಎಂ.ಉಷಾ: 2004: ಪು-213) ಇದನ್ನೆಲ್ಲ ಅರಿತಿದ್ದರಿಂದಲೇ ಸಂವಿಧಾನವು ಸಾಮಾಜಿಕ ನ್ಯಾಯ ಎಂಬ ಅಂಶದ ಹಿನ್ನಲೆಯಲ್ಲಿಯೇ ಸಮಾನತೆಯನ್ನು ಪರಿಗಣಿಸುತ್ತದೆ. ಅದರ ಆಧಾರದ ಮೇಲೆ "ಸಮಾನತೆ"ಯ ಸಾಮಾನ್ಯಾರ್ಥವನ್ನು ಮೀರಿದ ಕೆಲವು ವಿಶೇಷ ಸವಲತ್ತನ್ನು ಸಂವಿಧಾನವು ಸಮಾಜದ ತಳ ಸಮುದಾಯಗಳ ಜನತೆಗೆ ಒದಗಿಸಿಕೊಡುತ್ತದೆ.

ಸಂವಿಧಾನವು ಅಳವಡಿಸಿಕೊಂಡ ಸಾಮಾಜಿಕ ಸಮಾನತೆಯು ಸಮಾಜದ ಅಂಚಿನಲ್ಲಿ ಬದುಕುತ್ತಿರುವ ಮಹಿಳೆಯರಿಗೆ ಒಂದು ಹಂತದವರೆಗೆ ನೆರವಾಗುತ್ತದೆ. ಈ ಹೊತ್ತು ಮಹಿಳೆಯರಿಗೆ ದೊರಕುತ್ತಿರುವ ಎಲ್ಲಾ ವಿಶೇಷ ಸವಲತ್ತುಗಳು ಈ ಹಿನ್ನಲೆಯಲ್ಲಿ ಮಹತ್ವ ಪಡೆಯುತ್ತಿವೆ. ಇದರ ಆಶಯವನ್ನು ಸಂವಿಧಾನದ ಪ್ರಸ್ತಾವನೆ ಪುಷ್ಟೀಕರಿಸುತ್ತದೆ.

"ಭಾರತದ ಸಮಸ್ತ ನಾಗರೀಕರಾದ ನಾವು ಸಾಮಾಜಿಕ, ಆರ್ಥಿಕ, ರಾಜಕೀಯ, ವಿಚಾರ ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು ಉಪನ್ಯಾಸ ಸ್ವಾತಂತ್ರ್ಯ ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆ ಭಾರತೀಯ ನಾಗರೀಕರಿಗೆ ದೊರೆಯುವಂತೆ ಮಾಡಲು ವ್ಯಕ್ತಿ ಗೌರವ ಹಾಗೂ ರಾಷ್ಟ್ರದ ಏಕತೆಯನ್ನು ಖಚಿತಪಡಿಸುವಂಥಹ ಭ್ರಾತೃತ್ವಭಾವನೆಯನ್ನು ಎಲ್ಲರಲ್ಲಿ ಬೆಳೆಸುವ ದೃಢ ಸಂಕಲ್ಪದಿಂದ ಸಂವಿಧಾನ ಅಂಗೀಕರಿಸಿ 1949 ನವೆಂಬರ್ 26 ರಂದು ನಮ್ಮ ಸಂಸತ್ತಿನಲ್ಲಿ ಅಧಿನಿಯಮಿಸಿ ದೇಶಕ್ಕೆ ಅರ್ಪಿಸಿಕೊಂಡಿದ್ದೇವೆ" (ಡಾ.ಬಾ.ಸಾ.ಅಂ.ಬ.ಭಾ: 1991: ಸಂ-14-1, ಪು-136) ಎನ್ನುತ್ತಾರೆ.

ಇದರಲ್ಲಿ ಸ್ತ್ರೀ-ಪುರುಷ ಸಮಾನತೆಯ ಪರಿಕಲ್ಪನೆಯನ್ನು ಪ್ರಸ್ತುತಪಡಿಸಲಾಗಿದೆ. ಆದ್ದರಿಂದಲೇ ನಮ್ಮ ಸಂವಿಧಾನ ಮಹಿಳೆಯರಿಗೆ ಹೊಸ ಜಗತ್ತಿನತ್ತ ಕೊಂಡೊಯ್ಯುವ ತಿಳಿವಳಿಕೆಯನ್ನು ಮೈಗೂಡಿಸಿಕೊಂಡಿದೆ. ಏಕೆಂದರೆ, ಸಂವಿಧಾನ ರಚನೆಕಾರರಿಗೆ ಮಹಿಳಾ ವಿಮೋಚನೆಯ ಸಮಸ್ಯೆಯ ಸಾಮಾಜಿಕ ಆಯಾಮದ ಅರಿವು ಇತ್ತು. ಅಲ್ಲದೇ ರಾಷ್ಟ್ರೀಯ

ಅಭಿವೃದ್ಧಿಗೆ ಮಹಿಳೆಯರನ್ನು ಪುರುಷರಿಗೆ ಸರಿಸಮಾನವಾಗಿ ತರಲು ಮಹಿಳೆಯರಿಗೆ ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯ ಒದಗಿಸುವುದು ಹಾಗೂ ಸಾಮಾಜಿಕ ನ್ಯಾಯ ನೀಡಿ ಶೋಷಣೆಯಿಂದ ಅವರನ್ನು ರಕ್ಷಿಸುವುದು ಅತ್ಯಗತ್ಯವಾಗಿತ್ತು.

ಈ ಜವಾಬ್ದಾರಿಯಿಂದಲೇ ಸಂವಿಧಾನ ರಚನಾ ಸಮಿತಿಯು 14 ಜನ ಮಹಿಳೆಯರನ್ನು ಸದಸ್ಯರನ್ನಾಗಿ ಒಳಗೊಂಡಿತು. ಇದರ ನೇತೃತ್ವ ವಹಿಸಿದ್ದ ಅಂಬೇಡ್ಕರ್ ಮಹಿಳೆಯ ಸಂದರ್ಭದಲ್ಲಿ ನ್ಯಾಯವನ್ನೊದಗಿಸುವ ಪ್ರಯತ್ನಮಾಡಿದರು. ಪರಿಣಾಮವಾಗಿ "ಸಂವಿಧಾನದಲ್ಲಿ ಸ್ತ್ರೀಯರಿಗಾಗಿ ನಾಗರಿಕ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಹಾಗೂ ಶೈಕ್ಷಣಿಕ ವಿಶೇಷಹಕ್ಕುಗಳನ್ನು 14, 15, 16, 24ನೇ ವಿಧಿಗಳಲ್ಲಿ ದಾಖಲಿಸುತ್ತದೆ. ಕ್ರಮವಾಗಿ ಇವು ಸಮಾನತೆಯನ್ನು ಭಾರತೀಯ ಪೌರರ ಮೂಲಭೂತ ಹಕ್ಕಾಗಿ ಪ್ರತಿಪಾದಿಸುತ್ತವೆ." (ಡಾ.ಬಾ.ಸಾ.ಅಂ.ಬ.ಭಾ: 2004; ಸಂ–13, ಪು–380) ಅಷ್ಟೇ ಅಲ್ಲದೆ ಸ್ತ್ರೀಯರಿಗೆ ಸಂಬಂಧಿಸಿದಂತೆ ವಿಶೇಷ ಉಪಬಂಧಗಳನ್ನು ರಚಿಸಲು ರಾಜ್ಯಸರ್ಕಾರಗಳಿಗೆ ಅಧಿಕಾರ ನೀಡಿದೆ.

**"ಸಂವಿಧಾನದಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಅನುಚ್ಛೇದಗಳೆಂದರೆ :**

1. ಸಮಾನತೆಯ ಹಕ್ಕು (14, 15 ಮತ್ತು 16 ನೇ ಅನುಚ್ಛೇದ)
2. ಶೋಷಣೆಯ ವಿರುದ್ಧ ಹಕ್ಕು (23 ನೆ ಅನುಚ್ಛೇದ)
3. ನಿರ್ದೇಶದ ತತ್ವಗಳು (39 (ಎ), (ಡಿ) ಮತ್ತು (ಇ) ಹಾಗೂ 42 ನೇ ವಿಧಿಗಳು)
4. ಮೂಲಭೂತ ಕರ್ತವ್ಯಗಳು (51W ಇ ಅನುಚ್ಛೇಧ)
5. ಚುನಾವಣೆಗಳು 325 ನೇ ಅನುಚ್ಛೇದ" (ಡಾ.ಬಾ.ಸಾ.ಅಂ.ಬ.ಭಾ: 1991: ಸಂ–14–1, ಪು–138,147)

ಈ ಎಲ್ಲಾ ವಿಧಿಗಳು ಮಹಿಳೆಯ ಹಕ್ಕುಗಳನ್ನು ಒಳಗೊಂಡ ಉದ್ದೇಶಗಳೆಂದರೆ :

1. 'ಮಹಿಳೆಯರ ಹಕ್ಕುಗಳನ್ನು ಪುರುಷರ ಹಕ್ಕುಗಳಿಗೆ ಸಮಾನವಾಗಿ ಪರಿಗಣಿಸುವುದು.
2. ಮಹಿಳೆಯರ ಹಕ್ಕುಗಳನ್ನು ಪುರುಷ ಹಕ್ಕುಗಳಿಗೆ ಅಸಮಾನವಾಗಿ ಎಂದರೆ ಕಾನೂನಿನ ಮೂಲಕ ಕೊಡಲಾಗಿರುವ ವಿಶೇಷ ಹಕ್ಕುಗಳ ಉಪಬಂಧಗಳ ಸಂದರ್ಭದಲ್ಲಿ ಪರಿಗಣಿಸುವುದು (ಹಿನ್ನಲೆ : ಚಾರಿತ್ರಿಕವಾಗಿ ಹಾಗೂ ಸಾಮಾಜಿಕವಾಗಿ ಮಹಿಳೆ ತುಳಿತಕ್ಕೆ ಒಳಗಾಗಿರುವುದು).
3. ಪುರುಷರಿಂದ ಭಿನ್ನವಾದ ದೈಹಿಕವಾದ ನಿರ್ದಿಷ್ಟ ವ್ಯತ್ಯಾಸಗಳ ಕಾರಣದಿಂದ ಲಭ್ಯವಾಗುವ ಸೌಲಭ್ಯಗಳನ್ನು ವಿಶೇಷ ಹಕ್ಕುಗಳನ್ನಾಗಿ ಪರಿಗಣಿಸುವುದು" (ಡಾ.ಬಾ.ಸಾ.ಅಂ.ಬ.ಭಾ: 2004: ಸಂ–13–1, ಪು–4,379) (ಪ್ರಸೂತಿ ರಜೆ ಸೌಲಭ್ಯ ಮೊದಲಾದವುಗಳು).

ಈ ಹಿನ್ನಲೆಯಲ್ಲಿ ಅಧ್ಯಯನ ದೃಷ್ಟಿಯಿಂದ ಮಹಿಳೆ ಸಂಬಂಧಿಸಿರುವ ವಿಧಿಗಳು ಮಹತ್ವವಾದವು. ಅಷ್ಟೇ ಅಲ್ಲ, ಅವು ಸ್ತ್ರೀ-ಪುರುಷ ಮೂಲಭೂತ ಹಕ್ಕುಗಳಿಗೆ ಸಂಬಂಧಪಟ್ಟಿವೆ. ಅದರಲ್ಲಿ 14, 15 ಮತ್ತು 16 ನೇ ಅನುಚ್ಛೇದಗಳು ಗಮನಾರ್ಹವಾದವು.

ಅನುಚ್ಛೇದ 14 ಪ್ರಕಾರ "ಕಾನೂನಿನ ಎದುರಿನಲ್ಲಿ ಎಲ್ಲರೂ ಸಮಾನರು ಮತ್ತು ಕಾನೂನು ಎಲ್ಲರಿಗೂ ಸಮಾನವಾಗಿ ರಕ್ಷಿಸುತ್ತದೆ. ಅಂದರೆ ಭಾರತದ ರಾಜ್ಯ ನೇತೃತ್ವದಲ್ಲಿ ಯಾರೇ ವ್ಯಕ್ತಿಗೆ ಕಾನೂನಿನ ಮುಂದೆ ಸಮಾನತೆಯನ್ನು ಅಥವಾ ಕಾನೂನುಗಳಿಂದ ಸಮಾನ ಸಂರಕ್ಷಣೆಯನ್ನು ರಾಜ್ಯವು ನಿರಾಕರಿಸುವಂತಿಲ್ಲ." (ಅದೇ, ಪು-139)

ಅನುಚ್ಛೇದ 15(D) ಪ್ರಕಾರ "ಧರ್ಮ, ಕುಲ, ಜಾತಿ, ಲಿಂಗ, ಜನ್ಮಸ್ಥಳಗಳ ಆಧಾರದ ಮೇಲೆ ರಾಜ್ಯವು ಭೇಧಭಾವ ಮಾಡುವುದಿಲ್ಲ" ಎಂದು ಹೇಳುತ್ತದೆ. ಅನುಚ್ಛೇದ 15(2) ಪ್ರಕಾರ "ಅಂಗಡಿಗಳು, ರೆಸ್ಟೋರೆಂಟ್‌ಗಳು, ಹೋಟಲ್‌ಗಳು, ದೇವಸ್ಥಾನಗಳು ಮತ್ತು ಸಾರ್ವಜನಿಕ ಮನೋರಂಜನಾ ಸ್ಥಳಗಳಲ್ಲಿ ಯಾವುದೇ ಪ್ರಜೆಗಳಿಗೆ ಧರ್ಮ, ಕುಲ, ಜಾತಿ, ಲಿಂಗ, ಜನ್ಮಸ್ಥಳದ ಆಧಾರದ ಮೇಲೆ ನಿರ್ಬಂಧ ಅಥವಾ ಪಕ್ಷಪಾತ ಮಾಡಬಾರದೆಂದು ಹೇಳುತ್ತದೆ. ಇದೇ ರೀತಿ ಅಥವಾ ಭಾಗಶಃ ರಾಜ್ಯದ ನಿರ್ವಹಣೆಯಲ್ಲಿರುವ ಅಥವಾ ಸಾರ್ವಜನಿಕ ಉಪಯೋಗಕ್ಕಿರುವ ಬಾವಿಗಳು, ಟ್ಯಾಂಕುಗಳು, ಸ್ನಾನಘಟ್ಟಗಳು, ರಸ್ತೆಗಳು, ಸಾರ್ವಜನಿಕ ವಿರಾಮಸ್ಥಳ ಉಪಯೋಗಿಸಲು ಯಾವುದೇ ನಿರ್ಬಂಧ ಹೇರಬಾರದೆಂದು" ಹೇಳುತ್ತದೆ. (ಡಾ.ಬಾ.ಸಾ.ಅಂ.ಬ.ಭಾ: 2004: ಸಂ-13-1; ಪು-140,143)

ಅನುಚ್ಛೇದ 16 ರ ಪ್ರಕಾರ "ಸಾರ್ವಜನಿಕ ಉದ್ಯೋಗದ ವಿಷಯದಲ್ಲಿ ಸಮಾನವಕಾಶ ಧರ್ಮ, ಮೂಲವಂಶ, ಲಿಂಗ, ಜಾತಿ, ಸಂತತಿ, ಜನ್ಮಸ್ಥಳದ ನಿವಾಸ ಅಥವಾ ಇವುಗಳಲ್ಲಿ ಯಾವುದೇ ಒಂದರ ಆಧಾರದ ಮೇಲೆ ಮಾತ್ರವೇ ಯಾರೇ ನಾಗರೀಕನು ರಾಜ್ಯದ ಅಧೀನದಲ್ಲಿರುವ ಯಾವುದೇ ನಿಯೋಜನೆಗೆ ಅಥವಾ ಸಂಬಂಧಿಸಿಂದತೆ ಅನರ್ಹತೆಗೆ ಒಳಗಾಗ ತಕ್ಕದಲ್ಲ ಅಥವಾ ಅವನ ವಿರುದ್ಧ ತಾರತಮ್ಯ ಮಾಡತಕ್ಕದಲ್ಲ" (ಡಾ.ಬಾ.ಸಾ.ಅಂ.ಬ.ಭಾ: 2004: ಸ-13-1; ಪು-40, 141) ಎನ್ನುತ್ತದೆ.

ಹಾಗೆಯೇ ಸಂವಿಧಾನದಲ್ಲಿ ಸ್ತ್ರೀಗೆ ಪುರುಷರಷ್ಟೇ ಸಮಾನ ಹಕ್ಕುಗಳು ನೀಡಿ ಅವಳ ಜೀವನದಲ್ಲಿ ಶೋಷಣೆಯಾಗದಂತೆ ವಿಶೇಷಹಕ್ಕನ್ನು ಕೂಡ ನೀಡಲಾಗಿದೆ. "ಸಂವಿಧಾನ 15(3) ರಂತೆ ನೈಸರ್ಗಿಕವಾಗಿ ಹೆಣ್ಣುಮಕ್ಕಳಿಗೆ ಸಂರಕ್ಷಣೆ ನೀಡಲು ರಾಜ್ಯಕ್ಕೆ ಅಧಿಕಾರ ನೀಡಿದೆ. ಸ್ತ್ರೀಗೆ ಮತ್ತು ಚಿಕ್ಕಮಕ್ಕಳಿಗೆ ವಿಶೇಷ ನಿಯಮಾವಳಿಗಳನ್ನು ಮಾಡಲು ಈ ವಿಧಿಯು ರಾಜ್ಯಕ್ಕೆ ಅಧಿಕಾರವನ್ನು ನೀಡುತ್ತದೆ." (ಡಾ.ಬಾ.ಸಾ.ಅಂ.ಬ.ಭಾ: 2004: ಪು-151)

ಮತ್ತೊಂದಡೆ ಸಂವಿಧಾನದ ನಾಲ್ಕನೇ ಭಾಗದ ರಾಜ್ಯ ನಿರ್ದೇಶನ ತತ್ವಗಳಲ್ಲಿಯೂ ಕೂಡ ಸ್ತ್ರೀಯರಿಗೆ ವಿಶೇಷ ಸೌಲಭ್ಯಗಳನ್ನು ನೀಡಿದೆ. ಸಂವಿಧಾನದ 39(A) ವಿಧಿಯಂತೆ

ಸ್ತ್ರೀಯರಿಗೆ ರಕ್ಷಣೆಗಾಗಿ "ಎಲ್ಲಾ ಪೌರರಿಗೂ ಅಂದರೆ ಪುರಷರು ಮತ್ತು ಮಹಿಳೆಯರಿಗೆ ಸಮಾನವಾಗಿ ಜೀವನಕ್ಕೆ ಬೇಕಾದ ಸಾಧನಗಳನ್ನು ಒದಗಿಸುವುದು" (ಡಾ.ಬಾ.ಸಾ.ಅಂ.ಬ.ಭಾ: 2004: ಪು–149) ಮತ್ತು "39(D) ವಿಧಿಯಂತೆ ಸ್ತ್ರೀ–ಪುರುಷರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡುವುದು. ಹಾಗೆಯೇ, 39(E) ಪಿಧಿಯಂತೆ ಕಾರ್ಮಿಕ ಶಕ್ತಿ ಮತ್ತು ಆರೋಗ್ಯವನ್ನು ಕಾಪಾಡುವುದು." (ಡಾ.ಬಾ.ಸಾ.ಅಂ.ಬ.ಭಾ: 2004: ಪು–152) ಮತ್ತು ತಮ್ಮ ವಯಸ್ಸು ಮತ್ತು ಶಕ್ತಿ ಅಸಮರ್ಪಕ ಕೆಲಸಕ್ಕೆ ನಾಗರೀಕರು ಹೋಗುವ ಪರಿಸ್ಥಿತಿಯನ್ನು ತಪ್ಪಿಸುವುದು. ಆರ್ಥಿಕವಾಗಿ ಶೋಷಣೆಗೆ ಒಳಗಾಗುವುದನ್ನು ಈ ಮೇಲಿನ ವಿಧಿಗಳ ಮೂಲಕ ತಪ್ಪಿಸಲಾಗಿದೆ.

"ಸಂವಿಧಾನ 41 ನೇ ವಿಧಿಯಂತೆ ರಾಜ್ಯವು ತನ್ನ ಆರ್ಥಿಕಶಕ್ತಿಯ ಪ್ರಕಾರ ಎಲ್ಲರಿಗೂ ಶಿಕ್ಷಣ, ಉದ್ಯೋಗ ದೊರೆಯುವಂತಹ ಹಾಗೂ ನಿರುದ್ಯೋಗ, ವೃದ್ಧಾಪ್ಯ, ಅನಾರೋಗ್ಯ ಮತ್ತು ಅಸಹಾಯಕತೆಯ ಸ್ಥಿತಿಯಲ್ಲಿ ಸಾಮಾಜಿಕ ಸಹಾಯ ಒದಗಿಸುವಂತಹ ಪರಿಣಾಮಕಾರಿ ನಿಯಮಾವಳಿಗಳನ್ನು ಮಾಡಬೇಕು" ಎಂದು ಹೇಳಿದೆ. (ಡಾ.ಬಾ.ಸಾ.ಅಂ.ಬ.ಭಾ: 2004: ಪು–41) ಈ ಮೂಲಕ ಸ್ತ್ರೀ–ಪುರುಷ ಇಬ್ಬರು ಅಗತ್ಯಕ್ಕೆ ಅನುಗುಣವಾಗಿ ಶಿಕ್ಷಣ, ಉದ್ಯೋಗ, ನಿರುದ್ಯೋಗ, ವೃದ್ಧಾಪ್ಯ, ಅನಾರೋಗ್ಯ ಮತ್ತು ಅಸಹಾಯಕತೆಯನ್ನು ತೊಲಗಿಸುವ ಪ್ರಯತ್ನಗಳು ಸಂವಿಧಾನದ ಮೂಲಕ ನಡೆದಿವೆ.

"ಸ್ತ್ರೀಯ ದೈಹಿಕ, ಮಾನಸಿಕ, ಲೈಂಗಿಕ ಶೋಷಣೆಯನ್ನು ತಡೆಯಲು ಸಂವಿಧಾನದ 42ನೇ ವಿಧಿ ಹೆಚ್ಚು ಬೆಂಬಲವಾಗಿ ನಿಲ್ಲುತ್ತದೆ." (ಡಾ.ಬಾ.ಸಾ.ಅಂ.ಬ.ಭಾ: 2004: ಸಂ,13–2; ಪು–378,380) ಇದರಂತೆ ಕೆಲಸಕ್ಕೆ ಬೇಕಾಗುವ ಅಗತ್ಯ ಪರಿಕರಗಳನ್ನು, ಮಾನವೀಯತೆಯ ಪರಿಸ್ಥಿತಿಗಳಲ್ಲಿ ಮತ್ತು ಹೆಣ್ಣು ಮಕ್ಕಳಿಗೆ ಹೆರಿಗೆ ಸೌಲಭ್ಯಗಳನ್ನು ರಾಜ್ಯ ಸರ್ಕಾರವು ಒದಗಿಸಿಕೊಡಬೇಕೆಂದು ಹೇಳುತ್ತದೆ. ಹಾಗೆಯೇ "43ನೇ ವಿಧಿಯು ಎಲ್ಲ ಕಾರ್ಮಿಕರಿಗೂ ಅಂದರೆ ಸ್ತ್ರೀ ಮತ್ತು ಪುರುಷ, ಇತರ ಸಮುದಾಯದ ಕಾರ್ಮಿಕರಿಗೂ ಸಹ ಉತ್ತಮ ಜೀವನ ನಡೆಸಲು ವಿರಾಮ ಮತ್ತು ಸಾಂಸ್ಕೃತಿಕ ಅವಕಾಶಗಳನ್ನು ಕಲ್ಪಿಸಿ ಕೊಡಬೇಕು. ಅವರು ಈ ಅವಕಾಶವನ್ನು ಅನುಭವಿಸಲು ಅನುಕೂಲವಾಗುವಂತಹ ಪರಿಸರವನ್ನು ನಿರ್ಮಿಸಲು ರಾಜ್ಯವು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಹೇಳುತ್ತದೆ." (ಚರ್ಚೆಗಳನ್ನು ಗಮನಿಸಿ)

ಮೂಲಭೂತ ಕರ್ತವ್ಯದ ಭಾಗದಲ್ಲಿಯೂ ಸ್ತ್ರೀಯರ ಗೌರವ ಕಾಪಾಡಲು "ಸಂವಿಧಾನ 51(E) ವಿಧಿಯಂತೆ ಭಾರತೀಯರಲ್ಲಿ 'ಸಾಮರಸ್ಯ' ಮತ್ತು 'ಸಹೋದರತ್ವ'ದ ಭಾವನೆಗಳನ್ನು ಬೆಳೆಸುವುದರ ಜೊತೆಗೆ ಮಹಿಳೆಯರ ಗೌರವಕ್ಕೆ ಭಂಗ ತರುವಂತಹ ಯಾವುದೇ ಆಚರಣೆ ತ್ಯಜಿಸುವುದು ಪ್ರತಿಯೊಬ್ಬ ಭಾರತೀಯರ ಕರ್ತವ್ಯವೆಂದು ಹೇಳುತ್ತದೆ." (ಸಂವಿಧಾನ, ಉದ್ಧೃತ:ವಿದ್ಯಾಸಾಗರ ಐ.ಎ: 2006: ಪು–114)

ಈ ಎಲ್ಲಾ ವಿಧಿಗಳನ್ನು ಪರಿಶೀಲಿಸುವುದಾದರೇ ಸಂವಿಧಾನವು ಮಹಿಳಾ ಹಿತಾಸಕ್ತಿಯನ್ನು ಎರಡು ನೆಲೆಯಲ್ಲಿ ಗುರುತಿಸಿಕೊಂಡಿದೆ ಎನ್ನಬಹುದು.

**ಒಂದು** : ಸಂವಿಧಾನದ ತಾತ್ವಿಕತೆಯು ಅತ್ಯಂತ ವಿಶಾಲವಾದ ವ್ಯಾಪ್ತಿಯಲ್ಲಿ ಸಮಾನತೆ, ಸಾಮಾಜಿಕ ನ್ಯಾಯ, ಇತ್ಯಾದಿಗಳ ಮೂಲಕ ಸ್ತ್ರೀ ಸಮಾನತೆಯ ಪ್ರಶ್ನೆಯನ್ನು ಅಡೆತಡೆಗಳಿಲ್ಲದೆ ಸಮರ್ಥಿಸಿಕೊಳ್ಳಬಹುದಾದ ರೀತಿಯಲ್ಲಿ ಇರುವುದು. ಮಹಿಳೆಯು ಈ ದೇಶದ ಆದ್ಯ ಪ್ರಜೆಯಾಗಿ ಗುರುತುಗೊಂಡ ತನ್ನೆಲ್ಲ ಹಕ್ಕುಗಳನ್ನು ಹೊಂದುವುದು.

**ಎರಡು** : ಸಮಾನ ಅವಕಾಶಗಳೊಂದಿಗೆ ಸಾಮಾಜಿಕ ನ್ಯಾಯದ ಹಿನ್ನಲೆಯಲ್ಲಿ ಸಮಾನತೆಯೆಡೆಗೆ ಚಲಿಸಲು ಬೇಕಾದ ವಿಶೇಷ ಸವಲತ್ತುಗಳನ್ನು ಹೊಂದುವುದು. ವಿಶೇಷವಾಗಿ ಮಹಿಳೆಯರು ಎದುರಿಸುತ್ತಿರುವ ಸಂಕಷ್ಟಗಳ ಸಂದರ್ಭದಲ್ಲಿ ಅವರಿಗೆ ನೆರವನ್ನೀಯುವ ಕಾನೂನು ವ್ಯವಸ್ಥೆಯನ್ನು ರೂಪಿಸುವುದು, ಭದ್ರಪಡಿಸುವುದು ಇತ್ಯಾದಿಗಳಿಗೆ ಬೇಕಾದ ತಳಹದಿಯನ್ನು ಒದಗಿಸಿಕೊಟ್ಟಿದೆ. ಆನಂತರದಲ್ಲಿ ಸಂವಿಧಾನಕ್ಕೆ ಹಲವಾರು ತಿದ್ದುಪಡಿಗಳನ್ನು ತರುವ ಮೂಲಕ ಮಹಿಳೆಯರ ಸಶಕ್ತೀಕರಣದ ಕೆಲಸ ನಿರಂತರವಾಗಿ ನಡೆಯಲು ಅಗತ್ಯವಾದ ತಾತ್ವಿಕ, ನೈತಿಕ ಹಾಗೂ ಆಡಳಿತಾತ್ಮಕ ಬೆಂಬಲವನ್ನು ಸಂವಿಧಾನವು ಒದಗಿಸಿಕಕೊಟ್ಟಿದೆ.

ಒಟ್ಟಾರೆ ಹೇಳುವದಾದರೆ ಸಂವಿಧಾನದಲ್ಲಿ ಮಹಿಳೆಗೆ ದೊರೆತ ಈ ಎಲ್ಲಾ ಆದ್ಯತೆಯ ಹಿಂದೆ ಅಂಬೇಡ್ಕರ್ ಬಲವಾಗಿ ನಂಬಿದ್ದು ಪ್ರತಿಪಾದಿಸಿದ್ದು ಸಮಾನತೆ ಹಾಗೂ ತಾರತಮ್ಯದ ವಿರುದ್ಧ ರಾಜಕೀಯ ಸಂಕಲ್ಪ ನಿಚ್ಚಳವಾಗಿರುವುದು ಕಂಡುಬರುತ್ತದೆ. ಆದ್ದರಿಂದಲೇ ಇಂತಹ ಸುಭದ್ರವಾದ ಸಂವಿಧಾನದ ಅಡಿಯಲ್ಲಿದ್ದರೂ ಈ ಸಮಾಜದ ಮಹಿಳೆಯರ ಅಸಹಾಯಕತೆ, ಅವಮಾನ, ಅನ್ಯಾಯ, ಶೋಷಣೆಗಳನ್ನು ಅನುಭವಿಸುತ್ತಿದ್ದಾರೆ. ಏಕೆಂದರೆ ಲಿಂಗ ಸಮಾನತೆಯ ಇಚ್ಛಾಶಕ್ತಿಗೆ ಯಾವ ಅಡ್ಡಿಯೂ ಬರದ ರೀತಿಯಲ್ಲಿ ಸಂವಿಧಾನದಲ್ಲಿ ಅವಕಾಶ ಕಲ್ಪಿಸಲಾಗಿದೆ. ಆದರೆ ರಾಜಕೀಯ ವಲಯದಲ್ಲಿ ಮಹಿಳೆಯರ ಸಹಭಾಗಿತ್ವ ಇಲ್ಲದಿರುವುದು ಮತ್ತು ಸಂವಿಧಾನಕ್ಕಿಂತಲೂ ಪಿತೃಪ್ರಧಾನ ಸಾಮಾಜಿಕ ಮೌಲ್ಯಗಳು ಶಕ್ತಶಾಲಿಯಾಗಿರುವವು. ಹಾಗಾಗಿ ಪ್ರಸಿದ್ಧ ಭಾರತೀಯ ಸ್ತ್ರೀವಾದಿ ಚಿಂತಕಿ ಮಧುಕಿಶ್ವರ್ ಭಾರತದ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸಂವಿಧಾನ ತನ್ನ ಜೀವ ಕಳೆದುಕೊಳ್ಳುತ್ತಿರುವುದನ್ನು ನೋಡಿ ಹೀಗೆ ಪ್ರತಿಕ್ರಿಯೆ ನೀಡುತ್ತಾರೆ "ಪ್ರಸ್ತುತ ಭಾರತೀಯ ಕುಟುಂಬದ ರಚನೆಯು ಹೆಂಗಸರ ಅಧೀನತೆ ಮತ್ತು ಶೋಷಣೆಗಳನ್ನು ಅನುಮೋದಿಸುತ್ತದೆ. ಇದರಿಂದಾಗಿ ಸಂವಿಧಾನ ಕೊಡುವ ಮೂಲಭೂತಹಕ್ಕುಗಳು ಹೆಂಗಸರ ಮಟ್ಟಿಗೆ ಅಪ್ರಸ್ತುತವೆನಿಸಿಬಿಟ್ಟಿವೆ." (ಮಧುಕೀಶ್ವರ್: 1997: ಪು–121,135)

ಹಾಗೆಯೇ ಸಮಾನತೆಯ ಹಕ್ಕುಗಳ ಉಲ್ಲಂಘನೆ ಕುರಿತು ಲಿಂಗ ತಾರತಮ್ಯಕ್ಕೆ ಸಂಬಂಧಿಸಿದಂತೆ ದಾಖಲಾದ ಪ್ರಕರಣಗಳಿಗೆ ಬಂದ ತೀರ್ಪುಗಳು ಈ ಕುರಿತಾದ ಅಧ್ಯಯನದ ಚರ್ಚೆಗಳು ಸಹ ಸಂವಿಧಾನ ಸಮಾಜದಲ್ಲಿ ಜಾರಿಗೊಳ್ಳುವಾಗ ಎದುರಾಗುವ ಸಂಗತಿಗಳು ಕೂಡ ಪಿತೃಪ್ರಧಾನತೆಯ ಅಧಿಕತನವನ್ನು ತೋರಿಸುತ್ತದೆ. ಅಂದರೆ "ಔಪಚಾರಿಕ ಸಮಾನತೆ (Formal Equality)ಮತ್ತು ವಾಸ್ತವಿಕ ಸಮಾನತೆ (Substantial Equality)"(ಗೀತಾ.ಜಿ, ಮಹಿಳೆ ಮತ್ತು ಸಾಮಾಜಿಕ ನ್ಯಾಯ, ಪು-73) ಗಳ ನಡುವಿನ ಅಂತರವನ್ನು ಉಳಿಸಿಕೊಂಡಿವೆ. ಅದರ ಪ್ರಮುಖ ಪ್ರಶ್ನೆಗಳೆಂದರೆ ಸಮಾನತೆ ಎಂದರೆ ಸಾದೃಶ್ಯತೆ (Sameness) ಎಂಬ ಚಾಲ್ತಿಯಲ್ಲಿರುವ ಪರಿಕಲ್ಪನೆ ಲಿಂಗತಾರತಮ್ಯದ ಸುಸಂಗತೆಗೆ ಹೆಚ್ಚಿನ ಒತ್ತು ನೀಡುತ್ತದೆ. ಈ ಸಂಬಂಧಿಸಿದಂತೆ ನಿರ್ಧಾರಕ್ಕೆ ಬರಲು ಮೂಲಭೂತ ಹಕ್ಕುಗಳ ಕುರಿತಾದ ಪ್ರಕರಣಗಳ ಬಗೆಗೆ ಪ್ರತ್ಯೇಕವಾದ ಅಧ್ಯಯನ ಕೈಗೊಳ್ಳಬೇಕಾದ ಒಂದು ಅಕಾಡೆಮಿಕ್ ತುರ್ತನ್ನು ತಂದು ಒಡ್ಡುತ್ತವೆ ಎಂದು ಹೇಳಬಹುದು.

ಸಂವಿಧಾನದ ಆಶಯಗಳು ಒಂದು ಕಡೆಯಾದರೆ ಭಾರತೀಯ 'ಪಿತೃಪ್ರಧಾನ ವ್ಯವಸ್ಥೆ' ಇನ್ನೊಂದು ಕಡೆ. ಆದರೆ ಲಿಂಗ ಮತ್ತು ಜಾತಿ ಸಂಬಂಧಿ ಮೂಲಭೂತವಾದಿಗಳ ಸಂಪ್ರದಾಯಿಕ ನೆಲೆಗಳನ್ನು ನಿರ್ಮೂಲನೆಗೊಳಿಸಲು ಪ್ರಯತ್ನಿಸುವಾಗ ಈ ಎರಡು ಸಂಗತಿಗಳು ತಮ್ಮ ಅಧೀನ ಸ್ಥಿತಿಗೆ ಕಾರಣವಾದ ರಾಜಕಾರಣವನ್ನು ಮರೆತು ಸಂಘರ್ಷಕ್ಕೆ ಇಳಿಯುತ್ತವೆ. ಈ ಎಲ್ಲದರ ಅಡ್ಡ ಪರಿಣಾಮಗಳನ್ನು ಮಹಿಳೆ ಎದುರಿಸಬೇಕಾಗುತ್ತದೆ. ಆದ್ದರಿಂದ ಸಂವಿಧಾನ ತಿದ್ದುಪಡಿಗಳು ಲಿಂಗದ ನೆಲೆಯಿಂದ ಪುನರ್‌ಪರಿಶೀಲನೆ ಆಗಬೇಕಾಗಿದೆ. ಇದಕ್ಕೆ ಅಂಬೇಡ್ಕರ್ ನೀಡಿರುವ ಅವಕಾಶಗಳು ಲಿಂಗಶ್ರೇಣೀಕರಣ ಸ್ಥಾಪಿತ ನೆಲೆಗಳನ್ನು ಒಡೆದು ಮಹಿಳಾ ಅಸ್ತಿತ್ವ ಸ್ಥಾಪಿಸುವಲ್ಲಿ ಉಪಯುಕ್ತವಾಗಬಲ್ಲವು.

**೫.೨ ಮಹಿಳಾ ಕಾರ್ಮಿಕರು ಮತ್ತು ಆಡಳಿತಾತ್ಮಕ ಕ್ರಮಗಳು**

ಅಂಬೇಡ್ಕರ್ ಸಂವಿಧಾನ ರಚನೆಯ ಕೆಲಸ ಮಾಡುವುದಕ್ಕೆ ಮುಂಚೆ ಸ್ವತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರೋತ್ತರ ಸಂದರ್ಭಗಳೆರಡರಲ್ಲೂ ಆಡಳಿತಗಾರರಾಗಿ ಹಲವು ಹುದ್ದೆಗಳಲ್ಲಿ ಕೆಲವು ನಿರ್ದಿಷ್ಟ ಜವಾಬ್ದಾರಿಗಳನ್ನು ನಿರ್ವಹಿಸಿದರು. ಆದರೆ ಈ ಎರಡು ಸಂದರ್ಭದಲ್ಲಿಯೂ ಪ್ರಜ್ಞಾವಂತ ಚಳುವಳಿಗಾರರಾಗಿ ಅಂಬೇಡ್ಕರ್ ಹೊಂದಿದ್ದ ಸ್ವಾತಂತ್ರ್ಯಕ್ಕಿಂತ ಭಿನ್ನವಾಗಿ ಆಡಳಿತಾತ್ಮಕ ಇಕ್ಕಟ್ಟನ್ನು ಎದುರಿಸಬೇಕಾಯಿತು. ಅದರಲ್ಲೂ ಮುಖ್ಯವಾಗಿ ಮಹಿಳೆಯರಿಗೆ ಸಂಬಂಧಿಸಿದಂತೆ ಗಣಿಗಾರಿಕೆ ಕಾಯ್ದೆಯ ತಿದ್ದುಪಡಿ ಹಾಗೂ ಹಿಂದೂ ವಿವಾಹ ಕಾಯ್ದೆಯ ಮಂಡನೆಯ ಸಂದರ್ಭಗಳು ಪರಿಶೀಲನಾರ್ಹವಾಗಿವೆ. ಪ್ರಸ್ತುತ ಭಾಗದಲ್ಲಿ ಅಂಬೇಡ್ಕರ್ ಸ್ವತಂತ್ರ್ಯ ಪೂರ್ವದಲ್ಲಿ ಮಂಡಿಸಿದ ಗಣಿಗಾರಿಕೆ ತಿದ್ದುಪಡಿ ಕಾಯ್ದೆಯಲ್ಲಿನ ಮಹಿಳಾ ಕಾರ್ಮಿಕರ ಕುರಿತು ಕೆಲವು ವಿಚಾರಗಳನ್ನು ಪ್ರಸ್ತುತ ಪಡಿಸಲಾಗಿದೆ.

1942 ರಿಂದ 1946 ರ ವರೆಗೆ ಗವರ್ನರ್‌ಜನರಲ್ ಅವರ ಕಾರ್ಯಕಾರಿ ಪರಿಷತ್ತಿನಲ್ಲಿ ಕಾರ್ಮಿಕ ಸದಸ್ಯರಾಗಿ ಅಂಬೇಡ್ಕರ್ ಕೆಲಸ ನಿರ್ವಹಿಸಿದರು. ದಲಿತ ಚಳುವಳಿಯ ಈ ಸಂದರ್ಭದಲ್ಲಿ ದಲಿತ ವರ್ಗದ ಬಹುಸಂಖ್ಯಾತರು ಕಾರ್ಮಿಕ ವರ್ಗವೆ ಆಗಿದ್ದು, ಅಂಬೇಡ್ಕರ್ ಅವರ ಹಕ್ಕುಗಳ ಬಗ್ಗೆ ಕೂಡ ತಮ್ಮ ಚಟುವಟಿಕೆಯನ್ನು ವಿಸ್ತೃತಗೊಳಿಸಿದ್ದರಿಂದ ಈ ಕಾರ್ಯಕ್ಷೇತ್ರವನ್ನು ಅವರು ನಿರ್ವಹಿಸಿದ್ದು ಹೆಚ್ಚು ಅರ್ಥಪೂರ್ಣವಾಗಿತ್ತು. ಆದರೆ ಈ ಸಂದರ್ಭದಲ್ಲಿ ಕಲ್ಲಿದ್ದಲು ಗಣಿಗಳಲ್ಲಿ ಮಹಿಳೆಯರು ಕೆಲಸ ಮಾಡುವುದರ ಕುರಿತಂತೆ ತೀವ್ರವಾದ ವಾಗ್ವಾದಗಳನ್ನು ಅಂಬೇಡ್ಕರ್ ಎದುರಿಸಬೇಕಾಯಿತು.

ಈ ವಾಗ್ವಾದಗಳು ಪಾಶ್ಚಾತ್ಯ ಮತ್ತು ದೇಶಿಯ ಚಿಂತಕರ ಆಧುನಿಕ ಹಾಗು ಸಂಸ್ಕೃತಿಯ ತಾತ್ವಿಕ ನೆಲೆಗಟ್ಟುಗಳ ನಡುವಿನ ಒಂದು ಪ್ರತಿರೋಧವಾಗಿತ್ತು. ಇದರಲ್ಲಿ ಒಂದು ಕಡೆ ಅಂಬೇಡ್ಕರ್ ಪಾಶ್ಚಾತ್ಯರ ಸಂದರ್ಭದ ಪ್ರತಿನಿಧಿಯ ಲಕ್ಷಣವನ್ನು ಪ್ರಸ್ತುತ ಪಡಿಸಿದರು. ಇನ್ನೊಂದು ಕಡೆ ಭಾರತೀಯ ಸಂಸ್ಕೃತಿಯ ಆಧುನಿಕ ಕುಟುಂಬದ ಆದಾಯವನ್ನು ಸಮರ್ಥಿಸುವ ಸಂದರ್ಭಗಳು ಅವರ ಚರ್ಚೆ ಮತ್ತು ತಿದ್ದುಪಡಿಯಲ್ಲಿ ಪ್ರತಿನಿಧಿಸಲ್ಪಡುತ್ತವೆ.

ಈ ಕಾಯ್ದೆಯನ್ನು ವಿರೋಧಿಸುವವರು ಪ್ರಸ್ತುತಪಡಿಸುವ ವಿಚಾರವೆಂದರೆ : "ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಯುದ್ಧದ ಅಗತ್ಯವನ್ನನುಸರಿಸಿ ಬ್ರಿಟಿಷ್ ಸರ್ಕಾರ ಕಲ್ಲಿದ್ದಲು ಗಣಿ ಕೆಲಸವನ್ನು ಚುರುಕುಗೊಳಿಸಿತು. ಈ ಹೆಚ್ಚಾದ ಕಾರ್ಯಕ್ಕೆ ಅಡೆತಡೆಯಂಟಾಗದಂತೆ ಕಾರ್ಮಿಕರನ್ನು ಒದಗಿಸುವ ಸಲುವಾಗಿ ಅದುವರೆಗೆ ಜಾರಿಯಲ್ಲಿದ್ದ ಕಲ್ಲಿದ್ದಲು ಗಣಿಗಳಲ್ಲಿ ಕೆಲಸಕ್ಕೆ ಮಹಿಳೆಯರ ನೇಮಕಾತಿಗೆ ಇದ್ದ ನಿಷೇಧವನ್ನು ರುದ್ದುಗೊಳಿಸಿ ಮಹಿಳೆಯರನ್ನು ಅಪಾಯಕಾರಿ ಕೆಲಸಗಳಿಗೆ ಒಡ್ಡಿತು. ಸ್ವತಃ ಬ್ರಿಟನ್ನಿನಲ್ಲಿಯೇ ನಿಷೇಧಿತವಾದ ಕೆಲಸವನ್ನು ಭಾರತದಲ್ಲಿ ಬ್ರಿಟಿಷ್ ಆಡಳಿತ ರೂಢಿಗೆ ತರುತ್ತಿರುವುದನ್ನು ಕುರಿತು ಕಾರ್ಯಕಾರಿ ಪರಿಷತ್ತಿನಲ್ಲಿ ಸದಸ್ಯರು ತಕರಾರು ಎತ್ತಿದ್ದರು." (ಡಾ.ಬಾ.ಸಾ.ಅಂ.ಬ.ಭಾ: 1999: ಸಂ,10-1: ಪು-270) ಸರ್ಕಾರದ ಈ ನಿರ್ಣಯದ ವಿರುದ್ಧ ಹೇಳಲಾದ ಮತ್ತೊಂದು ಅಂಶವೆಂದರೆ "ಇಂಗ್ಲೆಂಡಿನಲ್ಲಿ ಕಲ್ಲಿದ್ದಲು ಕೊರತೆ ಇದೆ. ಆದರೂ ಅಲ್ಲಿ ಮಹಿಳೆಯರನ್ನು ಭೂ ಅಡಿಯ ಗಣಿಗಳಲ್ಲಿ ಕಾರ್ಯಮಾಡದಂತೆ ನಿಷೇದಾಜ್ಞೆ ಜಾರಿಯಲ್ಲಿದೆ. ಭಾರತದಲ್ಲಿ ಏಕೆ ಈ ನಿಷೇದಾಜ್ಞೆಯನ್ನು ತೆಗೆದು ಹಾಕಲಾಯಿತು?" (ಡಾ.ಬಾ.ಸಾ.ಅಂ.ಬ.ಭಾ: 1999: ಸಂ,10-1: ಪು-274) ಈ ಪ್ರಶ್ನೆಗೆ ಅಂಬೇಡ್ಕರ್ ಪ್ರತಿಕ್ರಿಯೆ ಮಹತ್ವವಾದುದು. "ಮೊದಲನೆಯದಾಗಿ ಇಂಗ್ಲೆಂಡಿನಂತಹ ವಿದೇಶಗಳಲ್ಲಿ ಭೂಅಡಿಯ ಗಣಿಗಳಲ್ಲಿ ಮಹಿಳೆಯರಿಗೆ ಅವಕಾಶ ಇಲ್ಲದೇ ಹೋದರೂ ಪರ್ಯಾಯ ಮಾರ್ಗಗಳಿಂದ ಮಹಿಳೆಯರನ್ನು ಇತರ ಉದ್ಯೋಗಗಳಲ್ಲಿ ತೊಡಗಿಸುವುದಕ್ಕೆ ಅವಕಾಶಗಳಿವೆ. ಅಲ್ಲದೆ ಆ ದೇಶಗಳಲ್ಲಿ ಪುರುಷರನ್ನು ಒತ್ತಾಯಿಸಿ ಗಣಿಗಳಲ್ಲಿ ಕಾರ್ಯ

ತೆಗೆದುಕೊಳ್ಳುತ್ತಾರೆ. ನಾನು ಕೆಲವೇ ದಿನಗಳ ಹಿಂದೆ ಓದಿದ ಒಂದು ವರದಿಯಂತೆ 1941 ರಲ್ಲಿ ಬೆಲ್ಜಿಯಂ ದೇಶದಲ್ಲಿ ಯುದ್ಧಕ್ಕೆಂದೇ ಆಯ್ಕೆ ಮಾಡಿಕೊಳ್ಳಲಾದ ದರ್ಜೆಯ ನೌಕರರನ್ನು ಯುದ್ಧಭೂಮಿಗೆ ಕಳಿಸದೆ ಕಲ್ಲಿದ್ದಲಿನ ಗಣಿಕಾರ್ಯಕ್ಕೆ ನೇಮಿಸಿದ್ದಾರೆ. ಈ ವಿಧವಾದ 'ಅಧಿಕಾರ' ನಮ್ಮ ದೇಶದಲ್ಲಿ ನಮಗೆ ನೀಡಲಾಗಿಲ್ಲ" (ಡಾ.ಬಾ.ಸಾ.ಅಂ.ಬ.ಭಾ: 1999: ಸಂ,10-1: ಪು-279) ಎನ್ನುತ್ತಾರೆ.

ಹಾಗೆಯೇ ಅಂಬೇಡ್ಕರ್ ಆ ಸಮಿತಿ ಮಹಿಳೆ ಸದಸ್ಯರಾದ ಶ್ರೀಮತಿ ರೇಣುಕಾ ರೇ ಅವರ ಪ್ರಶ್ನೆಗೆ ಪ್ರತಿಕ್ರಿಯಿಸಿದ್ದು ಹೀಗೆ. "1934 ರಲ್ಲಿ ಮಹಿಳಾಸಭೆಯು ತೆಗೆದುಕೊಂಡ ನಿರ್ಣಯವನ್ನು ಈ ಸಮಿತಿಯಲ್ಲಿರುವವರು ಸಂಪೂರ್ಣವಾಗಿ ಮರೆತಿದ್ದಾರೆ. ಅಂದರೆ 1929 ರಲ್ಲಿ ಭಾರತ ಸರ್ಕಾರವು ಮಹಿಳೆಯರನ್ನು ಗಣಿಕಾರ್ಯದಿಂದ ನಿಷೇಧಿಸುವ ದಿಶೆಯಲ್ಲಿ ತೆಗೆದುಕೊಂಡ ಹಲವಾರು ಕ್ರಮಗಳನ್ನು ತಿಳಿಸುತ್ತಾರೆ. ಈ ಹಲವಾರು ಕ್ರಮಗಳ ಪರಿಣಾಮ ಸುಮಾರು 1937ರ ಹೊತ್ತಿಗೆ ಮಹಿಳೆಯರನ್ನು ಗಣಿ ಕೆಲಸಗಳಿಂದ ಮುಕ್ತ ಹೊಂದುವಂತಾಯಿತು. ಈ ಸಂಗತಿಯು ಸಂಪ್ರದಾಯ ಕುರಿತು ಮಾತನಾಡಿದ ಮಹಿಳಾ ಸಭೆಗೆ ಬಹು ಮುಂಚಿತವಾಗಿಯೇ ಜಾರಿಗೊಳಿಸಲಾಗಿತ್ತು. ಈ ಕ್ರಮಕ್ಕೆ ಮಹಿಳಾ ಅಧಿವೇಶನವು ಕೈಗೊಂಡಿದ್ದ ನಿರ್ಣಯವನ್ನು ಈಗ ಬೆಂಬಲಿಸುತ್ತಿದ್ದವು ಎನ್ನುತ್ತಾರೆ. (ಡಾ.ಬಾ.ಸಾ.ಅಂ.ಬ.ಭಾ: 1999: ಸಂ,10-12: ಪು-923) ಆದ್ದರಿಂದ ಸದ್ಯದ ಪರಿಸ್ಥಿತಿಯಲ್ಲಿ ಗಣಿಕೂಲಿಕಾರರ ಬಗೆಗೆ ಅಂದರೆ ಮಹಿಳೆಯರನ್ನು ಕೂಲಿಕಾರ್ಯದಿಂದ ನಿಷೇಧಿಸುವ ಕ್ರಮ ಸರಿಯಾದುದಲ್ಲ. ಹಾಗೆಯೇ ಇಂದಿನ ಮಹಿಳಾ ಕೂಲಿಕಾರಾರ ಭೂ ಗಣಿಗಳಲ್ಲಿ ಕಾರ್ಯ ಮಾಡದಂತೆ ನಿರ್ಬಂಧನೆಗಳನ್ನು ಹೇರಿದರೆ ಕೂಲಿಕಾರರ ಗೃಹಪರಿಸ್ಥಿತಿಯ ಮೇಲೆ ತುಂಬಾ ಕೆಟ್ಟ ಪರಿಣಾಮವಾಗಬಹುದು. ಹಾಗಾಗಿಯೇ ಮಹಿಳೆಯರಿಗೆ ಗಣಿಕಾರ್ಯದಲ್ಲಿ ಕೆಲಸಕ್ಕೆ ಅವಕಾಶ ಕಲ್ಪಿಸಿದೆ" (ಡಾ.ಬಾ.ಸಾ.ಅಂ.ಬ.ಭಾ: 1999: ಸಂ,10-1: ಪು-146) ಎನ್ನುತ್ತಾರೆ.

ಕಾರ್ಮಿಕರ ಕುಟುಂಬದ ನೆಲೆಯಿಂದ ಈ ತಿದ್ದುಪಡಿಗೆ ಅಂಬೇಡ್ಕರ್ ವಿವರಣೆ ಗಮನಾರ್ಹವಾದುದು. "ಕಾರ್ಮಿಕರು ನೂತನ ಉದ್ದಿಮೆಗಳಿಂದ ಆಕರ್ಷಿತರಾಗಿದ್ದರೆ; ಹಾಗೆಯೇ ಮತ್ತೊಂದು ಕಾರಣವೆಂದರೆ ಕಲ್ಲಿದ್ದಲು ಕಡಿಯುವವರು ಭೂಮಿಯ ಮೇಲೆಡೆಯಲ್ಲಿಯ ಕೆಲಸದಲ್ಲಿ ತಮ್ಮ ಹೆಂಗಸರನ್ನು ಕರೆದುಕೊಂಡು ಹೋಗಿ ಅವರನ್ನು ಕೂಲಿಗೆ ಹಚ್ಚುವುದುರಿಂದ ಅವರ ಕುಟುಂಬದ ದುಡಿಮೆ ಹಾಗೂ ಆದಾಯ ಹೆಚ್ಚಾಗುತ್ತಿತ್ತು. ಈ ನಿಷೇದಾಜ್ಞೆದಿಂದಾಗಿ ಅವರು ಭೂಮಿಯ ಅಡಿಯಲ್ಲಿರುವ ಗಣಿಗಳಲ್ಲಿಯ ಕಾರ್ಯವನ್ನು ತೊರೆದುಹೋದರು. ಇದರಿಂದ ಅವರು ತಮ್ಮ ಹೆಂಗಳೆಯರ ಆದಾಯವನ್ನು ಕಳೆದುಕೊಳ್ಳಬೇಕಾಯಿತು. ಈ ಒಂದು ಪರಿಸ್ಥಿತಿಯಲ್ಲಿ ಕಲ್ಲಿದ್ದಲು ಕಡಿಯುವ ಕೂಲಿಗಳು

ಬೇರೆ ಉದ್ದಿಮೆಗಳಿಂದ ಆಕರ್ಷಿತರಾದಲ್ಲಿ ಅಪರಾಧವೇನೂ ಇಲ್ಲ" (ಡಾ.ಬಾ.ಸಾ.ಅಂ.ಬ.ಭಾ: 1999: ಸಂ.10–1: ಪು–273) ಎನ್ನುತ್ತಾರೆ.

ಸದನದಲ್ಲಿನ ಕಲ್ಲಿದ್ದಲು ಗಣಿಗಾರಿಕೆಯಲ್ಲಿ ಮಹಿಳೆಯರು ಕೆಲಸಮಾಡುವ ತಿದ್ದುಪಡಿಯ ಕುರಿತು ಅವರ ಚರ್ಚೆ ತುಂಬಾ ಮಹತ್ವವಾದುದು. "ಭೂಮಿಯೊಳಗೆ ಹೆಂಗಸರು ಕೆಲಸ ಮಾಡಬಾರದೆಂಬ ನಿಷೇದಾಜ್ಞೆಯನ್ನು ರುದ್ದುಗೊಳಿಸುವ ವಿಷಯವು ನೇರವಾಗಿ ಕಲ್ಲಿದ್ದಲಿಗೆ ಸಂಬಂಧಿಸಿದೆ. ಅದು ಮುಖ್ಯವಾದ ವಸ್ತುವೋ? ಅಲ್ಲವೋ? ಎಂಬುದು ಬೇರೆ ಪ್ರಶ್ನೆ. ಅದು ನಮಗೆ ಅತ್ಯಗತ್ಯವಾದ ವಸ್ತು. ಅದರ ಉತ್ಪಾದನೆಯಲ್ಲಿ ಸಮಸ್ಯೆಯಿದೆ. ಈ ಪರಿಸ್ಥಿತಿ ತಂತಾನೇ ಸರಿ ಹೋಗುವವರೆಗೂ ಭಾರತ ಸರ್ಕಾರ ಕಾಯಲು ಸಾಧ್ಯಾನಾ? ಎನ್ನುವ ತುರ್ತು ಪರಿಸ್ಥಿತಿಯಿಂದ ತೆಗೆದುಕೊಳ್ಳುವ ನಿರ್ಧಾರದಲ್ಲಿ "ಹೆಂಗಸರು ಭೂಮಿಯೊಳಗೆ ಕೆಲಸಮಾಡುವ ನಿಷೇಧವನ್ನು ರದ್ದು ಪಡಿಸುವ ಶಾಸನವು ಒಂದು ವ್ಯರ್ಥ ಶಾನಸವಲ್ಲ. ಅದು ಸರ್ಕಾರದ ಬೇಜವಾಬ್ದಾರಿಯ ಕಾರ್ಯವೂ ಅಲ್ಲ. ಅದೊಂದು ವಸ್ತು ಸ್ಥಿತಿಗಳಿಗೂ ಸಂದರ್ಭಕ್ಕೆ ತಕ್ಕಂತಹ ಪರಿಸ್ಥಿತಿಗಳಿಗೆ ಅನುಗುಣವಾಗಿ ಎಸಗಿದ ಕಾರ್ಯ" (ಡಾ.ಬಾ.ಸಾ.ಅಂ.ಬ.ಭಾ: 1999: ಸಂ–1: ಪು–293) ಎನ್ನುತ್ತಾರೆ.

ಕಾರ್ಮಿಕ ಸದಸ್ಯರಾಗಿ ಕೆಲಸ ನಿರ್ವಹಿಸುತ್ತಿದ್ದ ಅಂಬೇಡ್ಕರ್ ಈ ಸಂದರ್ಭ ನಿಭಾಯಿಸಬೇಕೆಂದಾಗ ಬಂದ ವಾಗ್ವಾದ ಮತ್ತು ತೆಗೆದುಕೊಂಡ ನಿರ್ಧಾರಗಳನ್ನು ಗಮನಿಸಿದರೆ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಅಂದರೆ ಒಂದೆಡೆ ಬ್ರಿಟಿಷ್ ಸ್ವಾರ್ಥದ ಆಡಳಿತ ಧೋರಣೆ ಇನ್ನೊಂದೆಡೆ ಯುದ್ಧದ ಸಂದರ್ಭದ ಒತ್ತಡಗಳ ನಡುವೆ ಸದಸ್ಯ ಮಿತ್ರರ ಮೊನಚು ಮಾತುಗಳು ಇವುಗಳ ಮಧ್ಯ ಸಿಕ್ಕಿಹಾಕಿಕೊಂಡ ಅಂಬೇಡ್ಕರ್ ಭಾವಾವೇಶಕ್ಕೆ ಒಳಗಾಗದೆ ಸಂದರ್ಭವನ್ನು ಅರಿಯಲೆತ್ನಿಸಿದರು.

ಸ್ತ್ರೀಯರಿಗೊದಗಿದ ಈ ಸಮಸ್ಯೆಯ ಬಗ್ಗೆ ಭಾವುಕರಾಗಿ ಪ್ರತಿಕ್ರಿಯಿಸುವುದಕ್ಕಿಂತ ವಾಸ್ತವದ ನೆಲೆಗಟ್ಟಿನಲ್ಲಿ ಅದನ್ನು ಗ್ರಹಿಸಿ ಇರುವ ಅವಕಾಶದಲ್ಲೇ ಅವರಿಗೆ ದೊರಕಿಸಿಕೊಡಬಹುದಾದ ನ್ಯಾಯಕ್ಕೆ ಪ್ರಯತ್ನಿಸಿದರು. ಕೇವಲ ಭಾವುಕರಾಗಿ ಸಮಸ್ಯೆಯನ್ನು ಗ್ರಹಿಸುವ ಕಾರ್ಯಕಾರಿ ಪರಿಷತ್ತಿನ ಸದಸ್ಯರ ಮನೋಭಾವದ ನಡುವೆ ಗಣಿಗಾರಿಕೆ ಏಕೆ ಅದಕ್ಕಿಂತಲೂ ನಿರ್ಧಯವಾದ ಸ್ಥಿತಿಯಲ್ಲಿ ಕೆಲಸ ಮಾಡಿ ಹೊಟ್ಟೆಹೊರೆಯಬೇಕಾಗಿದ್ದ ಬಡ ಮಹಿಳೆಯರ ಅಸಹಾಯಕತೆಯನ್ನು ಹುಟ್ಟಿನಿಂದ ಕಾಣುತ್ತಾ ಬಂದಿದ್ದ ಅಂಬೇಡ್ಕರ್‌ರಿಗೆ ಭಾರತೀಯರ ಸ್ಥಿತಿಯನ್ನು ಬಳಸಿಕೊಳ್ಳಲೆತ್ನಿಸುವ ಬ್ರಿಟಿಷ್ ಪ್ರಭುತ್ವ ಮಹಾಯುದ್ಧಕ್ಕೆ ಸಹಕಾರ ನೀಡುತ್ತವೆ ಎಂದು ಭರವಸೆ ನೀಡುತ್ತಲೇ ಏನೂ ಅರಿಯದ ಮುಗ್ದನಂತೆ ಅವರೊಂದಿಗೆ ವಾಗ್ವಾದಕ್ಕಿಳಿದಿದ್ದ ದೇಶಿ ನಾಯಕರ ನಡುವೆ ಒಬ್ಬ ಆಡಳಿತಗಾರರಾಗಿ ಆಡಳಿತಾತ್ಮಕವಾಗಿ ಅದನ್ನು ಪರಿಹರಿಸುವ ಕ್ರಮಕ್ಕೆ ಕೈಹಾಕಿದರು.

ಆದರೆ ಅವರು ಪಿತೃಪ್ರಧಾನ ಮೌಲ್ಯಗಳಿಂದ ಹೊರಬರದೇ ಮಹಿಳೆಯರನ್ನು ಕುಟುಂಬ ಹಿನ್ನಲೆಯಲ್ಲಿ ಪರಿಗಣಿಸಿರುವುದು ಗೊತ್ತಾಗುತ್ತದೆ.

ಆದ್ದರಿಂದ 1941 ಕಲ್ಲಿದ್ದಲು ಗಣಿಗಾರಿಕೆಯಲ್ಲಿ ಕೆಲಸ ಮಾಡುವ ನಿಷೇಧವನ್ನು ರದ್ದು ಪಡಿಸುವ ಶಾಸನ ಅನುಮೋದನೆ ಪಡೆಯಿತು. "ಇದರ ಮೊದಲ ಪ್ರಕಟನೆ ಮಧ್ಯಪ್ರಾಂತ್ಯಗಳಿಗಷ್ಟೆ ಅನ್ವಯವಾಗುತ್ತಿದೇ ಹೊರತು ಎಲ್ಲ ಕಲ್ಲಿದ್ದಲು ಗಣಿ ಪ್ರದೇಶಗಳಿಗೂ ಅಲ್ಲ. ಈ ಪ್ರಕಟನೆಯನ್ನು ಬಂಗಾಳ ಮತ್ತು ಬಿಹಾರಗಳಿಗೂ ವಿಸ್ತರಿಸುವ ಅವಶ್ಯಕತೆ ಇದೆ ಎಂದು ಸರ್ಕಾರಕ್ಕೆ ನವೆಂಬರಿನಲ್ಲಿ ತಿಳಿಯಿತು. ಮತ್ತು ಈ ಪ್ರಕಟನೆಯನ್ನು ಡಿಸೆಂಬರ್‌ನಲ್ಲಿ ಒರಿಸ್ಸಾಕ್ಕೆ ವಿಸ್ತರಿಸಲಾಯಿತು. ಅಲ್ಲದೆ ಹೆಂಗಸರಿಗೆ ಗಂಡಸರಿಗೆ ಕೊಟ್ಟಷ್ಟೆ ವೇತನ ಕೊಡಬೇಕು ಎಂಬ ಎಚ್ಚರಿಕೆಯನ್ನು ಸಹ ಒಳಗೊಂಡಿತ್ತು." (ಅದೇ, ಪು-147) ಇದು ಬಹಳ ಮಹತ್ವದ ವಿಷಯ ಏಕೆಂದರೆ ಮಹಿಳೆಗೂ ಉದ್ಯೋಗ ಸಮಾನತೆ ಕಲ್ಪಿಸಿದರ ಜೊತೆಗೆ ಲಿಂಗಭೇದ ಮಾಡದೇ ಸಮಾನ ಕೆಲಸಕ್ಕೆ ಸಮಾನ ವೇತನ ನೀತಿಯನ್ನು ಭಾರತದಲ್ಲಿ ಮೊಟ್ಟಮೊದಲಿಗೆ ಜಾರಿಗೊಳಿಸುವ ಕ್ರಮ ಇದಾಗಿತ್ತು.

1941 ರ ಗಣಿಗಾರಿಕೆ ಶಾಸನ ತಿದ್ದುಪಡಿ ಮಸೂದೆಯು ಮಹಿಳೆಯರಿಗೆ ಗಣಿಗಳಲ್ಲಿ ಕೆಲಸ ಮಾಡುವ ಅವಕಾಶ ಅಷ್ಟೆ ಕಲ್ಪಿಸದೇ ಮಹಿಳಾ ಕಾರ್ಮಿಕರಿಗೆ ಸೌಲಭ್ಯ ಕಲ್ಪಿಸುವ ಹಲವು ಅಂಶಗಳನ್ನು ಒಳಗೊಂಡಿತ್ತು. ಅದರಲ್ಲಿ ಹೆರಿಗೆ ಸೌಲಭ್ಯ ಶಾಸನವು ಮಹತ್ವದ್ದು. ಈ ಆ್ಯಕ್ಟ್ ಪ್ರಕಾರ "ಗಣಿಗಳಲ್ಲಿ ಕೆಲಸ ಮಾಡುವ ಒಬ್ಬ ಮಹಿಳೆಗೆ ಎಂಟು ವಾರಗಳ ಹೆರಿಗೆ ಸೌಲಭ್ಯವನ್ನು ದಿನಕ್ಕೆ ಎಂಟು ಆಣೆ ವೇತನದ ಮೇಲೆ ಪಡೆಯುವ ಸೌಲಭ್ಯವಿದೆ. ಅಂದರೆ ಮೊದಲು ನಾಲ್ಕು ವಾರಗಳ ಅವಧಿ ಹೆರಿಗೆಯ ನಂತರದ್ದು, ಪ್ರಸವ ಪೂರ್ವದ ನಾಲ್ಕು ವಾರಗಳ ಅವಧಿಯದು ಹೆಚ್ಚಿನ ವಿಶ್ರಾಂತಿಯ ಸಮಯ. ಆಗ ಮಹಿಳೆಗೆ ಬೇಕಾದ ಕೆಲಸ ಮಾಡಿ ಪೂರ್ತಿ ವೇತನವನ್ನೇ ಪಡೆಯಬಹುದು. ಪ್ರಸವ ನಂತರ ನಾಲ್ಕು ವಾರಗಳ ಅವಧಿ ಕಡ್ಡಾಯ ವಿಶ್ರಾಂತಿ ಅವಧಿ. ಈ ಸಮಯದಲ್ಲಿ ಅವಳ ಕೆಲಸ ಮಾಡದೆ ಹೆರಿಗೆ ಸೌಲಭ್ಯ ಪಡೆಯಬೇಕು. ಅದರಲ್ಲಿ ಕೆಲಸದಿಂದ ಗೈರುಹಾಜರು ಎಂಬ ಪದ ಕುರಿತುದಕ್ಕೆ ಸ್ಪಷ್ಟನೆಯಿದೆ. ಅದೇನೆಂದರೆ 'ಯಾವುದೋ ಒಂದು ದಿನ ಮಾಲಿಕನು ಗಣಿಯನ್ನು ಮುಚ್ಚಿದ್ದರೆ ಆ ದಿನಕ್ಕೆ ಮಹಿಳೆಗೆ ಹೆರಿಗೆ ಸೌಲಭ್ಯ ದೊರಕುತ್ತದೆಯೇ? ದೊರಕುವುದಿಲ್ಲ ಎಂದು ಸೂಚಿಸಲಾಗಿದೆ. ಏಕೆಂದರೆ ಕೆಲಸದಿಂದ ಗೈರುಹಾಜರಾಗುವುದು ಎಂದರೆ ಕೆಲಸ ಇದ್ದು, ಗಣಿ ಮುಚ್ಚಿರುವಾಗ ಕೆಲಸ ಇಲ್ಲ ಎಂಬುದನ್ನು" (ಅದೇ, ಪು-291,293) ತಿಳಿಸುತ್ತದೆ.

ಈ ಕಾಯ್ದೆಯನ್ನು ಪುನಃ ತಿದ್ದುಪಡಿಸಿದ ಅಂಬೇಡ್ಕರ್ ಅದಕ್ಕೆ ಹಲವು ಹೊಸ ಸಂಗತಿಗಳನ್ನು ಸೇರಿಸಿದರು. ಈ ಮೂಲಕ ಅಸ್ಪಷ್ಟವಾದ ಸಂಗತಿಗಳನ್ನು ತೆಗೆದುಹಾಕಿದರು.

ಅವರ ಪ್ರಕಾರ "ಗರ್ಭಿಣಿ ಸ್ತ್ರೀಯರ ಅಥವಾ ಭೂತಳದ ಗಣಿಗಳಲ್ಲಿ ಕಾರ್ಯ ಮಾಡುವ ಮಹಿಳೆಯರನ್ನು ಕೆಲಸದಿಂದ ನಿರೋಧಿಸುವ ಬಗೆಗೆ ಮೂಲ ಮಸೂದೆಯಲ್ಲಿ ಹೆರಿಗೆಗೆ ಮುನ್ನ ಹತ್ತು ವಾರ ಹೆರಿಗೆಯ ನಂತರ ನಾಲ್ಕು ವಾರ ಅವಧಿಗಾಗಿ ಗರ್ಭಿಣಿ ಸ್ತ್ರೀಯರನ್ನು ಕಾರ್ಯದಿಂದ ನಿರೋಧಿಸಲಾಗಿತ್ತು. ಆಯ್ಕೆ ಸಮಿತಿಯು ಹೆರಿಗೆ ಮುನ್ನ ಹತ್ತು ವಾರಗಳ ಅವಧಿಯಲ್ಲಿ ಯಾವ ಬದಲಾವಣೆಯನ್ನು ಮಾಡಿಲ್ಲ. ಆದರೆ ಹೆರಿಗೆಯ ನಂತರದ ಅವಧಿಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿದೆ. ಅಂದರೆ ಒಟ್ಟು ಮೂವತ್ತಾರು ವಾರಗಳ ನಿರೋಧ ಅವಧಿಯಲ್ಲಿ ಮೂವತ್ತೆರಡು ವಾರಗಳಂದು ಮಹಿಳೆಯರು ಭೂಮಿಯ ಅಡಿಯ ಗಣಿಗಳನ್ನು ಹೊರತುಪಡಿಸಿ ಬೇರೆ ಎಲ್ಲಿಯಾದರೂ ಕಾರ್ಯ ಮಾಡಲು ಅವಕಾಶ ನೀಡಿದೆ. ಈ ವಿಧವಾದ ಅಧಿಕ ಆದಾಯ ಪಡೆಯುವ ಸೌಕರ್ಯ ಮೂಲ ಮಸೂದೆಯಲ್ಲಿ ಇರಲಿಲ್ಲ. ಈ ಅವಧಿಯಲ್ಲಿ ಕೇವಲ ನಾಲ್ಕು ವಾರಗಳಿಂದ ಮಾತ್ರ ಅವಳು ಕೆಲಸ ಮಾಡಲು ಬರುವಂತಿರಲಿಲ್ಲ. ಅದೆಂದರೆ ಹೆರಿಗೆಯ ನಂತರದ ನಾಲ್ಕು ವಾರಗಳಾಗಿವೆ, ತಿದ್ದುಪಡಿಯ ಮಸೂದೆಯ ಪ್ರಕಾರ ಎಂಟು ಆಣೆ ದಿನಕೂಲಿಯಿಂದ ಹನ್ನೆರಡು ಆಣೆ ಪಡೆಯುವ ಅಂದರೆ ಶೇಕಡಾ ಐವತ್ತು ಹೆಚ್ಚಿನ ಆದಾಯ ಪಡೆಯಲು ಮೂಲ ಮಸೂದೆಯಲ್ಲಿ ಇಲ್ಲದ ಅವಕಾಶವನ್ನು ಕಲ್ಪಿಸಿದರು." (ಅದೇ, ಸಂ–10; ಭಾಗ–2: ಪು–925)

ಹಾಗೆಯೇ ಅದರ ಇನ್ನೊಂದು ಭಾಗದಲ್ಲಿ ವೈದ್ಯಕೀಯ ತಪಾಸಣೆ ಕುರಿತು ಪ್ರಸ್ತಾಪಿಸಿದ್ದರು. ಅದರ ಪ್ರಕಾರ ಕಾರ್ಮಿಕ ಮಹಿಳೆಯರು ಒಂದು ವೇಳೆ ಮಹಿಳಾ ವೈದ್ಯರೇ ಬೇಕೆಂದು ಕೋರಿದರೆ ಕೇವಲ ಮಹಿಳಾ ವೈದ್ಯರಲ್ಲಿಯೇ ತಪಾಸಣೆಗೆ ನೇಮಿಸುವ ಮೂಲ ಮಸೂದೆಯಲ್ಲಿ ಇಲ್ಲದ ಹೊಸ ಅಂಶವನ್ನು ಸೇರಿಸಲಾಗಿತ್ತು.

ಅದೇ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರ ಮಕ್ಕಳ ಪೋಷಣೆ ಕುರಿತು ಕಾರ್ಮಿಕ ಮಹಿಳಾ ಸದಸ್ಯೆ ರೇಣುಕಾ ರೇ ಅವರು ಕೇಳಿದ ಪ್ರಶ್ನೆಗೆ ಅಂಬೇಡ್ಕರ್ ಪ್ರತಿಕ್ರಿಯೆ ಗಮನಾರ್ಹವಾದುದು. "ಈ ಮಹಿಳೆಯರ ಮಕ್ಕಳಿಗೆ ಇದುವರೆಗೆ ಯಾವದೇ ಖಚಿತ ಏರ್ಪಾಡುಗಳನ್ನು ಮಾಡಲಾಗಿಲ್ಲ. ಆದರೆ ಕೆಲವು ಗಣಿಗಳು ಮಹಿಳಾ ಸೇವಕಿಯರಿಂದ ಕೂಡಿದ ಶಿಶುವಿಹಾರಗಳನ್ನು ಒದಗಿಸಿವೆ. ಮತ್ತೆ ಕೆಲವು ಕಲ್ಲಿದ್ದಲು ಗಣಿಗಳಲ್ಲಿ ಶಿಕ್ಷಣ ಸಂಸ್ಥೆ ಇದ್ದು, ಅಲ್ಲಿಯ ಕೆಲಸಗಾರರ ಮಕ್ಕಳಿಗೆ ಹಾಲನ್ನು ವಿತರಿಸಲಾಗುತ್ತದೆ. ಆದರೆ ಇನ್ನೂ ಮುಂದೆ ಶಿಶುವಿಹಾರಗಳ ಸಮಸ್ಯೆಯನ್ನು ಸರ್ಕಾರ ಗಂಭೀರವಾಗಿ ತೆಗೆದುಕೊಳ್ಳುವ ಮೂಲಕವೇ ಸೂಕ್ತ ಕ್ರಮಕ್ಕೆ ಮುಂದಾಗುತ್ತದೆ" (ಅದೇ, ಪು–275) ಎಂದರು. ಇದು ಅವರ ಮಕ್ಕಳ ಬಗೆಗೆ ಸೂಕ್ಷ್ಮತೆ ಸೂಚಿಸುವುದರ ಜೊತೆಗೆ ಕುಟುಂಬ ಕೆಲಸಗಳ ದ್ವಿಗುಣತೆಯನ್ನು ಅಂಬೇಡ್ಕರ್ ಗಂಭೀರವಾಗಿಯೇ ಪರಿಗಣಿಸಿರುವ ಬದ್ಧತೆಯನ್ನು ತೋರಿಸುತ್ತದೆ.

ಹಾಗೆಯೇ ಅಂಬೇಡ್ಕರ್ ದೇಶದ ಕೈಗಾರಿಕೆಯಲ್ಲಿ ಬಳಕೆಯಾಗುತ್ತಿರುವ ಮಾನವ ಸಂಪನ್ಮೂಲವಾದ ಮಹಿಳೆಯರ ಕುರಿತ ಅಂಕಿ-ಅಂಶಗಳಿಂದ ಅವರ ಸ್ಥಿತಿಯನ್ನು ನಿರೂಪಿಸಿದರು. ಅವರ ಆರೋಗ್ಯ, ಶಿಕ್ಷಣ, ವಯಸ್ಸು ಒಟ್ಟಿನಲ್ಲಿ ಅವರ ಜೀವನ ಮಟ್ಟದ ಹಿನ್ನಲೆಯಲ್ಲಿ ಕಾಯ್ದೆಗಳು, ಸ್ತ್ರೀ-ಪುರುಷರನ್ನು ಒಳಗೊಳ್ಳಬೇಕಾದ ಚಿಂತನಾತ್ಮಕ ನೆಲೆಗಳನ್ನು ತೋರಿಸುತ್ತದೆ. ಆದ್ದರಿಂದಲೇ ಮಹಿಳೆ, ಜಾತಿಯ ನೆಲೆಗಳಿಗಿರುವ ಕೊಂಡಿಗಳನ್ನು ಕತ್ತರಿಸಲು ಮಹಿಳೆ ಮನೆಯಿಂದ ಹೊರಬರಬೇಕು ಈ ಮೂಲಕ ಜಾತಿ ವ್ಯವಸ್ಥೆಯನ್ನು ನಿರ್ಮೂಲನೆ ಮಾಡಬಹುದು. ಅಂದರೆ ಅಂಬೇಡ್ಕರ್ ಯಾವುದೇ ಕಾನೂನನ್ನು ಜಾತಿಯನ್ನು ದುರ್ಬಲಗೊಳಿಸುವ ನೆಲೆಯಲ್ಲಿ ಬಳಸಿಕೊಳ್ಳಲು ಪ್ರಯತ್ನಿಸಿದರು.

1946 ರಲ್ಲಿ ಅಂಬೇಡ್ಕರ್ ಫೆಬ್ರವರಿ ಒಂದನೇ ತಾರೀಖಿನಿಂದ ಗಣಿಗಳಲ್ಲಿ ಮಹಿಳೆಯರು ಕೆಲಸ ಮಾಡುವುದನ್ನು ನಿಷೇಧಿಸಲಾಗಿದೆ ಎಂದು ಆದೇಶಿಸಿದರು. ಇದನ್ನು ಕುರಿತು ಶ್ರೀ ಲಾಲಾ ಚಂದ್ ನವಲ್‌ರಾಯಾರವರು ಕಾರ್ಮಿಕ ಸಚಿವರಾಗಿದ್ದ ಅಂಬೇಡ್ಕರಿಗೆ ಎರಡು ಪ್ರಶ್ನೆಗಳನ್ನು ಮುಂದಿಟ್ಟರು.

"ಒಂದನೆಯದು ಭಾರತದ ಕಲ್ಲಿದ್ದಲು ಗಣಿಗಳಲ್ಲಿ ಮಹಿಳಾ ಕಾರ್ಮಿಕರ ನೇಮಕವನ್ನು ಸಾರ್ವಜನಿಕ ಒತ್ತಡದ ಮೇರೆಗೆ ರದ್ದು ಪಡಿಸಲಾಯಿತೆಂಬುದು ನಿಜವೇ?", ಎರಡನೆಯದು ಮಹಿಳಾ ಕಾರ್ಮಿಕರು ತಮ್ಮ ಆರೋಗ್ಯ ಕೆಟ್ಟರೂ ತಮ್ಮ ಸಂಸಾರಗಳು ಮುರಿದರೂ ಶ್ರಮವಹಿಸಿ ದುಡಿಯುತ್ತಾರೆ ಮತ್ತು ಕಡಿಮೆ ಮಜೂರಿಯಲ್ಲಿ ತೃಪ್ತರಾಗುತ್ತಾರೆ ಎಂಬುದು ನಿಜವೇ? ಹಾಗಿಲ್ಲದಿದ್ದಲ್ಲಿ ಪುರುಷ ಬದಲಿಗೆ ಮಹಿಳೆಯರನ್ನು ಮತ್ತೆ ನೇಮಕ ಮಾಡಿಕೊಳ್ಳಲು ಇರುವ ವಿಶೇಷ ಕಾರಣಗಳೇನು? ಎಂದು ಪ್ರಶ್ನಿಸಿದರು." (ಅದೇ, ಸಂ-೧೦; ಭಾಗ-೨, ಪು-೮೧೭)

ಇದಕ್ಕೆ ಅಂಬೇಡ್ಕರ್ ಒಬ್ಬ ಕಾರ್ಮಿಕ ಸಚಿವರಾಗಿ ಪ್ರತಿಕ್ರಿಯಿಸಿದ ಸ್ವರೂಪ ಇಂತಿದೆ "ಮಹಿಳಾ ಕಾರ್ಮಿಕರನ್ನು ಕಲ್ಲಿದ್ದಲು ಗಣಿಗಳ ಅಂತರಾಳದಲ್ಲಿ ದುಡಿಯಲು ತೊಡಗಿಸಬಾರದೆಂಬುದು ಬಹಳಷ್ಟು ವರ್ಷಗಳಿಂದ ಭಾರತ ಸರ್ಕಾರದ ಉದ್ದೇಶ ಪೂರ್ವಕ ನೀತಿಯಾಗಿತ್ತು. ಭಾರತೀಯ ಗಣಿಗಳ ಅಧಿನಿಯಮ 192 ರಲ್ಲಿ ಇದರ ಉದ್ದೇಶಕ್ಕೆ ಅವಕಾಶ ಕಲ್ಪಿಸಲಾಗಿತ್ತು. 1929 ರಿಂದ ಮಹಿಳೆಯರನ್ನು ಗಣಿಯಲ್ಲಿನ ಕೆಲಸಗಳಿಂದ ಹೊರತು ಪಡಿಸುವ ಪ್ರಕ್ರಿಯೆ ಆರಂಭವಾಗಿ ಅದು 1937 ರಲ್ಲಿ ಪೂರ್ಣವಾಯಿತು. ಆದರೆ, 1941 ಎರಡನೇ ಮಹಾಯುದ್ಧ ಇತ್ಯಾದಿ ಕಾರಣದಿಂದ ಉಂಟಾದ ಪುರಷ ಕೆಲಸಗಾರರ ಕೊರತೆಯ ತೀವ್ರತೆಯಿಂದಾಗಿ ಮಹಿಳೆಯರಿಗೆ ಗಣಿಯಲ್ಲಿ ದುಡಿಯಲು ಅನುಮತಿಸಲಾಯಿತು. ಈಗ ಸರ್ಕಾರಕ್ಕೆ ಅಗತ್ಯವಿರುವಷ್ಟು ಕಲ್ಲಿದ್ದಲನ್ನು ಉತ್ಪಾದಿಸಲು ಬೇಕಾದಷ್ಟು ಪುರಷ ಕಾರ್ಮಿಕರು

ದೊರೆಯುವ ಭರವಸೆಯನ್ನು ಕಂಡುಕೊಂಡ ಕೂಡಲೇ ಗಣಿ ಗರ್ಭದಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ನೇಮಕಕ್ಕೆ ನಿಷೇಧವನ್ನು ಮತ್ತೆ ಹೇರಲಾಗಿದೆ" (ಅದೇ, ಪು-86,87) ಎನ್ನುತ್ತಾರೆ.

ಒಂದು ಹಂತದಲ್ಲಿ ಇಬ್ಬರ ಮುಖಾಮುಖಿ ಆಗುವಿಕೆ ಕ್ರಮ ಪುರುಷವಾದಿ ಭಾಷೆ, ವಿಷಯಗಳನ್ನೆ ಪ್ರಸ್ತುತಪಡಿಸಿದರೆ ಎರಡನೆಯ ಹಂತದಲ್ಲಿ ಅಂಬೇಡ್ಕರ್‌ಗೆ ಸಂದರ್ಭಕ್ಕೆ ಸಿಲುಕಿರುವ ಒತ್ತಡ ಇಕ್ಕಟ್ಟುಗಳನ್ನು ತೋರಿಸುತ್ತದೆ. ಆದ್ದರಿಂದ ಅಂಬೇಡ್ಕರ್‌ರವರು ಭಾರತೀಯ ಸಾಮಾಜಿಕತೆಯಲ್ಲಿ ಮಹಿಳೆಯನ್ನು ಸಹ ಒಂದು ಸಂದರ್ಭದ ವಸ್ತುವಾಗಿಯೇ ಬಳಕೆ ಆಗುತ್ತಿದ್ದಾಳೆ ಎಂದು ಹೇಳಬಹುದು. ಇದು ಅಂಬೇಡ್ಕರ್ ನಿರ್ಧಾರಗಳು ಒಂದು ವ್ಯವಸ್ಥೆಯ ಸಂರಚನೆ ನೆಲೆಗಳನ್ನು ಪ್ರತಿಬಿಂಬಿಸುತ್ತವೆ. ತಳಸಮುದಾಯ ಕುರಿತು ಸೂಕ್ಷ್ಮತೆಗಳನ್ನು ಇಟ್ಟುಕೊಂಡ ಅಂಬೇಡ್ಕರ್ ಈ ನಿರ್ಧಾರದ ಹಿಂದೆ ಪಾಶ್ಚಾತ್ಯರ ಒತ್ತಡವಿರುವುದು ಸಹ ದೃಢಪಡುತ್ತದೆ.

ಈ ಎಲ್ಲಾ ಆಡಳಿತಾತ್ಮಕ ಕ್ರಮಗಳನ್ನು ಈ ರೀತಿಯಾಗಿ ಗುರುತಿಸಕೊಳ್ಳಬಹುದು.

- ಮೊದಲಿಗೆ ಬ್ರಿಟಿಷರ ಅಗತ್ಯಕ್ಕಾಗಿ ಕೈಗೊಳ್ಳಲಾದ ಈ ನಿಲವು ಮಹಿಳೆಯ ವಿರೋಧವಾದದ್ದು ಎಂಬುದನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಿದರು.
- ಪರಿಸ್ಥಿತಿಯ ಅನಾನುಕೂಲದಿಂದಾಗಿ ಏರ್ಪಟ್ಟಿರುವ ಈ ಅಂಶವನ್ನು ಅನುಕೂಲ ಪರಿಸ್ಥಿತಿ ಒದಗಿದ ತಕ್ಷಣ ಹಿಂತೆಗೆದುಕೊಳ್ಳುವುದಾಗಿ ಪ್ರಕಟಿಸಿದರು.
- ಮೇಲಿನ ಎರಡು ಮೂಲಭೂತ ಅಂಶಗಳನ್ನು ಒಪ್ಪುತ್ತಲೇ ಸದ್ಯದ ಪರಿಸ್ಥಿತಿಯಲ್ಲಿ ಕೈಗೊಳ್ಳಬಹುದಾದ ಕ್ರಮದ ಬಗ್ಗೆ ಗಮನಹರಿಸಿದರು.
- ಅತ್ಯಂತ ಅಪಾಯಕಾರಿ ಘಟ್ಟಗಳಲ್ಲಿ ಮಹಿಳೆಯರಿಗೆ ಹೇರಿಕೆ ಕಾನೂನು ತರುವುದು.
- ತಾಯ್ತನದಂತಹ ಸೂಕ್ಷ್ಮ ಸ್ಥಿತಿಯಲ್ಲಿರುವ ಮಹಿಳೆಯರನ್ನು ಆದಷ್ಟು ಗುರುತಿಸಿ ತೊಂದರೆ ನಿವಾರಿಸುವುದು.
- ಹೆರಿಗೆ ಸೌಕರ್ಯ ಮಸೂದೆಯಲ್ಲಿ ತಿದ್ದುಪಡಿ ತಂದು ಹೆಚ್ಚಿನ ಅನುಕೂಲಗಳನ್ನು ಕಲ್ಪಿಸುವುದು.
- ಹೆರಿಗೆ ರಜೆಯ ಸೌಲಭ್ಯವನ್ನು ಹೊಂದಲು ಇರಬೇಕಾದ ಕನಿಷ್ಟ ಸೇವಾ ಸಂಭವದ ಸಮಯವನ್ನು 6 ತಿಂಗಳಿನಿಂದ 90 ದಿನಕ್ಕೆ ಇಳಿಸುವುದು.
- ಹೆರಿಗೆ ನಂತರದ 8 ವಾರದ ರಜೆಯನ್ನು ವಾರಕ್ಕೆ ಏರಿಸುವುದು.
- ಈ ರಜೆಗೆ ಸಂಪೂರ್ಣ ಅಧಿಕೃತತೆಯನ್ನು ಘೋಷಿಸಿ, ಭದ್ರತೆ ನೀಡುವುದು.
- ಗರ್ಭಿಣಿ ಸ್ತ್ರೀಯರ ವೈದ್ಯಕೀಯ ತಪಾಸಣೆಗೆ ಮಹಿಳಾವೈದ್ಯರನ್ನು ನೀಡುವುದು.

- ಅಗತ್ಯಬಿದ್ದ ಮಹಿಳೆಗೆ ನಾಲ್ಕು ವಾರಗಳನ್ನು ಬಿಟ್ಟು ಉಳಿದ ಹೆರಿಗೆ ರಜೆಯ ದಿನಗಳಲ್ಲಿ ಹಗುರವಾದ ಕೆಲಸಗಳಿಗೆ ಹಾಜರಾಗಲು ಅನುಮತಿ ನೀಡುವುದು.
- ಎಲ್ಲಕ್ಕಿಂತ ಹೆಚ್ಚಾಗಿ ಯುದ್ಧ ಮುಗಿದ ನಂತರ ಗಣಿಗಾರಿಕೆಯಲ್ಲಿ ಕೆಲಸವಿಲ್ಲದೆ "ಅತಂತ್ರರಾಗುವ" ಮಹಿಳೆಯರಿಗೆ ಬೇರೆಡೆ ಉದ್ಯೋಗ ಒದಗಿಸುವ ಭದ್ರತೆ ನೀಡುವುದು.

ಒಟ್ಟಿನಲ್ಲಿ ಮಹಿಳೆ ಸಮುದಾಯದ ಹಿನ್ನಲೆಯ ನೋಡುವುದಾದರೆ ಅಂಬೇಡ್ಕರ್ ಅಸ್ಪೃಶ್ಯತೆಯೊಂದಿಗೆ ಗುರುತಿಸಿಕೊಂಡು ಅಸ್ಪೃಶ್ಯ ಕಾರ್ಮಿಕರ ಪರವಾಗಿ ತೆಗೆದುಕೊಂಡ ತೀರ್ಮಾನಗಳು ಮಹಿಳಾ ಕಾರ್ಮಿಕರ ಸಂದರ್ಭದಲ್ಲಿ ಆಯಾ ಲಿಂಗಾಧಾರಿತ ಶ್ರೇಣೀಕರಣದೊಂದಿಗೆ ಗುರ್ತಿಸಲ್ಪಡುವುದಿಲ್ಲ. ಅದರಲ್ಲೂ ಪಾಶ್ಚಾತ್ಯರ ವರ್ಗಧೋರಣೆಯನ್ನು ಮೌನವಾಗಿ ವಿರೋಧಿಸುವ ಅಂಬೇಡ್ಕರ್ ಭಾರತೀಯ ಕಾರ್ಮಿಕ ಪುರುಷರ ಧೋರಣೆಗಳನ್ನು, ದೌರ್ಜನ್ಯಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಂತೆ ಕಂಡುಬರುವುದಿಲ್ಲ. ಅವರು ಇದರಲ್ಲಿ ಮಹಿಳೆಯರನ್ನು ಆಧುನೀಕರಿಸುವ ಪ್ರಯತ್ನಗಳು ಒಡಮೂಡಿವೆ. ಈ ಎಲ್ಲ ಸಂಗತಿಗಳು ಉದಾರವಾದಿತನವನ್ನು ತೋರಿಸುತ್ತವೆ ಎಂದು ಹೇಳಬಹುದು.

### ೩.೧ ಮಹಿಳೆ ಮತ್ತು ಹಿಂದೂ ಕೋಡ್‌ಬಿಲ್

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಅಂಬೇಡ್ಕರ್ ಸಂವಿಧಾನ ರಚನೆಯ ನಂತರ ನೆಹರೂ ಸಚಿವ ಸಂಪುಟದಲ್ಲಿ ಕಾನೂನಿನ ಸಚಿವರಾಗಿ ಕೆಲಸ ನಿರ್ವಹಿಸಿದರು. ಆಗ ಅವರು ಹಿಂದೂ ಕೋಡ್ ಬಿಲ್ ಅನ್ನು ತಿದ್ದುಪಡಿ ಮಾಡುವ ವಿಚಾರವನ್ನು ಕೈಗೆತ್ತಿಗೊಂಡರು. ಈ ಮುಂಚೆ ಅಂಬೇಡ್ಕರ್ ಹಿಂದೂ ಸಮಾಜದ ಅವಿಭಕ್ತ ಕುಟುಂಬದ ಮತ್ತು ಭಾರತೀಯ ಸಮಾಜದ ಶ್ರೇಣೀಕರಣ ವ್ಯವಸ್ಥೆಯಲ್ಲಿ ಮಹಿಳೆಯ ಸ್ಥಾನಮಾನಗಳ ಕುರಿತು ವಿಶ್ಲೇಷಿಸುತ್ತಾರೆ. ವಿಶ್ಲೇಷಣಾತ್ಮಕ ಅಧ್ಯಯನದ ನಂತರ ಅಂಬೇಡ್ಕರ್ ಅವರು ಮಹಿಳೆಗೆ ಸಂಬಂಧಿಸಿದ ಆಸ್ತಿಹಕ್ಕನ್ನು ಕುರಿತು 1941 ರಲ್ಲಿ ಬ್ರಿಟಿಷ್ ಸರ್ಕಾರಕ್ಕೆ ಮನವಿಯೊಂದನ್ನು ಸಲ್ಲಿಸಿದ್ದರು. ಆದರೆ ರಾಜಕೀಯ ಒತ್ತಡಗಳಿಂದಾಗಿ ಅವು ಅಷ್ಟು ಪ್ರಸ್ತುತ ಪಡೆಯಲಿಲ್ಲ.

ಸ್ವಾತಂತ್ರ್ಯ ನಂತರದ ಸರ್ಕಾರ ಅಂಬೇಡ್ಕರ್‌ನ್ನು ಗಂಭೀರವಾಗಿ ಪರಿಗಣಿಸಿತು. ಈ ಮೂಲಕ ಅವರಿಗೆ ನಿರ್ದಿಷ್ಟ ಜವಾಬ್ದಾರಿಯುತವಾದ ಹುದ್ದೆಯನ್ನು ವಹಿಸಿತು. ಆಗ ಅವರು ಜಾತಿಯ ತಾಳಿಕೆ–ಬಾಳಿಕೆ ಅಡಗಿರುವುದೇ ಸ್ವಜಾತಿ ವಿವಾಹ ಪದ್ಧತಿಯಲ್ಲಿ ಎಂದುಕೊಂಡರು. ಅಂಬೇಡ್ಕರ್ ಅದನ್ನು ವಿರೋಧಿಸುತ್ತಿದ್ದ ತಾತ್ವಿಕ ವಿಷಯಗಳನ್ನು ಹಿಂದೂ ಕೋಡ್ ಬಿಲ್‌ನ ಮುಖಾಂತರ ಜಾರಿಗೊಳಿಸಲು ಪ್ರಯತ್ನಿಸಿದರು. ಹಾಗಾಗಿ ಹಿಂದೂ ಕೋಡ್ ಬಿಲ್ ರಚಿಸಲು ಅಂಬೇಡ್ಕರ್ ಕಾತುರರಾದರು. ಅಲ್ಲದೆ ಮನು ಮತ್ತು ಆತನ ತರಹದ ಎಲ್ಲರ ವಿವಾಹ ಸಂಬಂಧಿ ಆಲೋಚನೆಗಳನ್ನು ಪರಿಶೀಲಿಸಿದರು. ಆದರೂ ಅದರಲ್ಲಿ ಪುರುಷರಿಗೆ ಸ್ತ್ರೀಯರನ್ನ

ಅಧೀನಗೊಳಿಸಲೆಂದೇ ಅಸ್ತಿತ್ವ ಪಡೆದ ಪಿತೃ ಪ್ರಧಾನತೆಯಾದ ವಿವಾಹಸಂಸ್ಥೆಯೊಳಗಿನ ಲಿಂಗಾಧಾರಿತ ತಾರತಮ್ಯವನ್ನು ಇಟ್ಟುಕೊಳ್ಳವುದರ ಮೂಲಕವೇ ಸ್ವಜಾತಿ ವಿವಾಹ ಪದ್ಧತಿಯನ್ನು ಅಂದರೆ ಬ್ರಾಹ್ಮಣ ಪಿತೃಪ್ರಧಾನತೆ ನಿರ್ಮೂಲನೆಗೊಳಿಸಲು ಅಗತ್ಯವಾದ ತಿದ್ದುಪಡಿಗಳನ್ನು ತರಲು ಪ್ರಯತ್ನಿಸಿದರು. ಈ ಎಲ್ಲಾ ಅಂಶಗಳನ್ನು ಒಳಗೊಂಡ 'ಕೂಸೆ' ಹಿಂದೂ ಕೋಡ್ ಬಿಲ್ ಆಗಿದೆ. ಅದ್ದರಿಂದ ಹಿಂದೂ ಕೋಡ್ ಬಿಲ್‌ನಲ್ಲಿ ಮಹಿಳೆ ಸಂಬಂಧ ಎಲ್ಲಾ ಅಂಶಗಳು ಜಾತಿಪದ್ಧತಿಯನ್ನು ಉಳಿಸಿಕೊಂಡಿರುವ ಮೌಲ್ಯಗಳು ಮತ್ತು ಮಹಿಳಾ ವಿರೋಧಿ ಸಂಗತಿಗಳಾದ ವಿಧವೆ, ಆಸ್ತಿ ನಿರಾಕರಣೆ, ಇತ್ಯಾದಿ ಸಂಗತಿಗಳನ್ನು ನಿರ್ವಹಿಸುತ್ತದೆ. ಇದು ಪಿತೃಪ್ರಧಾನತೆಯನ್ನು ಮುಂದುವರೆಸುತ್ತಿರುವ ವಿವಾಹ ಸಂಸ್ಥೆಯ ಲಿಂಗತಾರತಮ್ಯ ಗುಣಲಕ್ಷಣಗಳನ್ನು ನಿರ್ಮೂಲನೆಗೊಳಿಸುವುದರಲ್ಲಿ ಸಫಲವಾಗಲು ಸಾಧ್ಯವಿಲ್ಲ ಎಂದು ಹೇಳಬಹುದು. ಅದ್ದರಿಂದ ಈ ವಿವಾಹ ಸಂಬಂಧಿ ಮಸೂದೆಯು ಜಾತಿ ಒಳಗಿರುವ ಪಿತೃಪ್ರಧಾನತೆಯ ಮೌಲ್ಯಗಳಿಂದ ಗ್ರಹಿತವಾದವು.

ಈ ಹಿನ್ನಲೆಯಲ್ಲಿ ಹಿಂದೂ ಕೋಡ್ ಬಿಲ್‌ನ್ನು ಪರಿಶೀಲಿಸುವುದಾದರೆ ಇದು ಹಿಂದೂ ಸ್ತ್ರೀ–ಪುರುಷರ ಅಂತರಜಾತಿಯ ವಿವಾಹಗಳಿಗೆ ಕಾನೂನಾತ್ಮಕ ಅನಮೋದನೆ ನೀಡಿದ್ದಲ್ಲದೆ, ಮಹಿಳೆಗೆ ವಿಚ್ಛೇದನೆ ಪಡೆಯುವ ಹಕ್ಕನ್ನು ನೀಡದ ಮನುಸ್ಮೃತಿಯು ಮಹಿಳೆಯರ ಮೇಲೆ ಹೇರಿದ್ದ ನಿಯಂತ್ರಣಗಳನ್ನು ತರ್ಕಬದ್ದವಾಗಿ ಮಂಡಿಸುವ ಅಂಬೇಡ್ಕರ್ ಅದರಿಂದ ಹೊರಬರಲು ಬಯಸುವ ಮಹಿಳೆಯರಿಗೆ ವಿಚ್ಛೇದನೆ ಹಕ್ಕು ಅಗತ್ಯ ಎಂದು ತಿಳಿದು ಈ ಸಂಗತಿಯನ್ನು ಸೇರಿಸಿದ್ದಾರೆ.

ಹಾಗೆಯೇ ಜಾತಿ ಪದ್ಧತಿಯೊಂದಿಗೆ ಮತ್ತು ಪಿತೃಪ್ರಧಾನತೆಯೊಂದಿಗೆ ಮೈಗೂಡಿಸಿಕೊಂಡಿದ್ದ ಭಾರತದ ಜಮೀನ್ದಾರಿ ಪದ್ಧತಿಯು ಆಸ್ತಿಯ ಹಕ್ಕನ್ನು ಪುರುಷರಿಗೆ ವಹಿಸಿತ್ತು. ಇದು ಭೂಮಿಯ ಒಡೆತನ, ಕುಟುಂಬ ಆದಾಯದಲ್ಲಿ ಪಾಲು, ಕೃಷಿ ಉತ್ಪನ್ನದ ವಿತರಣೆ ಎಲ್ಲದರಿಂದಲೂ ಮಹಿಳೆಯರನ್ನು ಪ್ರತ್ಯೇಕಿಸಲಾಗಿತ್ತು. ಜೊತೆಗೆ ಭೂಮಿಯಲ್ಲಿ ದಿನನಿತ್ಯ ಕೆಲಸ ಮಾಡುವ ಮಹಿಳೆಯರ ದುಡಿಮೆಯನ್ನು ಅದೃಶ್ಯಗೊಳಿಸುವ ಮೂಲಕವೇ ಆಸ್ತಿಹಕ್ಕನ್ನು ನಿರಾಕರಿಸಲಾಗಿತ್ತು. ಈ ಕುರಿತು "ಮನು ಆಸ್ತಿಯ ವಿಚಾರದಲ್ಲಿ ಹೆಂಡತಿಯನ್ನು ಗುಲಾಮಳ ಸ್ಥಾನಕ್ಕೆ ಇಳಿಸಿದ್ದ" (ಡಾ.ಬಾ.ಸಾ.ಅಂ.ಬ.ಭಾ: 1999: ಸಂ–4: ಪು–51) ಅಂಬೇಡ್ಕರ್ ಈ ಮಸೂದೆ ಮುಖಾಂತರ ಮಹಿಳೆಗೆ ಆಸ್ತಿಹಕ್ಕನ್ನು ಸಾಮಾಜಿಕ ನ್ಯಾಯದ ಅಡಿಯಲ್ಲಿ ಒದಗಿಸಲು ಮುಂದಾದರು.

ಈ ಕುರಿತು 1956 ರಲ್ಲಿ ಅಂಬೇಡ್ಕರ್ ಸಿದ್ಧಾರ್ಥ ಕಾಲೇಜಿನಲ್ಲಿ ಮಾತನಾಡುತ್ತಿದ್ದರು. "ಅವರ ಪ್ರಕಾರ ಹಿಂದೂ ಕಾಯಿದೆಯ ಕೊನೆಯ ಬದಲಾವಣೆ ಮಹಿಳೆಯ ಆಸ್ತಿಹಕ್ಕಿಗೆ

ಸಂಬಂಧಿಸಿದ್ದು. 1937 ಕ್ಕೆ ಮುನ್ನ ಆಕೆ ಒಂದು ಕುಟುಂಬದ ಸೊಸೆ ಆಗಲಿ ಅಥವಾ ವಿಧವೆ ಸೊಸೆಯಾಗಲಿ ಆ ಕುಟುಂಬದಲ್ಲಿ ಆಸ್ತಿಯ ಪಾಲನ್ನು ಕೇಳುವಂತಿರಲಿಲ್ಲ. ಆದರೆ 1937 ರ ಕಾಯ್ದೆಯಲ್ಲಿ ವಿಧವೆಗೆ ತಮ್ಮ ಮೃತಪತಿಯ ಆಸ್ತಿಯನ್ನು ಪಡೆಯುವ ಹಕ್ಕನ್ನು ನೀಡಿತು. ಆದರೂ ಮಹಿಳೆಯ ಆಸ್ತಿಯಹಕ್ಕು ಅಪೂರ್ಣವಾಗಿತ್ತು. ಆದರೆ ಈಗ ಹಿಂದೂಕಾಯ್ದೆ ಮೂಲಕ ಮನೆಯ ಮಗಳಿಗೂ ಸಹ ಮಗನಷ್ಟೇ ಆಸ್ತಿ ಮೇಲೆ ಹಕ್ಕು ಇರುವ ಸಂಗತಿಯನ್ನು ಒಳಗೊಂಡಿದೆ. ಇದು ಸಮಾಜದಲ್ಲಿ ಅಳವಡಿಸಲಾಗಿರುವ ಮೌಲ್ಯಗಳನ್ನು ಸಮಾಜದಲ್ಲಿ ಅಸ್ತಿತ್ವಕ್ಕೆ ಬಂದಿರುವ ಜಾತಿವ್ಯವಸ್ಥೆಯಲ್ಲಿನ ಅಮೂಲಾಗ್ರ ಬದಲಾವಣೆಗೆ ಸಾಧ್ಯವಾಗುವುದೆಂದು ಹಿಂದೂ ಕೋಡ್ ಬಿಲ್‌ನ್ನು ರೂಪಿಸಲಾಗಿದೆ" ಎಂದರು. (ಅಂಬೇಡ್ಕರ್, ಉದೃತ; ಅಹಲಾರಂಗ್ಣೇಕರ್; 1991; ಪು–241)

ಇಷ್ಟೆಲ್ಲ ಸಂಗತಿಗಳನ್ನು ಒಳಗೊಂಡ ಈ ಕಾಯ್ದೆಯ ಮಂಡನೆಯ ಸಂದರ್ಭದಲ್ಲಿ ಅಂಬೇಡ್ಕರ್ ಅಪಾರವಾದ ವಿರೋಧವನ್ನು ಎದುರಿಸಬೇಕಾಯಿತು. ಅದನ್ನು ಸಮರ್ಥಿಸುವಾಗ ಅಂಬೇಡ್ಕರ್ ಪಾರ್ಲಿಮೆಂಟನಲ್ಲಿ ಎದ್ದು ನಿಂತು ಹೀಗೆ ನುಡಿದರು. "ಮಹಿಳೆಯ ಆಸ್ತಿಹಕ್ಕನ್ನು ಸಮರ್ಥಿಸುವ ಬೃಹಸ್ಪತಿಯನ್ನು, ವಿಚ್ಛೇದನ ಸಿದ್ಧಾಂತವನ್ನು ಪ್ರತಿಪಾದಿಸುವ "ಪರಾಶರ ಸ್ಮೃತಿ"ಯನ್ನು ಹಿಂದೂ ಮೂಲಭೂತವಾದಿ ಮುಖಂಡರ ಮುಂದೆ ಎತ್ತಿಹಿಡಿದರು. ಇದು ಹಿಂದೂಕೋಡ್ ಬಿಲ್‌ನಲ್ಲಿರುವ ತಮ್ಮ ಸಿದ್ಧಾಂತದ ಮೂಲಭೂತ ಸತ್ಯ" ಎಂದರು. (ಡಾ.ಬಾ.ಸಾ.ಅಂ.ಬ.ಭಾ: 1994: ಪು–622) ಹೀಗೆ ಅಂಬೇಡ್ಕರ್ ಹಿಂದೂಕೋಡ್ ಮಸೂದೆಯನ್ನು ಮಂಡಿಸಿದರು. ಆದರೆ ಇದು ಪಿತೃಪ್ರಧಾನ, ಧರ್ಮಪ್ರಧಾನ, ಹಾಗೂ ಜಾತಿಪ್ರಧಾನ ಗುಣಗಳನ್ನು ಸಮರ್ಥಿಸುವ ಸದಸ್ಯರ ಪ್ರತಿರೋಧದಿಂದಾಗಿ ಈ ಮಸೂದೆ ಬಹುಮತ ಗಳಿಸುವಲ್ಲಿ ವಿಫಲವಾಯಿತು. ಈ ಘಟನೆಯಿಂದ ತುಂಬಾ ಬೇಸರಗೊಂಡ ಅಂಬೇಡ್ಕರ್ ತಮ್ಮ ಮಂತ್ರಿ ಪದವಿಗೆ ಸೆಪ್ಟೆಂಬರ್ 27, 1951 ರಂದು ರಾಜೀನಾಮೆ ಸಲ್ಲಿಸಿದರು. ಇದು ಈ ಮಸೂದೆಯ ಜಾತಿ ಸಂಬಂಧಿ ಪರಿಹಾರದ ಬದ್ಧತೆಯನ್ನು ತೋರಿಸುತ್ತದೆ. ಜೊತೆಗೆ ಮಹಿಳೆಯರ ಬಗೆಗಿನ ಉದಾರ ಮನೋಭಾವನೆಯನ್ನು ಬಿಚ್ಚಿಡುತ್ತದೆ" ಎಂದು ಭಾವಿಸಿದವರು ಸಹ ನಂತರ ಈ ಘಟನೆಗೆ ಪ್ರತಿಕ್ರಿಯಿಸಿದರು. ಅನೇಕ ಸಮಾಜ ಶಾಸ್ತ್ರಜ್ಞರು ಇದೊಂದು ದುರದೃಷ್ಟಕರ ಪ್ರಸಂಗ ಎಂದು ವಿಷಾಧ ವ್ಯಕ್ತಪಡಿಸದರು. ಅದರಲ್ಲೂ ಬಾಂಬೆ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಿದ್ದ ಶ್ರೀ ಪಿ.ಬಿ.ಗಜೇಂದ್ರ ಗಡಕರ್ ಅವರು ಅಂಬೇಡ್ಕರ್ ಅವರು ವಹಿಸಿದ ಪಾತ್ರದ ಬಗ್ಗೆ ಹೀಗೆ ಅಭಿಪ್ರಾಯಪಟ್ಟಿದ್ದಾರೆ. "The Honourable Dr. Ambedkar hs played an important role in the progress of this bill and in introducing the code before the Parliament. He has shown his determination to persuade the

legislature to see it through without delay. It is well known that Dr. Ambedkar can legitimately and justly feel proud for the substantial work done by him in the drafting for our Constitution. It with the active co-operation and support of the Prime Minister who fortunately shares his Law Minister enthusiasm. The code Dr. Ambedkar is able to give it the pride of place in her statue book. I for one would hail it as time sweet revenglon the Hindu society as a whole. If Dr. Ambedkar gave us hindus our code his achievement would go down in history as a very eloquent piece of poetic justice indeed."

ಇನ್ನು ಕೆಲವರು ಇದನ್ನು "ಚರಿತ್ರೆಯ ಹಿನ್ನಡೆ" ಎಂದರು. ಅಂದರೆ ಆಧುನಿಕ ಭಾರತದಲ್ಲಿಯೂ ಮಹಿಳೆಯ ಪರಿಸ್ಥಿತಿಗಳು ಹಿಂದಿನಂತೆಯೇ ಯಥಾಪ್ರಕಾರ ಮುಂದುವರೆದಿವೆ ಎನ್ನಬಹುದು.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯನ್ನು ಬೌದ್ಧಿಕವಾಗಿ ಮತ್ತು ಸಾಮಾಜಿಕ, ಸಾಂಸ್ಕೃತಿಕವಾಗಿ ಕಡೆಗಣಿಸಲಾಗಿತ್ತು. ಗಂಡು ಹೆಣ್ಣಿನ ನಡುವೆ ಇರುವ ಈ ಲಿಂಗತಾರತಮ್ಯ, ಜಾತಿತಾರತಮ್ಯದ ಜೊತೆಗೆ ಸಂಬಂಧ ಪಡೆದಿತ್ತು. "ಹಿಂದೂ ಧರ್ಮದಲ್ಲಿ ಶೂದ್ರನು ಕೀಳು ಮಾನವನಾದರೆ ಸ್ತ್ರೀ ನೀಚಳೆಂದು ಪರಿಗಣಿಸಲ್ಪಟ್ಟಿದ್ದಾಳೆ. ಇದರಿಂದಾಗಿ ಸ್ತ್ರೀಯು ವಿವಿಧ ಹಂತದಲ್ಲಿ ಸಾಮಾಜಿಕ ಭಿನ್ನತೆಯಿಂದ ಶೂದ್ರರಿಗಿಂತ ಹೆಚ್ಚಿಗೆ ಗುರಿಯಾಗಿದ್ದಾರೆ. ಸ್ತ್ರೀ ಕಿರುಬನ ಹೃದಯದವಳು (ಋಗ್ವೇದದ) ಅವಳು ಎಲ್ಲಾ ಕೆಡುಕಿನ ಬೇರು (ಮಹಾಭಾರತ), ಅವಳು ಚಂಚಲೆ ಖಡ್ಗದಂತೆ ಹರಿತವಾದವಳು, ಬಿರುಗಾಳಿಯಂತೆ ಅಸ್ಥಿರಳು (ರಾಮಾಯಣ), ಹೆಂಗಸು ಕಾಮ ಪಿಪಾಸೆ ಉಳ್ಳವಳು, ಕುಟಲೆ, ಸ್ತ್ರೀ ಸ್ವಾತಂತ್ರ್ಯಕ್ಕೆ ಎಂದಿಗೂ ಅನರ್ಹಳು (ಮನು) ಸ್ತ್ರೀ ಒಂದು ವಸ್ತು, ಪದಾರ್ಥ, ಶಾಕ್ತ ಮುಂತಾದಿ ಸ್ತ್ರೀಯನ್ನು ವೇದೋಪನಿಷತ್ತುಗಳ ಕಾಲದಿಂದಲೂ ಕಡೆಗಣಿಸಿಕೊಂಡು ಬರಲಾಗಿತ್ತು." (ಅದೇ, ಪು-೫೧,೫೩) ಮಹಿಳೆಯು ಇಂತಹ ದಿಗ್ಬಂಧನಗಳಿಗೆ ಗುರಿಯಾದುದರಿಂದ ಅವಳ ಬಿಡುಗಡೆಗಾಗಿ ಪ್ರಯತ್ನಗಳು ಹೋರಾಟಗಳು ಚರಿತ್ರೆಯ ಉದ್ದಕ್ಕೂ ನಡೆದಿವೆ. ಜ್ಯೋತಿ ಬಾ ಫುಲೆ, ರಾಜಾರಾಮ ಮೋಹನರಾಯ್‌ರಂತವರು ಇಲ್ಲಿ ಉಲ್ಲೇಖನಾರ್ಹರು. ಇದರಲ್ಲಿ ಅಂಬೇಡ್ಕರ್ ಅವರು ಮಹಿಳೆಗೆ ಸಮಾನಹಕ್ಕು ಅಧಿಕಾರಗಳನ್ನು ಕೊಡಿಸಿಕೊಡುವಲ್ಲಿ ಮಾಡಿದ ಪ್ರಯತ್ನಗಳು ಮಹತ್ವದ್ದಾಗಿವೆ. ಈ ನಾಲ್ಕು ಮಸೂದೆಗಳ ಕುರಿತು ವಿವರವಾದ ಮಾಹಿತಿಯನ್ನು ಕೆಳಗೆ ನೀಡಲಾಗಿದೆ.

ನಂತರ 1955 ಜನವರಿಯಲ್ಲಿ ಲೋಕಸಭೆ ಸಾರ್ವತ್ರಿಕ ಚುನಾವಣೆಗಳು ನಡೆದವು. ನಂತರ ಬಹುಮತದ ಸರ್ಕಾರದ ಪಾರ್ಲಿಮೆಂಟ್‌ನ ಎರಡು ಸದನಗಳಲ್ಲಿ ಮಹಿಳೆ

ಸಂಬಂಧಿಸಿದಂತೆ ನಾಲ್ಕು ಮಸೂದೆಗಳನ್ನು ಒಂದಾದ ಮೇಲೆ ಒಂದರಂತೆ ಮಂಡಿಸಿದರು. ಈ ನಾಲ್ಕು ಮಸೂದೆಗಳ ಕುರಿತು ವಿವರವಾದ ಮಾಹಿತಿಯನ್ನು ನೀಡಲಾಗಿದೆ. ಎರಡು ಸದನಗಳ ಅನುಮೋದನೆ ದೊರೆಯಿತು. ಅದ್ದರಿಂದ 1955-56 ರಲ್ಲಿ ಮಂಡಿತವಾದ ಹಿಂದೂ ಕೋಡ್ ಬಿಲ್‌ಗೆ ಮಹಿಳಾ ನೆಲೆಯಿಂದ ಪ್ರಮುಖವಾದ ಸ್ಥಾನಹೊಂದಿದೆ. ಇದು ವಿವಾಹ ಸಂಬಂಧಿತವಾದ ಮಹಿಳೆಯರ ಹಲವು ಸಮಸ್ಯೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರೂಪಿತವಾದ ಕಾಯ್ದೆಯಾಗಿದ್ದು, ಅದರ ಪ್ರಮುಖ ಅಂಶಗಳು ಈ ರೀತಿಯಿವೆ.

**ಒಂದು** : ಬಹುಪತ್ನಿತ್ವವನ್ನು ನಿಷೇಧಿಸಿ, ಏಕಪತಿ-ಪತ್ನಿತ್ವವನ್ನು ಕಾನೂನು ಬದ್ಧಗೊಳಿಸುವುದು (Hindu Marriage Act), ಹಿಂದೂ ವಿವಾಹ ಕಾಯ್ದೆ (1955)ಯು ಬಹುಪತ್ನಿತ್ವ ಅಪರಾಧವಾಗಿ ಪರಿಗಣಿಸದೆ. ಜೊತೆಗೆ ಏಕ-ಪತ್ನಿತ್ವಕ್ಕೆ ಅನುಮತಿಯಿದೆ. ಅಂದರೆ ಇದರಲ್ಲಿ "ಅಂಬೇಡ್ಕರ್ ಅವರು ಎರಡು ರೀತಿಯ ವಿವಾಹ ಪದ್ಧತಿಗಳನ್ನು ಪ್ರಸ್ತಾಪಿಸಿದ್ದರು. ಮೊದಲನೆಯದು ಪಾರಂಪರಿಕ ವಿವಾಹಪದ್ಧತಿ (Sacramintal Marriage), ಎರಡನೆಯದು ನಾಗರೀಕ ವಿವಾಹ ಪದ್ಧತಿ (Civil Marriage), ಈ ಎರಡು ಪದ್ಧತಿಗಳು ಸಂಪೂರ್ಣವಾಗಿ ಸಂಪ್ರದಾಯದಿಂದ ಭಿನ್ನವಾಗಿರಲಿಲ್ಲ. ಏಕೆಂದರೆ ಭಾರತೀಯ ಸಂಸ್ಕೃತಿಯಲ್ಲಿಯೇ ಈ ಎರಡು ಬಗೆಯ ವಿವಾಹಗಳಿದ್ದವು. ಸಾಂಪ್ರದಾಯಿಕವಾಗಿ ಗುರು ಹಿರಿಯರು ನಿರ್ಧರಿಸಿದ ವಿವಾಹ ಮೊದಲ ಬಗೆಯವಾಗಿದ್ದರೆ, ಪರಸ್ಪರ ಪ್ರೀತಿಸಿ ಮದುವೆಯಾಗುವುದು ಗಾಂಧರ್ವ ವಿವಾಹಪದ್ಧತಿ ಎನಿಸಿತ್ತು. ಗಾಂಧರ್ವ ವಿವಾಹ ಪದ್ಧತಿಗೆ ಹೊಸ ಅಂಶಗಳನ್ನು ಸೇರಿಸಿ ಅಂಬೇಡ್ಕರ್ ಅವರು ನಾಗರಿಕ ವಿವಾಹ ಪದ್ಧತಿಯನ್ನು ರೂಪಿಸಿದಂತೆ ಕಾಣುತ್ತದೆ. ಆದರೆ ಅಂಬೇಡ್ಕರ್ ನಾಗರಿಕ ವಿವಾಹ ಪದ್ಧತಿಗೆ ಕಾನೂನಿನ ರಕ್ಷೆಯನ್ನು ಒದಗಿಸಿದರು. ಇದು ಎಲ್ಲ ಮತೀಯ ಸ್ತ್ರೀಯರನ್ನು ಸಮಾನವಾಗಿ ಪರಿಗಣಿಸಿದ ಕಾನೂನಾಗಿತ್ತು." (ಡಾ.ಬಾ.ಸಾ.ಅಂ.ಬ.ಭಾ: 2004: ಪು-600,800) ಈ ಮೂಲಕವೇ ಅಂತರ್‌ಜಾತಿಯ ವಿವಾಹ ಬಹಿಷ್ಕೃತವಲ್ಲ ಎಂದು ಏಕಪತ್ನಿತ್ವ ವ್ಯವಸ್ಥೆಯನ್ನು ಜಾರಿಗೊಳಿಸಿ, ಇದನ್ನು ಕಾನೂನು ಬದ್ಧಗೊಳಿಸಲಾಗಿದೆ. ಯಾವುದೇ ವ್ಯಕ್ತಿ ಮೊದಲನೆಯ ಪತ್ನಿ ಜೀವಂತವಿದ್ದು, ಅವಳಿಂದ ವಿಚ್ಛೇದನ ಪಡೆಯದೆ ಮರುವಿವಾಹವಾಗುವಂತಿಲ್ಲ. ಈ ರೀತಿ ವಿವಾಹಕ್ಕೆ ಕಾನೂನು ಮನ್ನಣೆ ಇರುವುದಿಲ್ಲ.

ಬಹುಪತ್ನಿತ್ವ ಪದ್ಧತಿ ಭಾರತ ದಂಡಸಂಹಿತೆ ಪ್ರಕಾರ ಅಪರಾಧ ಎಂದು ಪರಿಗಣಿಸಲಾಗಿದೆ. ಪ್ರಾಚೀನ ಹಿಂದೂ ಸಮಾಜದಲ್ಲಿ ಬಹುಪತ್ನಿತ್ವ ರೂಢಿಯಲ್ಲಿತ್ತು. ಈಗ ಭಾರತೀಯ ದಂಡಸಂಹಿತೆ 494 ಮತ್ತು 495 ನೇ ಕಲಂನ ಪ್ರಕಾರ ಶಿಕ್ಷೆಗೆ ಅರ್ಹರಾಗುತ್ತಾರೆ.

ಹಾಗೆಯೇ ಯಾವುದೇ ವ್ಯಕ್ತಿಯ ತಂದೆಯ ಸಂಬಂಧ ಮೇಲು ಮುಖವಾಗಿ 5ನೇ ತಲೆಮಾರಿನವರೆಗೆ ತಾಯಿಯ ಸಂಬಂಧ ಮೇಲು ಮುಖವಾಗಿ 3ನೇ ತಲೆಮಾರಿನವರಿಗೆ ಸಂಬಂಧದಲ್ಲಿ ವಿವಾಹವಾಗುವುದನ್ನು ಈ ಕಾಯ್ದೆಯು ನಿಷೇಧಿಸುತ್ತದೆ.

ಒಬ್ಬ ವ್ಯಕ್ತಿ ಭಾರತದಲ್ಲಿ ಮದುವೆಯಾಗಿ ನಂತರ ವಿದೇಶಕ್ಕೆ ತೆರಳಿ ಅಲ್ಲಿ ಮರುವಿವಾಹ ವಾದರೂ ಕೂಡ ಆತ ಅಪರಾಧ ಎಂದು ಕಾನೂನಿನ ಅನ್ವಯ ಪರಿಗಣಿಸಲ್ಪಡುತ್ತಾನೆ. ವಿಚ್ಛೇದನಕ್ಕೆ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿದ ಮಾತ್ರಕ್ಕೆ ಮರುವಿವಾಹಕ್ಕೆ ಈ ಕಾಯ್ದೆಯಲ್ಲಿ ಅವಕಾಶವಿಲ್ಲ. ವಿಚ್ಛೇದನ ಕ್ರಿಯೆ ಪೂರ್ಣಗೊಳ್ಳುವವರೆಗೆ ಆತ ಮತ್ತು ಆಕೆ ಮರುವಿವಾಹ ಮಾಡಿಕೊಳ್ಳುವಂತಿಲ್ಲ. ಈ ಕಾನೂನಿನ ಕಣ್ಣುತಪ್ಪಿಸಿ ಈ ರೀತಿಯ ವಿವಾಹವಾದರೂ ಕೂಡ ಅದು ಅನೂರ್ಜಿತವೆಂದೇ ಹೇಳುತ್ತದೆ. ಅಷ್ಟೆ ಅಲ್ಲ, ಈ ಕಾಯ್ದೆಯಲ್ಲಿ ಪ್ರತಿಯೊಂದು ಸಮಾಜದ ಜನತೆ ಸ್ತ್ರೀಯನ್ನು ಹೇಗೆ ಕಾಣುತ್ತಾ ಬಂದಿದೆ ಎಂಬುದನ್ನು ಆಧಾರ ಸಹಿತವಾಗಿ ಸಾಬೀತು ಪಡಿಸಲು ಪ್ರಯತ್ನಿಸಿದ ಅಂಬೇಡ್ಕರ್ ಭಾರತೀಯ ಪ್ರಾಚೀನ ಕಾಲದಿಂದ ನಿರಾಕರಿಸಿದ ವಿವಾಹ ವಿಚ್ಛೇದನ ಹಕ್ಕನ್ನು ಕಲ್ಪಿಸಿದರು. ಅವರ ಪ್ರಕಾರ "ಸಕಾರಣಗಳಿಲ್ಲದೆ ಪುರಷನಾಗಲೀ ಸ್ತ್ರೀಯಾಗಲಿ ತಾಳಿಯನ್ನು ಹರಿದುಕೊಳ್ಳುವುದಕ್ಕೆ ಬರುವುದಿಲ್ಲ. ಹಾಗೆಯೇ ಕೆಲವು ಸಕಾರಣಗಳು ಹಾಗೂ ಮೂಲಭೂತ ನ್ಯೂನತೆಗಳು ಪುರಷನಲ್ಲಿದ್ದರೆ ಅಂತಹ ವ್ಯಕ್ತಿಯಿಂದ ವಿವಾಹ ವಿಚ್ಛೇದನವನ್ನು ಪಡೆಯಬಹುದು" (ಡಾ.ಬಾ.ಸಾ.ಅಂ.ಬ.ಭಾ: ಅದೇ, ಪು-721,777) ಎಂದು ಹೇಳುತ್ತಾರೆ. ವಿವಾಹ ವಿಚ್ಛೇದನೆಗೆ ಕಾರಣಗಳ ಪಟ್ಟಿ ನೀಡುತ್ತಾರೆ. ಅವುಗಳೆಂದರೆ:

1. "ಮದುವೆ ಮಾಡಿಕೊಂಡ ವ್ಯಕ್ತಿ ಇಲ್ಲವೆ ಹೆಣ್ಣು ಸುಮಾರು ಎರಡು ವರ್ಷ ದೂರಾಗಿ ದೇಶ್ಯಾಂತರ ಹೋಗಿದ್ದರೆ,
2. ಇನ್ನೊಬ್ಬಳು ಭಾಗಿದಾರನೊಂದಿಗೆ ಬದುಕು ನಡೆಸಿದ್ದರೆ,
3. ತಾನು ಮಾಡಿಕೊಂಡ ಪುರುಷನಿಗೆ ಯಾವುದಾದರೊಂದು ಭಯಾನಕ ಸೊಂಕು, ರೋಗ ತಗುಲಿದ್ದರೆ,
4. ಗುಹ್ಯರೋಗದಿಂದ ಪೀಡಿತನಾಗಿದ್ದರೆ,
5. ಸಾಂಕ್ರಾಮಿಕ ಕುಷ್ಠರೋಗದಿಂದ ನರಳುತಿದ್ದರೆ,
6. ಮದುವೆಯಾದಂದಿನಿಂದ ಮನಸ್ವಾಸ್ಥ್ಯ ಇರದಿದ್ದರೆ,
7. ವ್ಯಭಿಚಾರಿಯಾಗಿದ್ದರೆ,
8. ಗಂಡನು ಷಂಡನಾಗಿದ್ದರೆ,
9. ಉಪಪತ್ನಿಯನ್ನು ಇಟ್ಟುಕೊಂಡರೆ,
10. ಅನ್ಯಮತಕ್ಕೆ ಮತಾಂತರಗೊಂಡಿದ್ದರೆ,
11. ಪುರುಷ ಹುಚ್ಚು ಇಲ್ಲವೆ ಬುದ್ಧಿಭ್ರಮಣೆ ಹೊಂದಿದ್ದರೆ, ವಿಚ್ಛೇದನಕ್ಕೆ ದಾವೆ ಹಾಕಿ ವಿಚ್ಛೇದನೆಯನ್ನು ಪಡೆಯಬಹುದು." (ಅದೇ, ಪು-೭೩೩) ಹಾಗೆಯೇ ವಿಚ್ಛೇದನೆ

ಜೊತೆಗೆ ಗಂಡನು ತನ್ನ ಆಸ್ತಿಯಲ್ಲಿ ಜೀವಾನಾಂಶ ಕೊಡಬೇಕಾಗುತ್ತದೆ. ಅದಕ್ಕೆ ಸಂಬಂಧಿಸಿದಂತೆ ವಿವರಣೆ ಹೀಗಿದೆ.

1. "ಗಂಡನ ನಿವ್ವಳ ವರಮಾನದ ಐದನೆಯ ಒಂದು ಭಾಗಕ್ಕೆ ಮೀರದಂತೆ ಹಣವನ್ನು ಪತ್ನಿಗೆ ಕೊಡತಕ್ಕದ್ದು.
2. ಪತಿಯ ಆಸ್ತಿಯಲ್ಲಿ ಒಂದು ಭಾಗವನ್ನು ಕೊಡತಕ್ಕದ್ದು.
3. ಆಸ್ತಿಯಲ್ಲಿ ಒಂದು ಮೊತ್ತವನ್ನು ಕೊಡತಕ್ಕದ್ದು.
4. ಪ್ರತಿ ತಿಂಗಳು ಇಂತಿಷ್ಟು ಮೊತ್ತವನ್ನು ಕೊಡತಕ್ಕದ್ದು.
5. ಅವಳಿಗೂ ಆಸ್ತಿ ಇದ್ದರೆ ಗಂಡ ಮತ್ತು ಹೆಂಡತಿಯ ಈರ್ವರ ಆಸ್ತಿಯನ್ನು ಗಮನದಲ್ಲಿಟ್ಟುಕೊಂಡು ನ್ಯಾಯಾಲಯ ತೀರ್ಮಾನ ತೆಗೆದುಕೊಳ್ಳುವುದಕ್ಕೆ ಅವಕಾಶ ಕಲ್ಪಿಸಲಾಗಿದೆ." (ಉದ್ಧೃತ: ಬಾಬುರಾವ್ ಮುಡಬಿ: 2005: ಪು–146)

ಹೀಗೆ ಈ ವಿವಾಹ ಕಾಯ್ದೆಯಲ್ಲಿ 1956 ವಿಚ್ಛೇದನಕ್ಕೆ ಪರಸ್ಪರ ಇಬ್ಬರಲ್ಲಿ ಒಬ್ಬರು ದೋಷಾರೋಪಣೆಗೆ ಒಳಪಟ್ಟಾಗ (ಶೀಲ, ಆರೋಗ್ಯ ಬಗ್ಗೆ ಇತ್ಯಾದಿ) ಮಾತ್ರ ವಿಚ್ಛೇದನಕ್ಕೆ ಅವಕಾಶವಿತ್ತು. ಆದರೆ 1976 ರಲ್ಲಿ ಜಾರಿಗೆ ಬಂದ ವಿವಾಹ ವಿಶೇಷ ಕಾನೂನು ಭಾಗ 13 ರ (ಬಿ) ಪ್ರಕಾರ ಗಂಡ ಹೆಂಡತಿ ಪರಸ್ಪರ ಒಪ್ಪಿಗೆಯಿಂದಲೂ ದಾಂಪತ್ಯದಿಂದ ಬಿಡುಗಡೆ ಹೊಂದಬಹುದು.

"ವಿವಾಹ ವಿಚ್ಛೇದನೆ ಕುರಿತು ಮೊಕ್ಕದ್ದಮೆಗಳು ನ್ಯಾಯಾಲಯದಲ್ಲಿ ದಾಖಲಾಗಿದ್ದು, ವಿಚಾರಣೆ ನಡೆಯುತ್ತಿರುವ ಸಂದರ್ಭದಲ್ಲಿ ಪತ್ನಿ ಜೀವನಾಂಶಕ್ಕೆ ಅರ್ಹಳಾಗಿರುತ್ತಾಳೆ. ನ್ಯಾಯಾಲಯವು ಪತಿಯ ಒಟ್ಟು ವರಮಾನದ ಐದನೆಯ ಭಾಗದಷ್ಟು ವರಮಾನವನ್ನು ಜೀವನಾಂಶ ನೀಡುವಂತೆ ಆದೇಶವಿದೆ. ಮೊಕ್ಕದ್ದಮೆ ಇತ್ಯರ್ಥವಾದಾಗ ಪತಿಯಿಂದ ಪತ್ನಿಗೆ ಒಟ್ಟಾಗಿ ಒಂದೇ ಮೊತ್ತದಲ್ಲಿ ಅಥವಾ ಆಕೆ ಬದುಕಿರುವವರೆಗೆ ಮಾಸಿಕವಾಗಿ ಜೀವನಾಂಶ ನೀಡುವಂತೆ ಕಲ್ಪಿಸಲಾಗಿದೆ. ಆದರೆ ವಿಚ್ಛೇದನೆ ಹೊಂದಿದ ಪತ್ನಿ ಮತ್ತು ಮರು ವಿವಾಹವಾದ ಸಂದರ್ಭದಲ್ಲಿ ಆಕೆ ಜೀವನಾಂಶಕ್ಕೆ ಅರ್ಹಳಾಗಿರುವುದಿಲ್ಲ" ಎಂದು ಹೇಳುತ್ತದೆ.

ವಿವಾಹ ವಿಚ್ಛೇದನ ಕುರಿತು ಕಾನೂನಿನಲ್ಲಿ ಇಷ್ಟೆಲ್ಲಾ ಅವಕಾಶಗಳು ಇದ್ದಾಗ್ಯೂ ಸಂಪ್ರದಾಯವಾದಿಗಳು ಇರುವ ಈ ಸಮಾಜದಲ್ಲಿ "ವಿವಾಹ ವಿಚ್ಛೇದನೆ" ಎಂಬುದು ವಾಸ್ತವವಾಗಿ ಹಿಂದೂ ಧರ್ಮದ ವಿರೋಧಿ ಅಂಶವಾಗಿ ನಿರೂಪಿತಗೊಳ್ಳುತ್ತದೆ. ಆದ್ದರಿಂದ ಇಂದಿಗೂ ಕೂಡ ಬಹುತೇಕ ಮಹಿಳೆಯರು ಜೀವನಾಂಶಕ್ಕಾಗಿ ನ್ಯಾಯಾಲಯದ ಮೊರೆ ಹೊಕ್ಕಿರುವ ಪ್ರಕರಣಗಳ ಸಂಖ್ಯೆ ಕಡಿಮೆ ಇದೆ. ದಾಖಲಾದ ಪ್ರಕರಣಗಳನ್ನೇ ವೈಭವೀಕರಿಸಲಾಗುವುದು. ವಿವಾಹ ವಿಚ್ಛೇದನೆ ಎಂಬುದು ಮಹಿಳೆಯರನ್ನು ಹಿಂಸೆಗೆ

ಒಳಪಡಿಸುವ ಬಹುಮುಖ್ಯವಾದ ಸಂಪ್ರದಾಯವಾಗಿದೆ. ಅದರ ಜೊತೆಗೆ "ಧರ್ಮಬಾಹಿರ ಮಕ್ಕಳನ್ನು ಧರ್ಮಸಮ್ಮತಿ ಗೊಳಿಸುವುದು, ಹೆಣ್ಣುಮಕ್ಕಳ ಮದುವೆ ವಯಸ್ಸನ್ನು 15 ವರ್ಷಕ್ಕೆ (ಈಗ 18 ವರ್ಷ ಆಗಿದೆ) ಏರಿಸುವುದರ ಮೂಲಕ ಅವರಿಗೆ ಸ್ವಾತಂತ್ರ್ಯವನ್ನು ಒದಗಿಸುವುದಾಗಿದೆ". ಆದರೆ ಜಾತಿ, ಮತ್ತು ಪಿತೃಪ್ರಧಾನ ಲೈಂಗಿಕ ಪಾವಿತ್ರ್ಯ ಗುಣಗಳಿಂದಾಗಿ ಇದು ಇಂದಿಗೂ ನಮ್ಮ ಸಮಾಜದ ಬಹು ಮುಖ್ಯ ಸಾಮಾಜಿಕ ಸಮಸ್ಯೆಯಲ್ಲಿ ಚರ್ಚೆಗೊಳ್ಳುತ್ತಿರುವುದು. ಅಂದರೆ ಬಾಲ್ಯವಿವಾಹ, ವೈಧವ್ಯ, ಪತಿವ್ರತೆ, ಶೀಲ–ಅಶ್ಲೀಲಗಳಲ್ಲಿ ಸುತ್ತುವರೆಯುತ್ತಿದೆ. ಇವುಗಳು ಶಿಶ್ನ ಕೇಂದ್ರಿತ ಅಧಿಪತ್ಯವನ್ನು ಅನಾವರಣಗೊಳಿಸುತ್ತವೆ.

**ಎರಡು** : ಮಹಿಳೆಗೂ ಆಸ್ತಿಹಕ್ಕನ್ನು ಕಾನೂನು ಬದ್ಧಗೊಳಿಸಲಾಯಿತು. ಅಂದರೆ ಮಹಿಳೆಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲನ್ನು (Succession Act (1956)) ಜಾರಿಗೊಳಿಸಲಾಯಿತು. ಅದರ ಪ್ರಕಾರ "ಗಂಡ ಸತ್ತರೆ ಆತನ ಆಸ್ತಿಯು ಆತನ ಹೆಂಡತಿಗೆ ಸೇರುತ್ತದೆ. ಮತ್ತು ಹೆಣ್ಣು ಮಕ್ಕಳಿಗೆ ತನ್ನ ತಂದೆ ಆಸ್ತಿಯಲ್ಲಿ ಸಮಪಾಲು ಇದ್ದು, ಅವರು ತಮ್ಮ ಆಸಕ್ತಿ ಹಾಗೂ ಇಚ್ಛೆಗೆ ಅನುಸಾರವಾಗಿ ಮಾರಾಟ ಮಾಡಬಹುದು. ಈ ವಿಷಯದಲ್ಲಿ ಅವಳು ಸಂಪೂರ್ಣ ಸ್ವತಂತ್ರಳು. ಹಾಗಯೇ ಇದು ಸಂವಿಧಾನದ 15ನೇ ವಿಧಿಗೆ ಸಂಬಂಧಿಸಿದೆ. ಇದರಲ್ಲಿ ಹಿಂದೂ ಮಹಿಳೆಯು ಈ ಕಾನೂನಿನ ಜಾರಿಯ ನಂತರ ಆಸ್ತಿಯ ಕುರಿತು ಅಂತಿಮ ಇಷ್ಟ ಪತ್ರವನ್ನು ಬರೆಯದೆ ಮರಣ ಹೊಂದಿದ್ದರೆ, ಅವಳ ಆಸ್ತಿಗೆ ಸಮನಾದ ಉತ್ತರಾಧಿಕಾರದ ಕ್ರಮವು ಅನ್ವಯಿಸುತ್ತದೆ" ಇತ್ಯಾದಿ ಅಂಶಗಳನ್ನು ತಿಳಿಸುತ್ತದೆ. (ಉದ್ಧೃತ: ಅರವಿಂದ ಮಾಲಗತ್ತಿ: ೧೯೯೧: ಪು–೧೪೩) ಜೊತೆಗೆ ಈ ಕಾಯ್ದೆಯ ಮಹತ್ವದ ಬದಲಾವಣೆಯ ಅಂಶಗಳೆಂದರೆ :

1. "ಇದುವರೆಗೆ ಧಾರ್ಮಿಕ ಫಲಾನುಭವಕ್ಕೂ, ಆಸ್ತಿಹಕ್ಕಿಗೂ ಇದ್ದ ಸಂಬಂಧವನ್ನು ತೆಗೆದುಹಾಕಿ ವಾರಸುದಾರಿಕೆ ಹಕ್ಕು ಮತ್ತು ವಾರಸದಾರಿಕೆ ಕ್ರಮವನ್ನು ವಿಧಿಸಲಾಗಿದೆ.
2. ಇದುವರೆಗೆ ಸ್ತ್ರೀಯರಿಗಿದ್ದ ಪರಿಮಿತ ಹಕ್ಕು (ಜೀವನ ಪರ್ಯಂತ ಅನುಭವಿಸುವ ಹಕ್ಕು) ತೆಗೆದುಹಾಕಿ, ಸ್ತ್ರೀಯರಿಗೆ ಯಾವುದೇ ರೀತಿಯಲ್ಲಿ ಆಸ್ತಿ ಲಭಿಸಿರಲಿ ಅವರು ಪುರುಷರಂತೆ ಸಂಪೂರ್ಣ ಹಕ್ಕುದಾರರಾಗುವರೆಂದು ಘೋಷಿಸಲಾಗಿದೆ.
3. ವಾರಸುದಾರಿಕೆಯ ಅನುಕ್ರಮಣೀಯಲ್ಲಿ ಬಹಳ ಕೆಳಗೆ ಇದ್ದ ಮೃತ ಮಗನ ಹಾಗೂ ಮೃತ ಮಗಳ ಮಗಳನ್ನು ಬಹಳ ಮುಂದೆ ತಂದು ಅವರನ್ನು ಮಗ ಮೃತ ಮಗನ ವಿಧವೆ, ಮೃತ ಮಗನ ಮಗ, ಅವನ ವಿಧವೆ, ಮೃತಮಗನ ಮಗ (ಮೊಮ್ಮಗ) ಅವನ ವಿಧವೆ, ಮಗಳು, ಮೃತ ಮಗಳು, ಮಗ ಮುಂತಾದವರನ್ನು ಪ್ರಥಮ ದರ್ಜೆಯ ವಾರಸುದಾರರನ್ನಾಗಿ ಮಾಡಲಾಗಿದೆ. ಧಾರ್ಮಿಕ ಕಾರಣದಿಂದಾಗಿ ದೂರವಿಟ್ಟಿದ್ದ ಈ

ಸ್ತ್ರೀ ಸಂಬಂಧಗಳನ್ನು ಮೃತವ್ಯಕ್ತಿಗೆ ಹತ್ತಿರದ ರಕ್ತ ಸಂಬಂಧಿಗಳಾಗುತ್ತಾರೆಂಬ ಕಾರಣದಿಂದ ಈ ಬದಲಾವಣೆ ಮಾಡಲಾಗಿದೆ.

4. ಮಿತಾಕ್ಷರ ದಯಾ ಭಾಗ ಎರಡು ಶಾಖೆಗಳಿಗೂ ಒಂದೇ ವಾರಸುದಾರಿಕೆ ನಿಯಮಾವಳಿಯನ್ನು ಅನ್ವಯಿಸಲಾಗಿದೆ.
5. ಸ್ತ್ರೀಯರ ಆಸ್ತಿ (ಸ್ತ್ರೀಧನಕ್ಕೆ) ಗೆ ಸಂಬಂಧಿಸಿದಂತೆ ವಾರಸುದಾರಿಕೆ ನಿಯಮಗಳನ್ನು ಏಕರೂಪಗೊಳಿಸಲಾಗಿದೆ. ಸ್ತ್ರೀಧನದ ಲಕ್ಷಣಗಳ ಮೇಲೆ ಈಗ ಅದು ಅವಲಂಬಿಸುವುದಿಲ್ಲ. ಸ್ತ್ರೀಧನದ ಬಗ್ಗೆ ಈವರೆಗೆ ಇದ್ದ ಎಲ್ಲ ಗೊಂದಲಗಳನ್ನು ನಿವಾರಿಸಿ ಸ್ತ್ರೀಗೆ ಯಾವ ಮೂಲದಿಂದ ಯಾವಾಗ ಯಾವ ಆಸ್ತಿಯೇ ಬರಲಿ ಅದು ಅವಳ ಸಂಪೂರ್ಣ ಆಸ್ತಿಯಾಗುತ್ತದೆಂದು ತಿಳಿಸುತ್ತದೆ.
6. ಸ್ತ್ರೀ ಹಾಗೂ ಪುರಷರ ಆಸ್ತಿ ಸಂಬಂಧವಾಗಿ ಈವರೆಗೆ ಸ್ತ್ರೀ–ಪುರುಷರ ವಾರಸುದಾರರಲ್ಲಿ ಇದ್ದ ಭೇಧಭಾವನ್ನು ಈ ಕಾನೂನು ತೆಗೆದುಹಾಕುತ್ತದೆ. ಒಂದೇ ಶ್ರೇಣಿಯ ಸಂಬಂಧಿಕರಾದಲ್ಲಿ ಸ್ತ್ರೀ–ಪುರುಷರಿಬ್ಬರೂ ಸಮಾನ ಹಕ್ಕಿನ ವಾರಸುದಾರರಾಗುತ್ತಾರೆ.
7. ಈ ವರೆಗೆ ವ್ಯಭಿಚಾರದ ಕಾರಣದಿಂದಾಗಿ ಸ್ತ್ರೀ ವಾರಸುದಾರರಿಗೆ ಇದ್ದ ಅನರ್ಹತೆಯನ್ನು ತೆಗೆದುಹಾಕಿ ಅಂತಹ ಸ್ತ್ರೀಯರ ವಾರಸುದಾರಿಕೆ ಹಕ್ಕನ್ನು ಮಾನ್ಯ ಮಾಡಲಾಗಿದೆ.
8. ಮಗನು ತಮ್ಮ ಹುಟ್ಟಿನಿಂದ ಪಡೆಯುವ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ಉಳಿಸಿಕೊಂಡಿದ್ದರು. ಮಗಳಿಗೆ ಜನ್ಮಸಿದ್ದ ಹಕ್ಕನ್ನು ಕೊಡದಿದ್ದರೂ, ತಾಯಿ ಹೆಂಡತಿ, ಮಗಳು, ಮೊಮ್ಮಗಳು ಈಗ ಒಂದನೇ ದರ್ಜೆಯ ವಾರಸುದಾರರಾಗುದರಿಂದ ಮಗ, ಮೊಮ್ಮಗ, ಮರಿ ಮಗನಿಗೆ ದೊರಕುವ ಆಸ್ತಿಯ ಪಾಲು ಕಡಿಮೆ ಆಗುತ್ತದೆ.
9. ವಾಸದ ಮನೆಯ ಬಗ್ಗೆ ಕುಟುಂಬದ ಕೆಲವು ಸದಸ್ಯರಿಗೆ ಮೊದಲು ಕೊಳ್ಳುವ ಹಕ್ಕನ್ನು ಕೊಡಲಾಗಿದೆ.
10. ಮೊಟ್ಟ ಮೊದಲ ಬಾರಿಗೆ ಅವಿಭಕ್ತ ಕುಟುಂಬದ ಆಸ್ತಿಯಲ್ಲಿರುವ ತನ್ನ ಪಾಲಿನ ಬಗ್ಗೆ ಮೃತ ಪತ್ರ ಬರೆಯುವ ಅಧಿಕಾರವನ್ನು ಸಹಭಾಗೀದಾರರಿಗೆ ಕೊಡಲಾಗಿದೆ. ಹಾಗೆಯೇ ಪ್ರಥಮ ದರ್ಜೆಯ ಸ್ತ್ರೀ ವಾರಸುದಾರರಿದ್ದಾಗ ಸಹಭಾಗಿದಾರನ ಪಾಲು ಬದುಕಿರುವ ಉಳಿದ ಸಹಭಾಗೀದಾರರಿಗೆ ಹೋಗದೆ, ವಾರಸುದಾರಿಕೆ ಮೂಲಕ ಅವನ ವಾರಸುದಾರರಿಗೆ ಸಮಾನವಾಗಿ ಹೋಗುತ್ತದೆ. ಸ್ವಯಾರ್ಜಿತ ಆಸ್ತಿ ಸ್ತ್ರೀ ಪುರುಷ ಸಂಬಂಧಿಗಳಿಗೆ ಸಮಾನವಾಗಿ ಹಂಚಿಕೆಯಾಗುತ್ತದೆ.
11. ಕಾನೂನುಬಾಹಿರ ಸಂಬಂಧದಲ್ಲಿ ಹುಟ್ಟಿದ ಮಕ್ಕಳಿಗೆ ತಾಯಿಯ ಆಸ್ತಿಯಲ್ಲಿ ಈವರೆಗೆ ಇದ್ದ ವಾರಸುದಾರಿಕೆಯ ಹಕ್ಕನ್ನು ಉಳಿಸಿಕೊಳ್ಳಲಾಗಿದೆ. ಆದರೆ ತಂದೆಯ ಪಿತ್ರಾರ್ಜಿತ

ಆಸ್ತಿಯಲ್ಲಿ ಆ ಹಕ್ಕು ಇರುವುದಿಲ್ಲ" (ಬಾಬುರಾವ್ ಮುಡಬಿ: 2005: ಪು-145,150) ಇವಿಷ್ಟು ಮಹಿಳೆ ಆಸ್ತಿಯ ಸಂಬಂಧ ಸಂಗತಿಗಳಾಗಿದ್ದು, ಇವುಗಳನ್ನು ಪ್ರಕರಣಗಳ ಮೂಲಕ ತೋರಿಸಲಾಗಿದೆ. ಅದ್ದರಿಂದ ಈ ಅಧಿನಿಯಮ ಎಂಟನೇ ಪ್ರಕರಣದಲ್ಲಿ ಸ್ತ್ರೀಯರ ಆಸ್ತಿ ಹಕ್ಕಿಗೆ ಹೊಸದಾಗಿ ಸೇರಿದ ನಿಯಮಗಳೆಂದರೆ :

ಈ ಕಾನೂನು ಜಾರಿಗೆ ಬಂದ ಮೇಲೆ ಹಿಂದೂ ಪುರುಷನೊಬ್ಬನು ಮೃತನಾದರೆ, ಹಾಗೂ ಅವನಿಗೆ ಮಿತಾಕ್ಷರ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಇದ್ದಲ್ಲಿ ಹಾಗೂ ಅವನಿಗೆ ಒಂದನೇ ದರ್ಜೆಯ ಸ್ತ್ರೀ ಸಂಬಂಧಿಗಳು (ತಾಯಿ, ಹೆಂಡತಿ, ಮಗಳು, ಮೃತ ಮಗನ, ಮಗಳು, ಮೃತ ಮಗಳು, ಮೃತ ಮಗನ ಹೆಂಡತಿ / ಮೃತ ಮೊಮ್ಮಗನ ಹೆಂಡತಿ ಅಥವಾ ಮಗಳು) ಇದ್ದಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿನ ಅವನ ಪಾಲು ಒಂದನೇ ದರ್ಜೆಯ ಎಲ್ಲಾ ಸ್ತ್ರೀ ಪುರುಷ ವಾರಸುದಾರರಿಗೆ ಸಮಾನವಾಗಿ ವಾರಸುದಾರಿಕೆಯ ಮೂಲಕ ಹೋಗುತ್ತದೆ. ಹಿಂದೂ ಪುರುಷನ ಒಂದೇ ದರ್ಜೆಯ ವಾರಸುದಾರರಲ್ಲಿ ಮೇಲ್ಕಂಡ ಸ್ತ್ರೀ ಸಂಬಂಧಿಗಳಲ್ಲದೆ, ಅವನ ಮಗ, ಮೊಮ್ಮಗ......... ಹೀಗೆ ಪುರುಷ ಸಂಬಂಧಿಗಳು ಬರುತ್ತಾರೆ. ಮೇಲೆ ತಿಳಿಸಿದ ಸ್ತ್ರೀ ಸಂಬಂಧಿಗಳು ಯಾರೂ ಇಲ್ಲದಿದ್ದಲ್ಲಿ ಅವರ ಪಾಲು ಹಿಂದಿನ ಹಿಂದೂ ಮಿತಾಕ್ಷರ ನಿಯಮದಂತೆ ಅವರ ಪುರುಷ ಸಂಬಂಧಿಗಳಿಗೆ ಉಳಿದವರ ಹಕ್ಕಿನ ಪ್ರಕಾರ ಹೋಗುತ್ತದೆ.

ಈ ಅಧಿನಿಯಮದ ಮತ್ತೊಂದು ಮಹತ್ವದ ಬದಲಾವಣೆ 14 ನೇ ಪ್ರಕರಣದಲ್ಲಿ ಇದೆ. ಹಿಂದೂ ಸ್ತ್ರೀಯೊಬ್ಬಳು ಈ ಅಧಿನಿಯಮ ಜಾರಿಗೆ ಬರುವ ಮೊದಲಾಗಲಿ ಅನಂತರವಾಗಲಿ ಯಾವುದೇ ಅಸ್ತಿಯನ್ನು ಪಡೆದಿದ್ದಲ್ಲಿ ಅವಳು ಈ ಆಸ್ತಿಯ ಸಂಪೂರ್ಣ ಮಾಲೀಕಳಾಗುತ್ತಾಳೆಂದು ಈ ಪ್ರಕರಣ ತಿಳಿಸುತ್ತದೆ. ಹಿಂದಿನ ಹಿಂದೂ ಕಾನೂನಿನಲ್ಲಿ ಕೆಲವು ಹಿಂದೂ ಸ್ತ್ರೀ ಸಂಬಂಧಿಗಳಿಗೆ ಮಾತ್ರ ಆಸ್ತಿ ಹಕ್ಕು ದೊರಕುತ್ತಿದ್ದು ಅವರ ಸ್ತ್ರೀ ಧನವನ್ನುಳಿದ ಎಲ್ಲಾ ಆಸ್ತಿಗಳಲ್ಲಿ ಕೇವಲ ಜೀವಿತಾವಧಿಯವರೆಗೆ ಅನುಭವಿಸುವ ಹಕ್ಕನ್ನು ಮಾತ್ರ ಹೊಂದಿರುತ್ತಿದ್ದರು. ಅವರ ಮರಣಾನಂತರ ಆ ಆಸ್ತಿ ಪುನಃ ಪುರಷ ಸಂಬಂಧಿಗಳಿಗೆ ಹಿಂದಿರುಗುತ್ತಿತ್ತು ಎನ್ನುವ ಹಿನ್ನೆಲೆಯಲ್ಲಿ ಈ ತಿದ್ದುಪಡಿಯನ್ನು ಅರ್ಥ ಮಾಡಿಕೊಂಡಾಗ ಅವರ ಮಹತ್ವ ತಿಳಿಯುತ್ತದೆ. ಈ ಪ್ರಕರಣ ಸ್ತ್ರೀಧನ ಹಾಗೂ ಉಳಿದ ಆಸ್ತಿ ಹಕ್ಕಿನ ನಡುವಿನ ವ್ಯತ್ಯಾಸವನ್ನು ತೆಗೆದುಹಾಕಿ ಎಲ್ಲಾ ಆಸ್ತಿಯನ್ನು ಸ್ತ್ರೀಯರ ಸಂಪೂರ್ಣ ಒಡೆತನದ ಆಸ್ತಿಯಾಗಿ ಘೋಷಿಸುತ್ತದೆ. ಸ್ತ್ರೀಯರಿಗೂ ಈ ತಮ್ಮ ಆಸ್ತಿಯನ್ನು ಮಾರುವ, ದಾನಕೊಡುವ, ಮೃತ ಪತ್ರ ಬರೆಯುವ ಹಕ್ಕನ್ನು ಒದಗಿಸಿದೆ.

ಅಂದರೆ ಕೇವಲ ಸ್ತ್ರೀ ವಾರಸುದಾರರನ್ನು (ತಾಯಿ, ಹೆಂಡತಿ, ಅವಿವಾಹಿತೆ, ವಿಧವೆ, ಗಂಡನಿಂದ ಬೇರೆಯಾದ ಮಗಳು) ಈ ಮನೆಯಲ್ಲಿ ವಾಸಿಸುತ್ತಿದ್ದು, ಗಂಡು ಮಕ್ಕಳು ಬೇರೆ ಮನೆಯಲ್ಲಿ ಬೇರೆ ಊರಿನಲ್ಲಿ ವಾಸಿಸಬಹುದಾದ ಸಂದರ್ಭವನ್ನು ಇದು ಕಲ್ಪಿಸಿಕೊಳ್ಳುವುದೇ ಇಲ್ಲ. ಇಂತಹ ಕುಟುಂಬಗಳು ದಕ್ಷಿಣ ಭಾರತದ ಕೇರಳ ಹಾಗೂ ಮಂಗಳೂರಿನ ಕರಾವಳಿ ಪ್ರದೇಶಗಳಲ್ಲಿ ಇದ್ದವು. ಅದರಲ್ಲಿ ಅಳಿತನ ಪದ್ಧತಿಯನ್ನು ಹೊಂದಿದ್ದವು. ಅಂದರೆ ಗಂಡಸರು ಸಹ ಮದುವೆಯಾದ ನಂತರ ಹೆಂಡತಿಯ ಮನೆಯಲ್ಲಿ ವಾಸಿಸುತ್ತಿದ್ದರು. ಈ ಮೂಲಕವೇ ಅವರು ಹುಟ್ಟಿದ ಮನೆಯ ವಾರಸುದಾರಿಕೆಯನ್ನು ಕಳೆದುಕೊಳ್ಳುತ್ತಿದ್ದರು. ಹಾಗಾಗಿ ಈ ಕಾನೂನಿನ ಪ್ರಕಾರ ಗಂಡು ಮಕ್ಕಳು ಮನೆಯನ್ನು ವಿಭಾಗ ಮಾಡಿಕೊಂಡು ಮಾರಾಟಮಾಡಿ ಸ್ತ್ರೀ ವಾರಸುದಾರರಿಗೆ ವಾಸಿಸುವ ಮನೆ ಇಲ್ಲದಂತೆ ಮಾಡಬಹುದು. ಹೀಗೆ ಪುರುಷ ವಾರಸುದಾರರ ಹಿತವನ್ನು ರಕ್ಷಿಸುವ ಈ ನಿಯಮ ಸ್ತ್ರೀ ವಾರಸುದಾರರ ಹಿತವನ್ನು ಕಡೆಗಣಿಸಿದೆ. ಅದ್ದರಿಂದ ಇದು ಮಹಿಳೆಗೆ ಆಸ್ತಿ ನೀಡುವ ಮೇಲ್ಪದರ ನೆಲೆಗಳನ್ನು ಮಾತ್ರ ಹೊಂದಿದೆ. ಪರಿಣಾಮ ಈ ಕಾನೂನು ಮಹಿಳೆ ಸ್ವಲ್ಪ ಚಲನಶೀಲಗೊಳ್ಳಲು ಸಾಧ್ಯವಾಗಿದೆ. ಹಾಗಾಗಿ ಅಂಬೇಡ್ಕರ್ ಮಹಿಳೆಯರನ್ನು ಉದಾರವಾಗಿ ನೋಡಲು ಪ್ರಯತ್ನಿಸಿದ್ದಾರೆ ಎಂದು ಹೇಳಬಹುದು.

**ಮೂರು** : ತಾಯಿಯನ್ನು ಮಗುವಿನ ಸಹಜ ಪೋಷಕಳೆಂದು ನಿರ್ಧರಿಸುವುದು Hindu Minorities and Guardianship Act (1956) ಇದು ಒಳಗೊಂಡ ಸಂಗತಿಗಳೆಂದರೆ "ತಾಯಿಯ ತಂದೆಯು ನೇಮಿಸಿದ ರಕ್ಷಕನನ್ನು ಬದಲಾಯಿಸಿ ಹೊಸ ರಕ್ಷಕನನ್ನು ತನ್ನ ಇಚ್ಛೆಗೆ ಅನುಸಾರವಾಗಿ ನೇಮಿಸುವುದು. ಅಪ್ರಾಪ್ತ ವಯಸ್ಕ ಮಗುವಿನ ತಾಯಿಯು ಜೀವಂತವಿದ್ದಾಗ ತಂದೆಯ ಆ ಮಗುವಿಗೆ ರಕ್ಷಕನನ್ನು ನೇಮಿಸುವುದನ್ನು ಈ ಕಾನೂನು ನಿಷೇಧಿಸುತ್ತದೆ."

**ನಾಲ್ಕು** : ಮಹಿಳೆ ದತ್ತು ಸ್ವೀಕಾರ ಹಕ್ಕು ಹಾಗೂ ವಿಚ್ಛೇದನದ ಸಂದರ್ಭದಲ್ಲಿ ನಿರ್ವಹಣಾ ಹಕ್ಕು Adoption and Maintenance Right (1956)) ಈ ಕಾಯ್ದೆಯು ಹಲವು ಸಂಗತಿಗಳನ್ನು ಒಳಗೊಂಡಿದೆ. ಅವುಗಳೆಂದರೆ :

ಅ) ಈ ಕಾನೂನಿನ ಪ್ರಕಾರ ಗಂಡು ಮತ್ತು ಹೆಣ್ಣುಮಗುವನ್ನು ಯಾವುದೇ ವ್ಯತ್ಯಾಸವಿಲ್ಲದೆ ದತ್ತು ಸ್ವೀಕರಿಸಬಹುದು. ಆದರೆ ಹಿಂದಿನ ಹಿಂದೂ ಕಾನೂನಿನಲ್ಲಿ ಹೆಣ್ಣುಮಗುವನ್ನು ದತ್ತು ಸ್ವೀಕರಿಸುವ ಅವಕಾಶವಿರಲಿಲ್ಲ.

ಆ) ಈ ಕಾನೂನಿನ ಪ್ರಕಾರ ಪತಿಯು ಜೀವಂತವಾಗಿದ್ದಾಗ ಪತ್ನಿಯು ತನ್ನ ಇಚ್ಛೆಗೆ ಅನುಸಾರವಾಗಿ ದತ್ತು ಸ್ವೀಕರಿಸಬಹುದು. ಆದರೆ ಹಿಂದಿನ ಕಾನೂನಿನಲ್ಲಿ ಮಹಿಳೆಗೆ ಈ ಅವಕಾಶವನ್ನು ನಿರಾಕರಿಲಾಗಿತ್ತು.

ಇ) ಹಿಂದಿನ ಹಿಂದೂ ಕಾನೂನಿನ ಪ್ರಕಾರ ಕನ್ಯ ಮತ್ತು ವಿಧವೆಗೆ ದತ್ತು ಸ್ವೀಕರಿಸುವ ಹಕ್ಕು ಇರಲಿಲ್ಲ. ಆದರೆ ಹಿಂದೂ ನೀತಿಸಂಹಿತೆ ಈ ಭಾಗದಲ್ಲಿ ಅವರಿಗೆ ದತ್ತು ಸ್ವೀಕರಿಸುವ ಹಕ್ಕನ್ನು ತೋರಿಸಿದೆ.

ಈ) ಹಿಂದೂ ಕಾನೂನಿನ ಪ್ರಕಾರ ಪತಿಯು ಮಕ್ಕಳನ್ನು ದತ್ತು ಪಡೆಯುವಾಗ ಪತ್ನಿಯ ಒಪ್ಪಿಗೆಯನ್ನು ಪಡೆಯುವ ಅಗತ್ಯವಿರಲಿಲ್ಲ. ಆದರೆ ಹಿಂದೂ ನೀತಿಸಂಹಿತೆಯ ಪ್ರಕಾರ ಈ ಎರಡು ಕ್ರಮಗಳನ್ನು ಪತಿಯು ಕೈಗೊಳ್ಳುವಾಗ ಪತ್ನಿಯ ಒಪ್ಪಿಗೆಯನ್ನು ಪಡೆಯಬೇಕು.

ಉ) ಸಂವಿಧಾನದ ಹನ್ನೊಂದನೇ ವಿಭಾಗದ ಪ್ರಕಾರ ತಂದೆಯು ತನಗಿಂತ ಕನಿಷ್ಠ 21 ವರ್ಷ ಸಣ್ಣ ಪ್ರಾಯದ ಮಗಳನ್ನು ಮಾತ್ರ ದತ್ತು ಸ್ವೀಕರಿಸಬಹುದು. (ವಿಶೇಷ: ಬಾ.ಸಾ.ಅಂ.ಬ.ಭಾ: ಸಂ–14–1,2: ಗಮನಿಸಿ)

ಈ ಕಾಯ್ದೆಯಲ್ಲಿ ಬಹುಪತ್ನಿತ್ವ, ಬಾಲ್ಯವಿವಾಹ, ವಿಧವೆ, ಇತ್ಯಾದಿ ಅಂಶಗಳು ಮಹಿಳಾ ಚಳುವಳಿಗಳು ಸ್ವಾತಂತ್ರ್ಯದಿಂದಲೇ ಕೈಗೆತ್ತಿಕೊಂಡಿದ್ದ ವಿಚಾರಗಳಾಗಿದ್ದರೂ ಅಂಬೇಡ್ಕರ್ ಅವಕ್ಕೊಂದು ಗಟ್ಟಿಯಾದ ನೆಲೆಯನ್ನು ಒದಗಿಸಲು ಪ್ರಯತ್ನಿಸಿದರು. ಮಹಿಳಾ ಚಳುವಳಿಗಳು ಮಹಿಳೆಯರ ಕೊರತೆಗಳನ್ನು ಗುರುತಿಸಿ ಅವುಗಳ ಪರಿಹಾರಕ್ಕೆ ಒತ್ತಾಯ ತರುತ್ತಿದ್ದಾಗ ಅಂಬೇಡ್ಕರ್ ಮಹಿಳೆಯರಿಗಿಂತ ಹೆಚ್ಚಿನದಾಗಿ ಪುರುಷನು ಅನುಭವಿಸುತ್ತಿರುವ ಸ್ವತಂತ್ರ್ಯ ಅವಕಾಶದ ಬಗ್ಗೆ ಗಮನಹರಿಸಿದರು. ಈ ಪೂರ್ವದ ಕಾನೂನು ಸ್ತ್ರೀಯರ ಪುನರ್ ವಿವಾಹದ ಸಾಧ್ಯತೆಗಳನ್ನು ಕಾನೂನು ಬದ್ಧಗೊಳಿಸಿತ್ತು. ಇದಕ್ಕೆ ಪ್ರತಿಯಾಗಿ ಅಂಬೇಡ್ಕರ್ ಪುರುಷನ ಒಂದಕ್ಕಿಂತ ಹೆಚ್ಚಿನ ವಿವಾಹ, ಆಸ್ತಿಯ ಮೇಲಿನ ಏಕಸ್ವಾಮ್ಯ, ಸಂತಾನದ ಮೇಲಿನ ಏಕಸ್ವಾಮ್ಯ ಇತ್ಯಾದಿಗಳನ್ನು ನಿಯಂತ್ರಿಸುವುದು ಅಗತ್ಯವೆಂದು ಪ್ರಸ್ತುತಪಡಿಸಿದರು. ಅಂದರೆ ಈ ಸಮಾಜ ಲಿಂಗಭೇಧವು ಸ್ತ್ರೀಗೆ ಹಾಕಿದ ನಿರ್ಬಂಧಗಳಿಂದಷ್ಟೆ ಅಲ್ಲದೇ ಪುರುಷನಿಗೆ ಒದಗಿಸಿದ ಸ್ವೇಚ್ಛೆಯನ್ನು ಕೂಡ ಉಲ್ಬಣಿಸಿರುವುದನ್ನು ಕಾನೂನಿನ ಮೂಲಕ ಸರಿಪಡಿಸಲು ಪ್ರಯತ್ನಿಸಿದರು.

ಅಂಬೇಡ್ಕರ್ ರೂಪಿಸಿದ ಕೋಡ್ ಬಿಲ್ ಕೇವಲ ಸುಧಾರಣೆ ಗುಣವನ್ನಷ್ಟೇ ಹೊಂದಿದಲ್ಲದೆ ಈ ಜಾತಿಪ್ರಧಾನ, ಪಿತೃಪ್ರಧಾನ ಸಮಾಜ ರಚನೆಯ ತಳಹದಿಯಲ್ಲೇ ಬುಡಮೇಲು ಮಾಡುವ ಅಂಶಗಳನ್ನು ಹೊಂದಿದ್ದರಿಂದ ಸಹಜವಾಗಿಯೇ ಅದರ ಬಗ್ಗೆ ಭಿನ್ನಾಪ್ರಾಯ ಉಂಟಾಯಿತು. ಬೇರೆಲ್ಲ ವಿಚಾರಗಳಲ್ಲಿ ಅತ್ಯಂತ ಪ್ರಗತಿಪರರೆಂದು ಗುರುತಿಸಿಕೊಂಡ ಅನೇಕ ಪುರುಷರು ಕೂಡ ಈ ಸಂದರ್ಭದಲ್ಲಿ ಅಂಬೇಡ್ಕರ್ ಅವರು ನೀಡಿದ ಸಮಾನ ಅವಕಾಶಗಳ ಕುರಿತು ಆಕ್ಷೇಪವೆತ್ತಿದರು ಮತ್ತೆ ಕೆಲವರು ಮೇಲ್ನೋಟಕ್ಕೆ ಸಮಾಧಾನದಿಂದ ಇದ್ದಂತೆ ಕಂಡು ಬಂದರೂ ಒಳಗೆ ಅಸಮಾಧಾನದಿಂದ ಕುದಿಯುತ್ತಿದ್ದರು. ಸ್ವತಃ ಅಂದಿನ ರಾಷ್ಟ್ರಪತಿಗಳಾದ ಶ್ರೀ ರಾಜೇಂದ್ರಪ್ರಸಾದ್ ಅವರೇ ಇದಕ್ಕೆ ಅಸಮ್ಮತಿ ಸೂಚಿಸಿದರು.

## ಉಲ್ಲೇಖಗಳು


೦೧. ಎಂ.ಉಷಾ, ಮಹಿಳೆ ಮತ್ತು ಅಂಬೇಡ್ಕರ್ ಚಿಂತನೆ, (ಸಂಪಾದಕರು, ಟಿ.ಆರ್.ಚಂದ್ರಶೇಖರ್: ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೨೧೩

೦೨. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೪: ಪು-೧೩೬

೦೩. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೪,೧ ಪು-೧೩೮, ೧೪೭

೦೪. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೪೧, ೩೭೯

೦೫. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೧೩೯

೦೬. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೧೪೦, ೧೪೩

೦೭. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೧೪೦, ೧೪೧

೦೮. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೧೫೧

೦೯. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೧೪೯

೧೦. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೧, ಪು-೧೫೨

೧೧. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೨, ಪು-೪೧

೧೨. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೨, ಪು-೩೭೮

೧೩. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೩: ಭಾಗ-೨, ಪು-೩೭೯

೧೪. ಪಿ.ಎಸ್.ವಿದ್ಯಾಸಾಗರ: ೨೦೦೬; ಅಂಬೇಡ್ಕರ್ ಮತ್ತು ಮಾನವೀಯ ಮೌಲ್ಯಗಳು; ಸುಮೇಧ ಪ್ರಕಾಶನ, ಗುಲ್ಬರ್ಗಾ, ಪು-೧೪

೧೫. ಮಧುಕೀಶ್ವರ: ೧೯೯೭; ಮಾನುಷಿಯ ಮಾತು; ಅಕ್ಷರ ಚಿಂತನ, ಬೆಂಗಳೂರು, ಪು, ೨೧೨-೧೩೫

೧೬. ಗೀತಾ ಜಿ: ಮಹಿಳೆ ಮತ್ತು ಸಾಮಾಜಿಕ ನ್ಯಾಯ; ಅಪ್ರಕಟಿತ; ಪು-೭೩

೧೭. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೧, ಪು-೨೭೦

೧೮. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೧, ಪು-೨೭೪

೧೯. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೨, ಪು-೯೨೩

೨೦. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೧, ಪು-೨೭೩

೨೧. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೧, ಪು-೨೯೧, ೨೯೩

೨೨. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೨, ಪು-೯೨೫

೨೩. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೧, ಪು-೨೭೫

೨೪. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೨, ಪು-೮೧೭

೨೫. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೧೦: ಭಾಗ-೨, ಪು-೮೬,೮೭

೨೬. ಡಾ.ಬಾ.ಸಾ.ಅಂ.ಬ.ಭಾ: ೧೯೯೯: ಸಂ-೦೩: ಪು-೫೧

೨೮. ಸಂ.ಮಾ.ಭರಣಿ, ಲೇ: ೧೯೯೧: ಶತಮಾನದ ಅಂಬೇಡ್ಕರ್; ಶ್ರೀ ಸಿದ್ಧಾರ್ಥ ಶಿಕ್ಷಣ ಸಂಸ್ಥೆ, ತುಮಕೂರು, ಪು-೨೪೧

೨೯. ಡಾ.ಬಾ.ಸಾ.ಅಂ.ಬ.ಭಾ: ೧೯೯೪: ಸಂ-೦೩: ಪು-೬೨೨

೩೦. ಡಾ.ಬಾ.ಸಾ.ಅಂ.ಬ.ಭಾ: ೧೯೯೪: ಸಂ-೦೩: ಪು-೫೧,೫೩

೩೧. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೪: ಭಾಗ-೧, ಪು-೬೦೦,೮೦೦

೩೨. ಡಾ.ಬಾ.ಸಾ.ಅಂ.ಬ.ಭಾ: ೨೦೦೪: ಸಂ-೧೪: ಭಾಗ-೨, ಪು-೭೭೧,೮೦೦

೩೩. ಬಾಬುರಾವ್ ಮುಡಬಿ, ೨೦೦೫; ಮಹಿಳಾ ಸಬಲೀಕರಣ - ಅಂಬೇಡ್ಕರ್ ದೃಷ್ಟಿಕೋನ; ಲಕ್ಷ್ಮಿ ಪ್ರಕಾಶನ, ಬೆಂಗಳೂರು, ಪು- ೧೪೬

೩೪. ಅರವಿಂದ ಮಾಲಗತಿ; ೧೯೯೯, ಡಾ.ಅಂಬೇಡ್ಕರ್ ವಿಚಾರಧಾರೆ; ಕನ್ನಡ ಸಂಸ್ಕೃತಿ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, ಪು, ೧೪೩

೩೫. ಬಾಬುರಾವ್ ಮುಡಬಿ, ೨೦೦೫; ಮಹಿಳಾ ಸಬಲೀಕರಣ - ಅಂಬೇಡ್ಕರ್ ದೃಷ್ಟಿಕೋನ; ಲಕ್ಷ್ಮಿ ಪ್ರಕಾಶನ, ಬೆಂಗಳೂರು, ಪು- ೧೪೫

ಅಧ್ಯಾಯ-ಆರು

# ಸಮಾರೋಪ

ಪ್ರಸ್ತುತ ಅಧ್ಯಯನವು ಮಹಿಳೆಯರು, ಜಾತಿಗಳು ಮತ್ತು ಅಂಬೇಡ್ಕರ್ ಎಂಬ ಮೂರು ಸಂಗತಿಗಳನ್ನು ಒಳಗೊಂಡಿದೆ. ಅಧ್ಯಯನದಲ್ಲಿನ ಚರ್ಚೆಯ ಸ್ವರೂಪವು ಮಹಿಳೆಯರು, ಜಾತಿಗಳಿಗೆ ಅಂಬೇಡ್ಕರ್ ಚಿಂತನಾಕ್ರಮ ಗುರುತುಗೊಳ್ಳುವ ಬಗೆಯನ್ನು ಆರು ಅಧ್ಯಾಯಗಳಲ್ಲಿ ಪ್ರಸ್ತುತ ಪಡಿಸುತ್ತದೆ.

ಪ್ರಪಂಚದ ಮಾನವ ಸಮಾಜದಲ್ಲಿ ಹಲವು ಅಸಮಾನತೆಗಳಿವೆ. ಆದರೆ ಲಿಂಗ ಸಮಾನತೆಯನ್ನು ತರುವುದು ಸ್ತ್ರೀವಾದ ಅಧ್ಯಯನಗಳ, ಹಾಗೂ ಚಳುವಳಿಗಳ ಮುಖ್ಯ ಗುರಿ. ಈ ಹಿನ್ನಲೆಯಲ್ಲಿ ಸ್ತ್ರೀವಾದಗಳು ಲಿಂಗತಾರತಮ್ಯ, ಲಿಂಗವ್ಯವಸ್ಥೆಗೆ ಸಂಬಂಧಿಸಿದಂತೆ ಪ್ರಪಂಚದ ಮಹಿಳೆಯರ ಕುರಿತಂತೆ ಅನೇಕ ಅಧ್ಯಯನಗಳನ್ನು ನಡೆಸುತ್ತವೆ. ಈ ಕೆಲಸಗಳು ಭಾರತೀಯ ಸಂದರ್ಭದಲ್ಲಿ ತನ್ನದೇ ಆದ ನೆಲೆಗಳಲ್ಲಿ ನಡೆಯುತ್ತಿವೆ. ಆದರೆ ಭಾರತೀಯ ಸಂದರ್ಭದಲ್ಲಿ ಜಾತಿಪದ್ಧತಿಯಿಂದಾಗಿ ಲಿಂಗಾಧಾರಿತ ಶ್ರೇಣೀಕರಣಗಳು ಇವೆ. ಈ ಕುರಿತ ಅಧ್ಯಯನಗಳು ತುರ್ತಾಗಿ ನಡೆಯಬೇಕಿದೆ. ಈ ಕುರಿತು ಅಧ್ಯಯನಕ್ಕೆ ತೊಡಗುವವರಿಗೆ ಹತ್ತೊಂಬತ್ತನೆಯ ಶತಮಾನದಿಂದಷ್ಟೇ ಭಾರತದ ಮಹಿಳೆಯರ ಬಗೆಗಿನ ಚಾರಿತ್ರಿಕ ಸಂಗತಿಗಳು, ದಾಖಲೆಗಳು ದೊರೆಯುವುದು ಕಂಡು ಬರುತ್ತದೆ. ಇವುಗಳು ವಸಾಹತುಶಾಹಿ ಅನುಭವಗಳ ಉತ್ಪನ್ನಗಳೇ ಆಗಿವೆ. ಇದರ ಸಂಬಂಧಿ ಬಹುತೇಕ ಸಂಗತಿಗಳು ಪ್ರಾಚೀನ ಕಾಲದಲ್ಲಿ ಮಹಿಳೆಯ ಸ್ಥಿತಿಗತಿಗಳು ಉತ್ತಮವಾಗಿದ್ದಿರಬಹುದು ಸಾಕಷ್ಟು ದೀರ್ಘಕಾಲದಿಂದಲೇ

ಅವು ದುಸ್ಥಿತಿಗಳಿಯುತ್ತಾ ಬಂದಿರುವ ಸಂಗತಿಯನ್ನು ಅಲಕ್ಷಿತ ಸಮುದಾಯದ ಅಧ್ಯಯನಗಳು ತಿಳಿಪಡಿಸುತ್ತವೆ.

ಮಹಿಳೆಯರ ಮತ್ತು ದಲಿತರ ಸ್ಥಿತಿಗಳು ಶೋಚನೀಯವಾಗಿದ್ದವು. ಆಗ ಭಾರತಕ್ಕೆ ಬ್ರಿಟಿಷರು ಆಗಮನವಾಯಿತು. ಇವರಿಗೆ ಜಾತಿಪದ್ಧತಿಯು ಅಪರಿಚಿತವಾಗಿತ್ತು. ಹಾಗಾಗಿ ಇದರ ಬಗ್ಗೆ ಅವರು ನಿರ್ಲಕ್ಷ್ಯ ವಹಿಸಿದರು. ಆದರೆ ಮಹಿಳಾ ಚಳುವಳಿಯ ಹಿನ್ನಲೆಯಲ್ಲಿ ಬಂದ ಐರೋಪ್ಯರು ಮಹಿಳೆಯರ ವಿಧವಾ, ಬಾಲ್ಯವಿವಾಹ, ಸತಿ, ಬಹುಪತ್ನಿತ್ವ ಅಂತಹ ಸಮಸ್ಯೆಗಳನ್ನು ಖಂಡಿಸುವುದರ ಜೊತೆಗೆ ಮಹಿಳೆಯರ ಪಾತ್ರಗಳನ್ನು ಕುರಿತಂತೆ, ಅವರ ಸಾಮರ್ಥ್ಯಗಳನ್ನು ಕುರಿತಂತೆ, ಶಿಕ್ಷಣ ಉದ್ಯೋಗಗಳೆಂಬ ಹೊಸ ಪರಿಕಲ್ಪನೆಯನ್ನು ಬಿತ್ತುವುದು ಕಂಡುಬರುತ್ತದೆ. ಈ ಕಲ್ಪನೆಗಳನ್ನು, ಆದರ್ಶಗಳನ್ನು ಆರಂಭದ ಭಾರತೀಯ ಸಮಾಜ ಸುಧಾರಕರು (ರಾಜಾರಾಮಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ, ರಾನಡೆ) ಏಕರೂಪಿನೆಲೆಯಲ್ಲಿ ಗ್ರಹಿಸಿ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಇವರು ತುಂಬಾ ದೀರ್ಘಕಾಲ ಚಲನೆ ಇಲ್ಲದೆಯೇ ಕ್ಷೀಣವಾಗಿದ್ದ ಮಹಿಳೆಯರ ಸ್ಥಿತಿಗಳನ್ನು ನಿಧನಾವಾಗಿ ಪ್ರಗತಿಯ ಪಥದಡೆಗೆ ಚಲಿಸ ತೊಡಗಿದವು ಎಂದು ಭಾವಿಸಿರುವುದು ಕಂಡು ಬರುತ್ತದೆ. ಹೀಗೆ ಆಧುನಿಕತೆಯಿಂದ ಬಂದ ಆದರ್ಶಗಳನ್ನು ಕಲ್ಪನೆಗಳನ್ನು ಅಳವಡಿಸಿಕೊಳ್ಳುವ ಅವರು ಮಹಿಳೆಯರಿಗೆ ಏನುಬೇಕು ಅಂತಕೇಳದೆ, ಮಹಿಳೆಯರನ್ನು ಆಧುನೀಕರಿಸುವ ಪ್ರಯತ್ನಗಳು ಅವರ ಶಿಕ್ಷಣ ಕಾರ್ಯಕ್ರಮಗಳಿಂದ ತಿಳಿದು ಬರುತ್ತದೆ.

ಅಷ್ಟೋತ್ತಿಗೆ ರಾಷ್ಟ್ರೀಯ ಚಳುವಳಿ ತೀವ್ರಗೊಂಡಿತು. ಬ್ರಿಟಿಷ್‌ರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಜಾತಿ ಪ್ರಶ್ನೆಗಳು ಜ್ಯೋತಿ ಬಾ ಪುಲೆ, ಅಂಬೇಡ್ಕರ್‌ರಿಂದ ಪ್ರಚಲತ ಪಡೆದವು. ಅಲ್ಲದೆ ಅಸ್ಪೃಶ್ಯರ ಸಮಸ್ಯೆಗಳಾಗಿ ಗುರುತುಗೊಂಡವು. ಈ ಹಿನ್ನಲೆಯಲ್ಲಿ ಮಹಿಳೆ ಮತ್ತು ಜಾತಿ ವಿಷಯಗಳು ತನ್ನದೇ ಆದ ನೆಲೆಯಲ್ಲಿ ಪ್ರಸ್ತುತಗೊಂಡವು. ಅವುಗಳನ್ನು ಕುರಿತ ಪಾಶ್ಚಾತ್ಯ ದೃಷ್ಟಿಕೋನವು ಭಾರತವು ಲಿಂಗತಾರತಮ್ಯದಿಂದ ಕೂಡಿದೆ ಎಂದು ನಿರೂಪಿಸಿದ್ದು ಅಲ್ಲದೆ ಐರೋಪ್ಯ ಸಮಾಜವು ಲಿಂಗತಾರತಮ್ಯಕ್ಕೆ ಹೊರತಾದುದು ಎಂದು ನಂಬಿಸಿತು. ಈ ಹಿನ್ನಲೆಯಲ್ಲಿ ಭಾರತೀಯ ಮಹಿಳೆಯರ ಮತ್ತು ಜಾತಿ ಸಮಸ್ಯೆಗಳು ಪ್ರತ್ಯೇಕವಾದ ಎರಡು ಮಾರ್ಗಗಳಲ್ಲಿ ಗ್ರಹಿತವಾದವು. ಮಹಿಳಾ ಪ್ರಶ್ನೆಗಳು ಪಿತೃಪ್ರಧಾನತೆ ಸಾಮಾಜಿಕ ಸಂರಚನೆಯೊಂದಿಗೆ ಗುರುತುಗೊಳಲಿಲ್ಲ. ಅಂದರೆ ಅಸ್ಪೃಶ್ಯತೆಯು ಜಾತಿಪದ್ಧತಿಯೊಂದಿಗೆ ಗುರುತುಗೊಂಡಂತೆ ವಿಧವಾ, ಸತಿ, ಬಾಲ್ಯವಿವಾಹ ಪ್ರಶ್ನೆಗಳು ಪಿತೃಪ್ರಧಾನತೆಯೊಂದಿಗೆ ಗುರುತುಗೊಳ್ಳದಿರುವುದು ಕಂಡುಬರುತ್ತದೆ.

ದೇಶಿ ದೃಷ್ಟಿಕೋನದ ಬಗೆಗೆ ಹೇಳುವುದಾದರೆ ವಚನ ಚಳುವಳಿಯಲ್ಲಿಯೇ ಮಹಿಳೆ ಮತ್ತು ಜಾತಿ ಕುರಿತ ಅಸಮಾನತೆ ವಿರುದ್ಧದ ಧ್ವನಿಗಳನ್ನು ಕಾಣಬಹುದು. ಆದರೆ ವಸಾಹತು ಸಂದರ್ಭ ಅದಕ್ಕೆ ವಿಭಿನ್ನವಾದ ಚಲನೆಯನ್ನು ನೀಡಿತು. ಈ ಮೂಲಕ ಬ್ರಿಟಿಷ್ ಶಿಕ್ಷಣ ಪಡೆದ ಭಾರತೀಯ ಸಮಾಜ ಸುಧಾರಕರು ಪರಂಪರೆ ಮತ್ತು ಆಧುನಿಕತೆಗಳೆರಡರ ಮಾರ್ಗವೊಂದನ್ನು ಮೈಗೂಡಿಸಿಕೊಳ್ಳುವುದು ಕಂಡುಬರುತ್ತದೆ. ಬಾಲ್ಯವಿವಾಹ, ವಿಧವಾ, ಸತಿ, ಶಿಕ್ಷಣ ಇತ್ಯಾದಿ ಚಟುವಟಿಕೆಗಳನ್ನು ಆಧಾರಿಸಿ ದೇಶಿ ಸುಧಾರಣಾವಾದವನ್ನು ಮೂರು ಮಾದರಿಗಳಲ್ಲಿ ಗುರುತಿಸಿಕೊಂಡಿದೆ. ರಾಜಾರಾಮಮೋಹನಾರಾಯ್, ಈಶ್ವರಚಂದ್ರ ವಿದ್ಯಾಸಾಗರ ಮೊದಲಾದ ಸುಧಾರಣಾವಾದಿಗಳು ರೂಪಿಸಿದ ಮಾದರಿಯು ಸ್ತ್ರೀ ಸುಧಾರಣೆಯಲ್ಲಿ ಜಾತಿ ಪ್ರಶ್ನೆಯನ್ನು ಅಲಕ್ಷ್ಯವಾಗಿ ಪರಿಭಾವಿಸುವುದು ಕಂಡು ಬರುತ್ತದೆ. ಜ್ಯೋತಿ ಬಾ ಪುಲೆ, ಪೆರಿಯಾರ ಕುರಿತ ಸುಧಾರಣಾವಾದದ ವರ್ಗವು ಸ್ತ್ರೀ ಸುಧಾರಣೆಗೆ ಸಮಾನಾಂತರವಾಗಿ ಜಾತಿ ಪ್ರಶ್ನೆಗಳನ್ನು ತೆಗೆದುಕೊಳ್ಳುವುದು ತಿಳಿಯುತ್ತದೆ.

ಆದರೆ ಅಂಬೇಡ್ಕರ್ ಅಲೋಚನಾಕ್ರಮವು ಜಾತಿ ಪ್ರಶ್ನೆಗಳ ಹಿನ್ನಲೆಯಲ್ಲಿ ಮಹಿಳಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಯಸುವುದು ತಿಳಿಯುತ್ತದೆ. ಅಂದರೆ ಸುಧಾರಣಾವಾದಿಗಳು ಕೈಗೆತ್ತಿಕೊಂಡಿದ್ದ ಸತಿಪದ್ಧತಿ, ವಿಧವಾ, ಬಾಲ್ಯವಿವಾಹ ಇತ್ಯಾದಿ ವಿಷಯಗಳನ್ನು ತೆಗೆದುಕೊಳ್ಳುವ ಅಂಬೇಡ್ಕರ್ ಅದನ್ನು ಭಿನ್ನವಾಗಿ ವ್ಯಾಖ್ಯಾನಿಸಲು ಪ್ರಯತ್ನಿಸುವುದು ತಿಳಿಯುತ್ತದೆ. ಬಹುಪತ್ನಿತ್ವ, ಅಸಮವಿವಾಹ, ವೈಧವ್ಯಆಚರಣೆ, ಸತಿ ಇತ್ಯಾದಿ ಸಂಪ್ರದಾಯ ಆಚರಣೆಗಳಿಗೆ ಸ್ವಜಾತಿ ವಿವಾಹ ಪದ್ಧತಿಯೇ ಕಾರಣ ಜಾತಿಸಮಸ್ಯೆಯು ಅಂತಿಮವಾಗಿ ಉಳಿಯಬೇಕೆಂಬ ಆಶಯದಲ್ಲಿ ಸ್ತ್ರೀ ಪುರುಷರ ಸಂಖ್ಯೆಯಲ್ಲಿ ಸಮಾನತೆ ಇರಲೇಬೇಕು ಎಂಬ ಧೋರಣೆ ಇದೆ. ಹುಟ್ಟಿನಲ್ಲಾಗಲಿ, ಮರಣದಲ್ಲಾಗಲಿ ಹೆಚ್ಚುವರಿಯಾದ ಹೆಣ್ಣನ್ನು ಜಾತಿಯೊಳಗೆ ಉಳಿಸುವ ಅಥವಾ ಪರಲೋಕಕ್ಕೆ ಕಳಿಸುವ ಮಾದರಿಗಳಿವೆ. ಆದರೆ ಈ ಒತ್ತಡ ಹೆಚ್ಚುವರಿ ಗಂಡಿನ ಮೇಲಿರುವುದಿಲ್ಲ ಬ್ರಹ್ಮಚರ್ಯ, ವಿವಾಹಬಾಹಿರ ಸಂಬಂಧ, ವರ್ಣಸಂಕರ ಇತ್ಯಾದಿಗಳೆಲ್ಲವು ಪುರುಷನಿಗೆ ಕೆಲವು ರಿಯಾಯಿತಿ ಸವಲತ್ತುಗಳನ್ನು ನೀಡಿವೆ. ಅವು ಆಳದಲ್ಲಿ ಸತಿ, ವಿಧವಾ, ಬಾಲ್ಯವಿವಾಹ ಇತ್ಯಾದಿ ಪ್ರಶ್ನೆಗಳು ಜಾತಿಯೊಂದಿಗೆ ತಳುಕು ಹಾಕಿಕೊಂಡಿರುವಂತಹವು. ಮಹಿಳಾ ಸಮಸ್ಯೆಗಳು ಜಾತಿ ಪ್ರಶ್ನೆಗಳೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ಅವಳ ಸಮಸ್ಯೆಗಳು ಜಾತಿಪದ್ಧತಿಯ ನಿರಾಕರಣೆಯೊಂದಿಗೆ ಪರಿಹಾರ ಹೊಂದಬಹುದಾದವು ಅದಕ್ಕೆ ಅಂತರಜಾತಿ ವಿವಾಹ ಪರಿಹಾರ ಎಂಬುದು ಅಂಬೇಡ್ಕರ್ ನಿಲುವು. ವಿವಾಹ ಸಂಸ್ಥೆಯನ್ನು ಉಳಿಸಿಕೊಂಡೇ ಮಹಿಳಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದರತ್ತ ಅಂಬೇಡ್ಕರ್ ಆಸಕ್ತಿ ಕ್ರಿಯಾಶೀಲವಾಗಿದೆ.

ಅಂಬೇಡ್ಕರ್ ಭಾರತೀಯ ಸಮಾಜವನ್ನು ಪುರಾತನ ಮತ್ತು ಆಧುನಿಕ ಸಮಾಜವೆಂದು ವಿಭಜಿಸಿಕೊಂಡಿರುವರು. ವೈದಿಕ ಧರ್ಮ ಚಿಂತನೆಗಳು ಪ್ರಸ್ತುತ ಭಾರತೀಯ ಅಸಮಾನತೆಗೆ ಕಾರಣವಾಗಿವೆ ಎಂದು ಹೇಳವುದರ ಜೊತೆಗೆ ಈ ಧರ್ಮವು ಪ್ರತಿಯೊಬ್ಬರೂ ಹುಟ್ಟಿನಿಂದ ಸಾಯುವವರೆಗಿನ ಎಲ್ಲ ಘಟ್ಟಗಳಲ್ಲಿ ತನ್ನ ಸಮ್ಮುಖದಲ್ಲಿ ಹಾದುಹೋಗುವಂತೆಯೂ, ಎಲ್ಲ ಸಾಮಾಜಿಕ ಸಂಸ್ಥೆಗಳು ತನಗೆ ನಿಷ್ಠವಾಗಿದ್ದು ತಮ್ಮ ಕೆಲಸಗಳಲ್ಲಿ ನಿರತವಾಗುವಂತೆ ಏರ್ಪಡಿಸಿಕೊಳ್ಳುತ್ತವೆ. ಅದಕ್ಕೆ ಪೂರಕವಾಗುವಂತೆ ಶಿಕ್ಷಣ, ನೀತಿಸಂಹಿತೆ, ಮೌಲ್ಯವ್ಯವಸ್ಥೆಗಳನ್ನು ರೂಪಿಸುವುದರಲ್ಲಿದೆ. ದೈವ ಕುರಿತ ಭಯ, ಭೀತಿಯನ್ನು ಬೆಳಸುತ್ತದೆ. ಈ ಹಿನ್ನಲೆಯಲ್ಲಿ ಧರ್ಮಕ್ಕೆ ಪ್ರಶ್ನಾತೀತವಾಗಿ ತಲೆ ಬಾಗುವ ಪ್ರತಿಯೊಂದು ಅಂಶವು ಮೌಲ್ಯವಾಗಿಯೂ, ಧರ್ಮದ ಅಧಿಕಾರವನ್ನು ಪ್ರಶ್ನಿಸುವ ಪ್ರಯತ್ನಗಳು ಅಪಾರಾಧಗಳಾಗಿ ಪರಿಗಣಿತವಾಗುತ್ತವೆ. ಇಂತಹ ವೈದಿಕ ಧರ್ಮ ತಾತ್ವಿಕತೆಯನ್ನು 'ನ್ಯಾಯ ಮತ್ತು ಉಪಯುಕ್ತತೆ' ಎಂಬ ಪರೀಕ್ಷೆಗೆ ಒಳಪಡಿಸಿ ಸಾಮಾಜಿಕ ಅಸಮಾನತೆ ಮತ್ತು ವೈದಿಕ ಧರ್ಮಕ್ಕೆ ಇರುವ ಸಹಸಂಬಂಧವನ್ನು ವಿವರಿಸುವುದು ಕಂಡುಬರುತ್ತದೆ. ಧರ್ಮ ಅನುಮೋದನೆಯಿಂದಲೇ ಲಿಂಗಾಧಾರಿತ ಶ್ರೇಣೀಕರಣ ಉಳಿದುಕೊಂಡಿದೆ ಅದು ಸಮಾಜದಲ್ಲಿನ ಜನರನ್ನು ಅಸ್ತಿತ್ವವಿರುವವರು ಮತ್ತು ಅಸ್ತಿತ್ವ ಹೀನರು ಎಂದು ವಿಂಗಡನೆ ಮಾಡಿದೆ. ಇಂತಹ ಅಸಮಾನತೆ ಉಳಿಸಿರುವುದು ಧಾರ್ಮಿಕ ವಿಧೇಯಕಗಳು. ಇವು ಸ್ತ್ರೀತ್ವ ನಿರ್ವಚನೆಯಲ್ಲಿ ಹಾಗೂ ಆಕೆಯ ಸ್ವತಂತ್ರ್ಯ ನಿರೂಪಣೆಯಲ್ಲಿ ವಿಚ್ಛೇದನೆ, ಶಿಕ್ಷಣ, ಯಜ್ಞಯಾಗಾದಿಗಳಿಗೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿವೆ. ಮಹಿಳೆ ಮತ್ತು ದಲಿತರನ್ನು ಬ್ರಾಹ್ಮಣ ಧರ್ಮವು ತನ್ನ ಅಧೀನತೆಗೆ ಒಳಪಡಿಸಿವೆ ಎಂಬುದು ಅಂಬೇಡ್ಕರ್‌ವಾದ ಮಹಿಳೆ ಮತ್ತು ಜಾತಿ ಪ್ರಶ್ನೆ ವೈದಿಕ ಧರ್ಮದೊಂದಿಗೆ ಮಾತ್ರ ಮುಖಾಮುಖಿಯಾಗಿರುವುದು ಕಂಡು ಬರುತ್ತದೆ.

ಈ ಸಂದರ್ಭದಲ್ಲಿ ಅಂಬೇಡ್ಕರ್ ವೇದಕಾಲೀನ ಸಮಾಜ, ಲಿಂಗ, ಜಾತಿತಾರತಮ್ಯಕ್ಕೆ ಹೊರತಾದುದು ಎಂದು ನಿರ್ಧರಿಸುವುದು ತಿಳಿಯುತ್ತದೆ.

ಬ್ರಾಹಣರು ದೇವರನ್ನು ಪದಚ್ಯುತಿಗೊಳಿಸಿ ದೇವಿಯರನ್ನು ಏಕೆ ಮೇಲಿರಿಸಿದರು ಎಂಬ ಲೇಖನದಲ್ಲಿ ಅವರು ಹಾಗೆಯೇ ವೈದಿಕ ಮತ್ತು ಅವೈದಿಕ ದೇವಿಯರನ್ನು ಅವರ ನಡುವಿನ ವ್ಯತ್ಯಾಸವನ್ನು ಗುರುತಿಸುತ್ತಾರೆ. ದುರ್ಗಾ (ದುರ್ಗೆ) ಮತ್ತು ಪಾರ್ವತಿ ಶಕ್ತಿ ಸಾಮರ್ಥ್ಯಗಳು ಇತಿಹಾಸದ ಉದ್ದಕ್ಕೂ ವೈದಿಕ ಸಂಸ್ಕೃತಿಯು ತನ್ನ ಯಜಮಾನ್ಯ ಉಳಿಸಿ ಬೆಳೆಸಿಲು ಅನುಸರಿಸಿದ ಸಾಂಸ್ಕೃತಿಕ ಮಾದರಿಯನ್ನು ತೋರಿಸುತ್ತದೆ. ಈ ಎರಡು ಸಂಗತಿಗಳು ಅಂಬೇಡ್ಕರ್ ತನ್ನ ಕಾಲದ. ಸಂದರ್ಭದ ಅಗತ್ಯತೆಯನ್ನು ಅನುಸರಿಸಿರುವುದು ಕಂಡು ಬರುತ್ತದೆ.

